

# ಕುವೆಂಪು
# ದರ್ಶನ ಸಂದರ್ಶನ

ಜಿ. ಟಿ. ನಾರಾಯಣರಾವ್

# ಕುವೆಂಪು ದರ್ಶನ ಸಂದರ್ಶನ

ಜಿ. ಟಿ. ನಾರಾಯಣರಾವ್




೨೦೦೪

ಅತ್ರಿ ಬುಕ್ ಸೆಂಟರ್

೪ ಶರಾವತಿ ಕಟ್ಟಡ ಬಲ್ಮಠ ಮಂಗಳೂರು ೫೭೫೦೦೧

ಸ್ಥಾಪನೆ ೧೯೭೫

# ಅರಿಕೆ

ಕುವೆಂಪು ಜನ್ಮಶತಮಾನೋತ್ಸವ ವರ್ಷದಲ್ಲಿ (೨೦೦೪) ಆ ಮಹಾಚೇತನಕ್ಕೆ ನಾವು (ಲೇಖಕ ನಾನು ಮತ್ತು ನಮ್ಮ ಮಗ ಅತ್ರಿ ಬುಕ್ ಸೆಂಟರಿನ ಮಾಲಿಕ ಜಿ. ಎನ್. ಅಶೋಕವರ್ಧನ) ಅರ್ಪಿಸುತ್ತಿರುವ ಗೌರವ ನುಡಿನಮನ **ಕುವೆಂಪು ದರ್ಶನ ಸಂದರ್ಶನ.**

ಪ್ರಾಜ್ಞ ವಾಚಕರು ಇದರಲ್ಲಿ ಮೂರು ನಿರ್ದಿಷ್ಟ, ಆದರೆ ಪರಸ್ಪರ ಪೂರಕ ಭಾಗಗಳನ್ನು ಗುರುತಿಸಬಹುದು: ಮೊದಲ ಲೇಖನದಲ್ಲಿ ಕುವೆಂಪುಮೋಡಿ ಹೇಗೆ ಬಾಲ್ಯದಲ್ಲೇ ನನ್ನನ್ನು ವಶೀಕರಿಸಿಕೊಂಡು ನನ್ನ ಮೇಲೆ ಪರೋಕ್ಷ ಪ್ರಭಾವ ಬೀರಿತು ಮತ್ತು ಮುಂದೆ ಕ್ರಮೇಣ ಪ್ರತ್ಯಕ್ಷ ಪ್ರೋತ್ಸಾಹವಿತ್ತು ಆಶೀರ್ವದಿಸಿತು ಎಂಬ ಅಂಶಗಳಿವೆ. ಪ್ರಸ್ತುತ ಕೃತಿಯ ಸಲುವಾಗಿಯೇ ಈ ಅಧ್ಯಾಯವನ್ನು ಬರೆದಿದ್ದೇನೆ: ಅನುಭಾವಿ ಸಂತಶಿರೋಮಣಿ ಅಕ್ಕಮಹಾದೇವಿಯವರ ವಚನ "ಅಕ್ಕ ಕೇಳವ್ವ ಅಕ್ಕಯ್ಯ, ನಾನೊಂದು ಕನಸ ಕಂಡೆ" ಇದರ ಹಿನ್ನೆಲೆ ಸ್ಫೂರ್ತಿ. ಕುವೆಂಪುಅವರ ಅಗ್ರಶಿಷ್ಯ ಮತ್ತು ಪ್ರಸಿದ್ಧ ಲೇಖಕ-ಸಂಶೋಧಕ-ಪ್ರತಿಭಾಶೋಧಕ-ಸಂಘಟಕ ಮತ್ತು ಸತತ "ಕನ್ನಡ ಡಿಂಡಿಮ" ಬಾರಿಸುವ ಹಾಗೂ "ಕನ್ನಡಕ್ಕಾಗಿ ಕೈ" ಎತ್ತಿ "ಕಲ್ಪವೃಕ್ಷ"ವನ್ನೇ ಸೃಷ್ಟಿಸುವ ದೇಜಗೌ ಹೇಗೆ ಅಜ್ಞಾತ ಅನಾಮಧೇಯನಾಗಿದ್ದ (೧೯೬೮-೬೯) ನನ್ನನ್ನು ಪತ್ತೆ ಹಚ್ಚಿ ಕನ್ನಡ ಕೈಂಕರ್ಯಕ್ಕೆ ನಿಯೋಜಿಸಿದರು ಎಂಬ ಸಂಗತಿಯನ್ನು ಸೂಕ್ಷ್ಮವಾಗಿ ಈ ಭಾಗದಲ್ಲಿ ರೇಖಿಸಿದ್ದೇನೆ.

ಮುಂದಿನ ಎರಡು ಲೇಖನಗಳು ಎರಡನೆಯ ಭಾಗಕ್ಕೆ ಸೇರಿದವು. ಇಲ್ಲಿ ವಿಜ್ಞಾನದ ಒಬ್ಬ ವಿದ್ಯಾರ್ಥಿಯಾಗಿ ನಾನು ಕುವೆಂಪುಅವರ ವ್ಯೋಮವಿಸ್ತಾರ ಚಿಂತನೆಯನ್ನು ಯಥಾಮತಿ ಯಥಾಶಕ್ತಿ ಗ್ರಹಿಸಿ ಯುಕ್ತ ನುಡಿಗಳಲ್ಲಿ ನಿರೂಪಿಸಿದ್ದೇನೆ. ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳಿವು, ಮಹಾಕವಿಯವರ ಗಭೀರ ಪ್ರತಿಭೆಯ ಮೇಲೆ ಬೀರಿದ ಕಿರುಹಣತೆಯ ಬೆಳಕು.

ಕುವೆಂಪುಅವರಿಗೆ ಬಲುಪ್ರಿಯವಾದ ವಿಜ್ಞಾನವಾಙ್ಮಯ ಮತ್ತು ವೈಜ್ಞಾನಿಕ ಮನೋಧರ್ಮಗಳಿಗೆ ಸಂಬಂಧಿಸಿದ ಪ್ರಬಂಧಗಳನ್ನು ಮೂರನೆಯ ಭಾಗದಲ್ಲಿ ಅಳವಡಿಸಿದೆ. ವಿಭಿನ್ನ ಶ್ರೋತೃಗಳ ಸಲುವಾಗಿ ವಿವಿಧ ಕಾಲಘಟಕಗಳಲ್ಲಿ ಇವನ್ನು ಬರೆದದ್ದು. ಪ್ರತಿಯೊಂದು ಲೇಖನವೂ ಸ್ವಯಂಪೂರ್ಣವಾಗಿದೆ. ಹೀಗಾಗಿ, ಒಟ್ಟಾರೆ ಪುಸ್ತಕದಲ್ಲಿ, ಹಲವೆಡೆ ಭಾವನೆಗಳ ಪುನರಾವರ್ತನೆಯಾಗಿದೆ. ಪ್ರಾಜ್ಞ ವಾಚಕರ ಸಹನೆ ಕೋರುತ್ತೇನೆ.

ಲೇಖನಗಳನ್ನು ಮೊದಲು ಪ್ರಕಟಿಸಿದ ಗ್ರಂಥ/ಪತ್ರಿಕೆ ಮತ್ತು ಇಸವಿಗಳನ್ನು ಪ್ರತಿಯೊಂದರ ಕೊನೆಯಲ್ಲಿ ಸೂಚಿಸಿದೆ. ಆಯಾ ಪ್ರಕಾಶಕರಿಗೆ ನಮ್ರ ಪ್ರಣಾಮಗಳು.

ಎಂದಿನಂತೆ ಹಸ್ತಪ್ರತಿಯನ್ನು ಗಣಕ-ಬೆರಳಚ್ಚಿಸಿದವರು ಸಿ. ಕೆ. ದೇವಿಕಾ, ಮುದ್ರಣ ಕರಡುಗಳನ್ನು ತಿದ್ದಿದಾಕೆ ಸೊಸೆ ರುಕ್ಮಿಣಿಮಾಲಾ, ಪುಸ್ತಕದ ಮುದ್ರಣ ಮತ್ತು ಒಟ್ಟಂದದ ಹೊಣೆಹೊತ್ತವರು ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನ ಮಾಲಿಕ-ಕಲಾವಿದ ಆರ್. ಎಸ್. ಮೋಹನಮೂರ್ತಿ ಮತ್ತು ಮುದ್ರಿಸಿದವರು ಇದೇ ಪ್ರೆಸ್ಸಿನ ಕಾರ್ಮಿಕ ಬಂಧುಗಳು. ಕುವೆಂಪುಅವರ ಭಾವವನ್ನು ಅರ್ಥಪೂರ್ಣವಾಗಿ ಬಿಂಬಿಸುವ ಅಪೂರ್ವ ಭಾವಚಿತ್ರವನ್ನು ಪ್ರೀತಿಯಿಂದ ಒದಗಿಸಿದವರು ನಾಡಿನ ಬಹುಮುಖಪ್ರತಿಭೆ ಪೂರ್ಣಚಂದ್ರ ತೇಜಸ್ವಿ. ಈ ನಿಟ್ಟಿನಲ್ಲಿ ಆತ್ಮೀಯ ಸಹಾಯವಿತ್ತವರು ಬಿ. ಎನ್. ಶ್ರೀರಾಮ. ಕುವೆಂಪುಭಾವಚಿತ್ರಕ್ಕೆ ಒಪ್ಪ ಓರಣವಿತ್ತು ಮುದ್ರಣಕ್ಕೆ ಅಣಿಗೊಳಿಸಿದಾತ ಮೊಮ್ಮಗ ಅಭಯಸಿಂಹ. ಮುಖಪುಟದ ಹಿನ್ನೆಲೆ ಚೆಲುವು ಮೋಹನ ಮೂರ್ತಿಯವರ ಕೊಡುಗೆ. ಈ ಎಲ್ಲ ಸಾಹಿತ್ಯ ಪರಿಚಾರಕರಿಗೂ "ಎದೆತುಂಬಿ ಹಾಡುವೆನು" ಕೃತಜ್ಞತೆ.

೩೧-೧೨-೨೦೦೪

**ಜಿ. ಟಿ. ನಾರಾಯಣರಾವ್**

# ಒಳಪಿಡಿ



## ಕನ್ನಡ ದೀಕ್ಷೆ

ಕನ್ನಡಕ್ಕಾಗಿ ಕೈಯೆತ್ತು; ನಿನ್ನ ಕೈ ಕಲ್ಪವೃಕ್ಷವಾಗುತ್ತದೆ! ಕನ್ನಡಕ್ಕಾಗಿ ಕೊರಳೆತ್ತು; ಅಲ್ಲಿ ಪಾಂಚಜನ್ಯ ಮೂಡುತ್ತದೆ! ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು ಇಂದು ಅದೆ ಗೋವರ್ಧನ ಗಿರಿಧಾರಿ ಯಾಗುತ್ತದೆ...

ನಾನು ಅವಧೂತನಾಗಿ ಹೋಗುವುದಿಲ್ಲ. ಕನ್ನಡವು ತನ್ನ ಸ್ಥಾನವನ್ನು ಅಧಿಕೃತವಾಗಿ ಪಡೆಯುವ ತನಕ, ನನ್ನ ಪ್ರಾಣವಿರುವ ತನಕ ಕನ್ನಡಕ್ಕಾಗಿ ದುಡಿಯುವುದು, ಕನ್ನಡಕ್ಕಾಗಿ ದುಡಿಯಲು ವ್ಯಕ್ತಿಗಳನ್ನು ಪ್ರಚೋದಿಸುವುದು, ಅದಕ್ಕಾಗಿ ಭಗವಂತನಲ್ಲಿ ಮೊರೆಯಿಡುವುದು ಮಾಡುತ್ತೇನೆ. ನನ್ನೆಲ್ಲ ತಪಶ್ಶಕ್ತಿ ಯನ್ನು ಅಥವಾ ಪ್ರಾರ್ಥನಾಶಕ್ತಿಯನ್ನು ಕನ್ನಡದ ಸೇವೆಗಾಗಿ ಮೀಸಲಿಡುತ್ತೇನೆ... ಹೇ ರಾಜಕಾರಣಿ, ಹೇ ಮಂತ್ರಿವರೇಣ್ಯ, ಹೇ ಅಧಿಕಾರಿ ಸರ್ವೋತ್ತಮ, ಹೇ ವಣಿಗ್ವರ, ಹೇ ಶ್ರಮಜೀವಿ, ಹೇ ಅಧ್ಯಾಪಕ ಮಹಾಶಯ, ಓ ನೇಗಿಲಯೋಗಿ, ನೀನು ಯಾರೆ ಆಗಿರು, ಎಲ್ಲಿಯೆ ಇರು, ಕನ್ನಡವನ್ನು ಕೈಬಿಡದಿರು... ಇದು ನಿನ್ನ ಭಾಷೆ; ಇದು ದೇಶಭಾಷೆ; ಇದು ಸಾವಿರಾರು ವರ್ಷಗಳ ಸುಪುಷ್ಟ ಸಾಹಿತ್ಯ ಭಾಷೆ; ಇದು ಮಹಾಕವಿಗಳನ್ನೂ ಶಿಲ್ಪಿಗಳನ್ನೂ ರಾಜಾಧಿರಾಜರನ್ನೂ ವೀರಾಧಿವೀರರನ್ನೂ ರಸಋಷಿದಾರ್ಶನಿಕ ರನ್ನೂ ಪಡೆದಿರುವ ಭಾಷೆ.... ನಿನ್ನ ತಾಯಿ ರಾಣಿಯಾಗಿದ್ದಳೆಂಬುದನ್ನು ಮರೆತುಬಿಡುವೆಯ? ಸ್ವತಂತ್ರನಾದ ಮೇಲೆಯೂ ಆಕೆಯನ್ನು ತೊತ್ತಾಗಿರಿಸುವೆಯ?

**—ಕುವೆಂಪುವಾಣಿ (೧೯೭೪)**

ವರ್ತಮಾನ ಪರಿಸ್ಥಿತಿ (೨೦೦೪) ಸುಧಾರಿಸಿದೆಯೇ?

# ನಾನೊಂದು ಕನಸ ಕಂಡೆ

## ಕುವೆಂಪು ಮೋಡಿ

೧೯೩೦-೪೦ರ ದಶಕ. ಸ್ಥಳ ಮಡಿಕೇರಿ—"ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ!" ಆ ಕಾವೇರಿನಾಡಿನ ರಾಜಧಾನಿ. ಅಲ್ಲಿ ನಾನಂದು ಪ್ರಾಥಮಿಕ-ಮಾಧ್ಯಮಿಕ ಶಾಲಾವಿದ್ಯಾರ್ಥಿ. ನಮ್ಮ ಕನ್ನಡ ಗುರು ಜಿ. ಎಸ್. ಕೇಶವಾಚಾರ್ಯರು ಪದ್ಯ ಗಳನ್ನು ಸುಶ್ರಾವ್ಯವಾಗಿ ಹಾಡಿ, ಅರ್ಥ ವಿವರಿಸಿ, ಕವಿಯ ಬಗ್ಗೆ ನಾಲ್ಕು ನುಡಿ ಹೇಳಿ ನಮ್ಮನ್ನು ಬೇರೊಂದು ಲೋಕಕ್ಕೆ ಒಯ್ಯುತ್ತಿದ್ದ ಸುದಿನಗಳು. ಅಂದು ಅವರು ಬಿತ್ತಿದ ಬೀಜ ಇಂದು ನಾಡಿಗೆ ಸಮೃದ್ಧ ಬೆಳೆ ನೀಡುತ್ತಿರುವುದನ್ನು ಗಮನಿಸುವಾಗ ಹೃದಯ ತುಂಬಿ ಬಂದು "ಅಂದರಿಕಿ ವಂದನಮುಲು" ಎನ್ನುತ್ತ ಶಿರಬಾಗುತ್ತದೆ.

ಆ ಒಂದು ಮುಂಜಾನೆ ಅವರು ರಾಗಲಯಸಹಿತ ಎರಡು ಕವನಗಳನ್ನು ಹಾಡಿದರು: "ಮಲೆನಾಡಿನ ಗಿರಿ ಬನಗಳ ಮೇಲೆ ಬಾಲ ದಿನೇಶನ ಕೋಮಲ ಲೀಲೆ" ಮತ್ತು "ಅಡಿಯ ಗೆಜ್ಜೆ ನಡುಗೆ ಹೆಜ್ಜೆಯಿಡುತ ಸುಗ್ಗಿ ಬರುತಿದೆ, ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗ ಸೊಗವ ತರುತಿದೆ!" ಅರ್ಥ-ಭಾವ-ಲಯಗಳ ಸುಂದರ ಮಿಲನಕ್ಕೆ ಗುರುಗಳ ಮಧುರ ಶಾರೀರ ಮೋಡಿ ಬೆಸೆದಿತ್ತು. ಶಾಸ್ತ್ರೀಯ ಸಂಗೀತಪರಿಸರದ ಶಿಶುವಾದ ನಾನಂತೂ ಉತ್ಸಾಹದಿಂದ ಕುಣಿದಾಡಿಬಿಟ್ಟೆ.

ಹೌದಲ್ಲ! ನನ್ನ ಸುತ್ತಮುತ್ತಲಿನ ನಿಸರ್ಗಸಮೃದ್ಧಿಯನ್ನೇ ಈ ಕವನಗಳು ಪ್ರತಿಮಿಸು ತ್ತಿವೆ! ನಾನೂ ಬರೆದೆ ಅಥವಾ ಹೊಸೆದೆ, "ಮಡಿಕೇರಿಯ ಕೆರೆ ತೊರೆಗಳ ಮೇಲೆ ಹುಣ್ಣಿಮೆ ಚಂದ್ರನ ಕಚಗುಳಿ ಲೀಲೆ," "ಮುಡಿಯ ಮಾಲೆ ನಡುಗೆ ಬಾಲೆ ಅಡಿಯನಿಡುತ ಬರುವಳು, ಬೆಡಗಿ ಬಂದು ಹರುಷ ತಂದು ಸಡಗರದಲಿ ನಲಿವಳು!" ಹೀಗೆ ಬೆಳೆದ ನಾನು ಮಾಧ್ಯಮಿಕ ತರಗತಿಗೆ ದಾಖಲಾದಾಗ ಬಂದನು "ಬೊಮ್ಮನ ಹಳ್ಳಿಯ ಕಿಂದರಿ ಜೋಗಿ!"

"ಆಧುನಿಕ ಕನ್ನಡದ ಒಬ್ಬ ತರುಣ ಕವಿ ಕೆ. ವಿ. ಪುಟ್ಟಪ್ಪನವರ ಕವನವಿದು. ಮೈಸೂರು ಅವರ ವಾಸಸ್ಥಾನ, ವಿಶ್ವವಿದ್ಯಾನಿಲಯದಲ್ಲಿ ಹಿರಿಯ ಪ್ರಾಧ್ಯಾಪಕರು. ಕವನಗಳ ಜೊತೆಗೆ ಕಥೆ, ಕಾದಂಬರಿ, ನಾಟಕ ಮುಂತಾದವನ್ನೂ ಬರೆದಿರುವರು" ಎಂದು ಮುಂತಾಗಿ ಗುರು ಗಳು ಕವಿಯ ಬಗ್ಗೆ ಹೇಳಿದಾಗ 'ಅಕ್ಕ ಕೇಳವ್ವ ನಾನೊಂದು ಕನಸ ಕಂಡೆ!' ಆ ಹದಿ ಹರೆಯದ ದಿನಗಳಂದು ನಾನೊಬ್ಬ ಕುವೆಂಪು-ಆರಾಧಕನಾಗಿಬಿಟ್ಟೆ. ಶಾಲೆಯಲ್ಲಿಯ ಗುರು ಗಳ ಜೊತೆಗೆ ನಮ್ಮ ನೆರೆಮನೆಯಲ್ಲಿದ್ದ ಗಮಕಿ ಮೈ. ಶೇ. ಅನಂತಪದ್ಮನಾಭರಾಯರಿಂದ ಕೂಡ ನನ್ನ ಸಾಹಿತ್ಯಾಸಕ್ತಿಗೆ ವಿಶೇಷ ಪ್ರೋತ್ಸಾಹ ಪೋಷಣೆ ದೊರೆತುವು. ಎಸ್‌ಎಸ್‌ಎಲ್‌ಸಿ ದಾಟುವ ಮೊದಲೇ ಆಗ (೧೯೪೨) ಲಭ್ಯವಿದ್ದ ಎಲ್ಲ ಕುವೆಂಪು-ಕೃತಿ ಗಳನ್ನೂ ಓದಿ ಮುಗಿಸಿದ್ದೆ, ಅವರ ಕವನಗಳೆಲ್ಲವೂ ಕಂಠಗತವಾಗಿದ್ದುವು. ನಾನೂ ಹುಚ್ಚಾ ಬಟ್ಟೆ ಪದ್ಯ, ಕಥೆ, ಪ್ರಬಂಧ ಮುಂತಾದವನ್ನು ಬರೆದು ಒಬ್ಬ ಬಾಲಕವಿ (ಅಬಾಲ ಕಪಿ) ಎಂಬ ಬಿರುದಿಗೆ ಪಾತ್ರನಾಗಿದ್ದೆ! ಸಮಕಾಲೀನ ದಿಗ್ಗಜಗಳಾಗಿದ್ದ ಡಿವಿಜಿ, ಮಾಸ್ತಿ, ಕಾರಂತ, ಬೇಂದ್ರೆ, ಕಡೆಂಗೋಡ್ಲು, ಪುತಿನ, ವಿಸೀ, ರತ್ನ ಮೊದಲಾದವರ ಕೃತಿಗಳನ್ನು ಓದಿದ್ದೆನಾದರೂ ಕುವೆಂಪು ತೆರದಲ್ಲಿ ನನ್ನನ್ನು ವಶೀಕರಿಸಿಕೊಂಡು ಸ್ವಾಂಗೀಕರಿಸಿದ

ಲೇಖಕರು ಇನ್ನೊಬ್ಬರಿರಲಿಲ್ಲ; ಅವರಂತೆ ನನ್ನ ಪರಿಸರದ, ಭಾವದ, ಜನರ ಮತ್ತು ರುದ್ರ ರಮಣೀಯದೃಶ್ಯಗಳ ಚಿತ್ರಣ ಇನ್ನಾರೂ ಮೂಡಿಸಿರಲಿಲ್ಲ. ನನ್ನ ಕನ್ನಡ ಶೈಲಿಯಲ್ಲಿ ಅವರ ಛಾಪು ಇದ್ದೇ ಇದೆ. ಅವರ ನೇರ ಶಿಷ್ಯ ಜಿಎಸ್‌ಎಸ್ (ನಾನು ಏಕಲವ್ಯ ಶಿಷ್ಯ) ಈ ಭಾವನೆಗೆ ನುಡಿಯೊಡಲು ಕೊಟ್ಟಿದ್ದಾರೆ, "ನಕ್ಷತ್ರಖಚಿತ ನಭವಾಗಿ ತಬ್ಬಿಕೊಂಡಿದ್ದೀರಿ ನನ್ನ ಸುತ್ತ, ಪಟ ಬಿಚ್ಚಿ ದೋಣಿಯನ್ನೇರಿ ಕುಳಿತಿದ್ದೇನೆ ನೀವಿತ್ತ ಹೊಸ ಹುಟ್ಟುಗಳ ಹಾಕುತ್ತ."

**ಕುವೆಂಪು ವಾಣಿ**

ಮುಂದಿನ ದಿನಗಳಲ್ಲಿ ನಾನು ಕವಿಯಲ್ಲವೆಂದು ಅರಿತೆ. ಸಣ್ಣ ಕಥೆ ಬರೆದೆ, 'ಜೀವನ,' 'ಜಯಂತಿ,' 'ಕರ್ಮವೀರ' ಮುಂತಾದ ಅಂದಿನ (೧೯೪೧-೫೦ರ ದಶಕ) ಪ್ರಸಿದ್ಧ ಪತ್ರಿಕೆಗಳಲ್ಲಿ ಅವು ಬೆಳಕು ಕಂಡುವು. ಅಲ್ಲಿಯೂ ಕುವೆಂಪು-ಪ್ರಭಾವ ಮುಂದುವರಿದಿತ್ತು: "ಎಷ್ಟೊಂದು ಕೀಲಿ ಕೈಗಳನು ದಾನ ಮಾಡಿದ್ದೀರಿ ವಾತ್ಸಲ್ಯದಿಂದ ; ನಾನರಿಯದನೇಕ ಬಾಗಿಲುಗಳನು ತೆರೆದಿದ್ದೀರಿ ನನ್ನೊಳಗೆ; ಕಟ್ಟಿ ಹರಸಿದ್ದೀರಿ ಕನ್ನಡದ ಕಂಕಣವನ್ನು ಕೈಗೆ." ಈ ಕ್ಷೇತ್ರದಲ್ಲಿಯೂ ಭ್ರಮನಿರಸನಗೊಂಡಾಗ (೧೯೪೯) ಅಂದು ಕನ್ನಡದಲ್ಲಿ ಬಹುತೇಕ ಕನ್ನೆನೆಲವಾಗಿದ್ದ ಜನಪ್ರಿಯ ವಿಜ್ಞಾನವಾಙ್ಮಯ ರಚನೆಗೆ ದುಮುಕಿದೆ. ಏಕೆಂದರೆ, ಮತ್ತೆ ಜಿಎಸ್‌ಎಸ್ ಬರೆದಿರುವಂತೆ, "ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ, ಹಾಡುವುದು ಅನಿವಾರ್ಯ ಕರ್ಮ ನನಗೆ."

ನನ್ನ ಕಾಲೇಜ್ ಶಿಕ್ಷಣ, ತರುವಾಯದ ವೃತ್ತಿ ಎಲ್ಲವೂ ಅಂದಿನ ಮೈಸೂರು ರಾಜ್ಯದ ಹೊರಗೆ ನಡೆದುವು. ಪೂರ್ತಿ ಇಂಗ್ಲಿಷ್ ಮಾಧ್ಯಮ. ಗಣಿತದಲ್ಲಿ ಸ್ನಾತಕೋತ್ತರ ಪದವಿ (೧೯೪೭). ಹೀಗಾಗಿ ಕುವೆಂಪುದರ್ಶನ ೧೯೫೦ರ ದಶಕದ ತನಕವೂ ಈ ಏಕಲವ್ಯನಿಗೆ ಲಭಿಸಲಿಲ್ಲ. ನಾನೇ ಮೈಸೂರಿಗೆ ಹೋಗಿ ಅವರನ್ನು ಕಂಡು ಧನ್ಯನಾಗಲು ಅಳುಕು, ಅಂಜಿಕೆ, ಹಿಂಜರಿಕೆ ಎಲ್ಲ ಅಡ್ಡ ಬಂದುವು. ಇಷ್ಟಾಗುವಾಗ ಕರ್ನಾಟಕ ರಾಜ್ಯೋದಯವಾಯಿತು, ನವಂಬರ್ ೧, ೧೯೫೬. ಆಗ ನಾನು ಮಡಿಕೇರಿ ಸರ್ಕಾರಿ ಕಾಲೇಜಿನಲ್ಲಿ ಗಣಿತೋಪನ್ಯಾಸಕನಾಗಿದ್ದೆ. ಆ ತನಕ ಮದ್ರಾಸು ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾಗಿದ್ದ ನಮ್ಮ ಕಾಲೇಜು ಅಂದು ಮೈಸೂರು ವಿಶ್ವವಿದ್ಯಾನಿಲಯದೊಂದಿಗೆ ವಿಲೀನಗೊಂಡಿತು. ಮರುವರ್ಷದ ವಾರ್ಷಿಕೋತ್ಸವಕ್ಕೆ ಕುಲಪತಿ ಕುವೆಂಪು ಅವರೇ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು—ನನ್ನ ಆನಂದದ ಚಷಕ ತುಂಬಿತ್ತು.

ಆ ಒಂದು ತಾಸಿಗೂ ಮೀರಿದ ಅವರ 'ಋಷಿವಾಕ್ಯ-ವಿಜ್ಞಾನಕಲೆ' ಮಧುರಮೇಳನ ನಮಗೆ ನೀಡಿದ ಸಂದೇಶ ಮುಖ್ಯವಾಗಿ ಎರಡು: ೧. ಋಜು ಸಂಸ್ಕೃತಿ ಇರುವುದು ಆಂತರಿಕ ಶೀಲದಲ್ಲಿ, ಬಾಹ್ಯ ಪ್ರದರ್ಶನದಲ್ಲಿ ಅಲ್ಲ. ಒಬ್ಬ ನಾಪಿತ ಮತ್ತೊಬ್ಬ ಅಗಸ ಯಾರನ್ನೂ ನಾಗರಿಕನನ್ನಾಗಿ ಮಾರ್ಪಡಿಸಬಲ್ಲರು, ಆದರೆ ಸುಸಂಸ್ಕೃತನನ್ನಾಗಿ ಎಂದೂ ಅಲ್ಲ. ೨. ಬದುಕು ಪರಂಪರೆ-ವಿಜ್ಞಾನ-ಕಲೆ ಇವುಗಳ ಮಧುರ ಸಂಯುಕ್ತ ಆಗಬೇಕು, ಇಲ್ಲವಾದರೆ ಅದು ಬರಡು ಕೊರಡಾಗುತ್ತದೆ.

**ಕನ್ನಡಕ್ಕಾಗಿ ಕೈಯೆತ್ತು**

ಕನ್ನಡದ ದಿವ್ಯ ಮಂತ್ರವನ್ನು ನಮಗೆಲ್ಲರಿಗೂ (ಇಂಗ್ಲಿಷೇ ಸರ್ವಸ್ವ, ಕನ್ನಡ ಅಡುಗೆ

ಮನೆ ಭಾಷೆ ಎಂದು ಬೀಗುತ್ತಿದ್ದವರಿಗೆಲ್ಲ) ಅವರು ಉಪದೇಶಿಸಿದ ಪರಿ ನನಗೆ ವಿಜ್ಞಾನ ವಾಙ್ಮಯ ನಿರ್ಮಾಣ ರಂಗದಲ್ಲಿ ಪ್ರಯೋಗಮಾಡಲು "ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ" ಎಂಬ ಪಾಂಚಜನ್ಯ ಮೊಳಗಾಯಿತು.

ಜೀವನ ಪ್ರವಾಹ ನನ್ನನ್ನು ಬೆಂಗಳೂರು ಸರ್ಕಾರೀ ಕಾಲೇಜ್ ದಂಡೆಗೆ ಎಸೆಯಿತು (೧೯೬೫). ಆ ವಿಯದ್ವಿಸ್ತೀರ್ಣ ಮತ್ತು ಬೃಹದವಕಾಶಗಳಲ್ಲಿ ನಾನು ಅಧಿಕ ಉತ್ಸಾಹದಿಂದ ವಿಜ್ಞಾನ ಲೇಖನ, ಪುಸ್ತಕರಚನೆ, ಪ್ರಚಾರೋಪನ್ಯಾಸ ಮುಂತಾದ ಕನ್ನಡದ ಕೆಲಸಗಳಲ್ಲಿ ಉದ್ಯುಕ್ತನಾದೆ. ಏಕೆ? ಈ ಪರಿಚಾರಿಕೆಯಲ್ಲಿ ಅಯಾಚಿತವಾಗಿ ಲಭಿಸುತ್ತಿದ್ದ ಅವ್ಯಕ್ತ ಆನಂದವೊಂದೇ ನನ್ನ ಗಮ್ಯ. ಇಷ್ಟಾಗುವಾಗ ೧೯೬೮ ಬಂದೇಬಂದಿತು. ನನಗಾಗ ಪ್ರಾಯ ೪೨, ಹೆಂಡತಿ ಮತ್ತು ಮೂರು ಮಕ್ಕಳ ಸಂಸಾರ, ಕಡಿಮೆ ಸಂಬಳ, 'ಬಾಡಿಗೆಯ ಕೊಟ್ಟು ಭಾಗೀರಥಿ' ದಾಟುತ್ತಿದ್ದ ದಿನಗಳು.

ಆ ಮಧ್ಯಾಹ್ನ ಪಾಠ ಮುಗಿಸಿ ಕೊಠಡಿಗೆ ಮರಳಿದಾಗ ನಾನೊಬ್ಬ ದಿಢೀರ್ ಪರಮಗಣ್ಯ (celebrity) ಆಗಿಬಿಟ್ಟಿದ್ದೆ: "ಪ್ರೊಫೆಸರ್ ದೇ. ಜವರೇಗೌಡರು ನಿಮ್ಮನ್ನು ನೋಡಲೆಂದು ಇಲ್ಲಿಗೆ ಬಂದಿದ್ದರು. ಸೆಂಟ್ರಲ್ ಕಾಲೇಜ್ ಗ್ರಂಥಾಲಯದಲ್ಲಿ ಅವರನ್ನು ನೀವು ಒಡನೆ ಹೋಗಿ ನೋಡಬೇಕೆಂದು ಸೂಚಿಸಿದ್ದಾರೆ. ಏನು ವಿಶೇಷ?" ನನ್ನ ಸಹೋದ್ಯೋಗಿಗಳಂತೆ ನಾನೂ ವಿಸ್ಮಿತನಾಗಿದ್ದೆ.ಆ ಕನ್ನಡದ ಸೇನಾನಿ ಕುರಿತು ನನಗೆ ತಿಳಿದಿತ್ತು. ನಾವೆಂದೂ ಭೇಟಿ ಆಗಿರಲಿಲ್ಲ. ಅವರೇಕೆ ನನ್ನನ್ನು ಅರಸಿ ಬಂದರು?

ಅಲ್ಲಿ ಸೆಂಟ್ರಲ್ ಕಾಲೇಜಿನ ಸೊಂಪು ಮರಗಳ ತಂಪಿನಲ್ಲಿ ನಾವು ಕುಳಿತೆವು. ಅವರು ಅತ್ಯಂತ ಆತ್ಮೀಯತೆಯಿಂದ ಕನ್ನಡ ವಿಶ್ವಕೋಶದ ಕಥೆಯನ್ನು ಹೇಳಿದರು. ಸಾರಾಂಶ ವಿಷ್ಟು: ಕುವೆಂಪುಅವರ ಸೂಚನಾನುಸಾರ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಈ ಯೋಜನೆಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿತು (೧೯೫೪); ಸರ್ಕಾರ ಕೂಡಲೇ ಇದನ್ನು ಅಂಗೀಕರಿಸಿ ಶಿಕ್ಷಣ ಇಲಾಖೆಯಲ್ಲಿ ಇದರ ನಿರ್ವಹಣೆಗೆಂದೇ ಪ್ರತ್ಯೇಕ ವಿಭಾಗ ಆರಂಭಿಸಿ ಮುನ್ನಡೆಯಲು ಅಣತಿ ನೀಡಿತು; ಸುಮಾರು ೧೦ ವರ್ಷಗಳು ಸಂದುವು, ಅಷ್ಟೇ ಲಕ್ಷ ರೂಪಾಯಿಗಳು ವೆಚ್ಚವಾದುವು, ದಫ್ತರಗಳು ಬೆಳೆದುವು, ಸಿಬ್ಬಂದಿ ಸಂಖ್ಯೆ ಏರಿತು, ಆದರೆ ವಿಶ್ವಕೋಶ ಮಾತ್ರ ಪ್ರಕಟವಾಗಲಿಲ್ಲ! ಪ್ರಸ್ತುತ (೧೯೬೮) ಸರ್ಕಾರ ಇಡೀ ಯೋಜನೆಯನ್ನು ಕನ್ನಡ ಅಧ್ಯಯನ ಸಂಸ್ಥೆಗೆ ನಿರ್ವಹಣಾರ್ಥ ವರ್ಗಾಯಿಸಿದೆ.

"೧೯೬೯ ಕೊನೆಗೊಳ್ಳುವ ಮೊದಲೇ ನಾವು ಪ್ರಥಮ ಸಂಪುಟ ಪ್ರಕಟಿಸಿಯೇ ತೀರುವೆವು ಎಂದು ಸರ್ಕಾರಕ್ಕೆ ಆಶ್ವಾಸನೆ ನೀಡಿದ್ದೇವೆ. ನೀವು ಈ ಮಹಾಯೋಜನೆಯ ವಿಜ್ಞಾನಸಂಪಾದಕರಾಗಿ ನಿಮ್ಮ ಷರತ್ತಿನ ಪ್ರಕಾರ ನಮ್ಮಲ್ಲಿಗೆ ಬಂದು ಸಹಕರಿಸಬೇಕು. ಕುವೆಂಪು, ಕಾರಂತ, ಹರಿದಾಸಭಟ್ಟ, ಲಕ್ಷ್ಮಣರಾವ್ ಎಲ್ಲರೂ ನೀವೇ ಈ ಕೆಲಸಕ್ಕೆ ತಕ್ಕವರು ಎಂದಿದ್ದಾರೆ."

ದೇಜಗೌಅವರ ಸ್ವಚ್ಛ ಮತ್ತು ಅಕೃತ್ರಿಮ ಆತ್ಮೀಯತೆಗೆ ನಾನು ಹೆಚ್ಚು ಮನ ಸೋತೆನೋ ಕುವೆಂಪು ನಾಮಕ್ಕೆ ಮಣಿದೆನೋ ಹೇಳಲಾರೆ: "ಕುಮ್ಮಕ್ಕು ಕೊಟ್ಟಾಗ ಕಪಿ ಕಡಲ ಜಿಗಿಯುವುದು" ಎಂಬಂತೆ ಆಯಿತು ನನ್ನ ಮನಃಸ್ಥಿತಿ.

**ಕುವೆಂಪು ದರ್ಶನ**

೧೯೬೯ ಜೂನ್ ೧೭ರಂದು ನಾನು ಹೊಸ ನೆಲ, ಹಸಿ ಹೊಲ, ಅರಿಯದ ಕೆಲಸ ಎಲ್ಲವನ್ನೂ ಸ್ವಾಗತಿಸಲು ಅಧ್ಯಯನ ಸಂಸ್ಥೆಯ ವಿಶ್ವಕೋಶ ವಿಭಾಗದಲ್ಲಿ ದಾಖಲಾದೆ. ದೇಜಗೌ ಆ ಸಂಸ್ಥೆಯ ನಿರ್ದೇಶಕರು ಮತ್ತು ಪದನಿಮಿತ್ತ ವಿಶ್ವಕೋಶದ ಪ್ರಧಾನ ಸಂಪಾದಕರು. ಹಾ. ಮಾ. ನಾಯಕರು ಸಂಪಾದಕ ಮಂಡಳಿಯ ವರಿಷ್ಠ ಸದಸ್ಯ ಮತ್ತು ದೇಜಗೌ ಅವರ ಬಲಗೈ.

ಅದೇ ತರುಣದಲ್ಲಿ ಹಾಮಾನಾ ನನಗೆಂದರು, "ನೀವು ನಮ್ಮ ಸಂಸ್ಥೆ ಸೇರಿದ್ದನ್ನು ಕೇಳಿ ಕುವೆಂಪು ತುಂಬ ಹರ್ಷಿಸಿ 'ಇನ್ನು ವಿಶ್ವಕೋಶ ಖಂಡಿತ ಪ್ರಕಟವಾಗಿಯೇ ಆಗುತ್ತದೆ, ಕನ್ನಡದ ಹಿರಿಮೆಯನ್ನು ಸಾರಿಯೇ ಸಾರುತ್ತದೆ!' ಎಂದರು. ಅವರಿಗೆ ಹೇಗೆ ನಿಮ್ಮ ಪರಿಚಯ?"

"ನನಗೆ ತಿಳಿಯದು. ಅವರಲ್ಲಿಗೆ ಕರೆದೊಯ್ಯುವಿರಾ?"

ಅಂದು ಸಂಜೆ ನನ್ನ ಹಲವು ದಶಕಗಳ ಕನಸು 'ಉದಯರವಿ'ಯಲ್ಲಿ ನನಸಾಯಿತು. ಋಷಿ ಸಾನ್ನಿಧ್ಯದಲ್ಲಿ ಮಾತು ಮೂಕವಾಯಿತು. ನನ್ನ ವಿಜ್ಞಾನಲೇಖನಗಳನ್ನೂ ಪುಸ್ತಕಗಳನ್ನೂ ತಾವು ಓದಿ ಸವಿದ ಮಧುರ ಕ್ಷಣಗಳನ್ನು ಅವರು ವಿವರಿಸುವಾಗ ನಾನು ನಾಚಿ ನೀರಾದೆ. "ಆಶೀರ್ವಾದ" ಎಂದು ಮತ್ತೆ ಮತ್ತೆ ಹೇಳುವುದೊಂದೇ ನನಗಿದ್ದ ಹಾದಿ. ತಾವು ಜೇಮ್ಸ್ ಜೀನ್ಸ್, ಜಾರ್ಜ್ ಗಾಮೋ, ಆರ್ಥರ್ ಎಡಿಂಗ್ಟನ್ ಮೊದಲಾದ ಮುಂಚೂಣಿ ಇಂಗ್ಲಿಷ್-ವಿಜ್ಞಾನ-ಜನಪ್ರಿಯ ಲೇಖಕರ ಕೃತಿಗಳನ್ನು ಓದಿ ಮೆಚ್ಚಿರುವುದನ್ನು ಉಲ್ಲೇಖಿಸುವಾಗ ಮಣಿದೆನಾ ವಿಶ್ವಕವಿಯ ವಿಸ್ತಾರ ದರ್ಶನಕ್ಕೆ. "ಆರ್. ಎಲ್. ನರಸಿಂಹಯ್ಯನವರ ಮಾರ್ಗದಲ್ಲಿ ನೀವು ನಡೆಯುತ್ತಿರುವುದು ನನಗೆ ತುಂಬ ಪ್ರಿಯವಾಗಿದೆ. ವಾಸ್ತವವಾಗಿ ವಿಜ್ಞಾನಲೇಖಕನೊಬ್ಬ ಸಾಹಿತ್ಯದಲ್ಲಿಯೂ ಸಾಕಷ್ಟು ಪ್ರವೀಣನಾಗಿದ್ದಾಗ ಮಾತ್ರ ಇದು ಸಾಧ್ಯ" ಎಂದು ಖಚಿತ ನೀಲನಕ್ಷೆಯನ್ನೇ ನನ್ನೆದುರು ಬಿಡಿಸಿಟ್ಟರು. ಯುಗಪ್ರಜ್ಞೆ ವರ್ತಿಸುವ ಧಾಟಿ ಅದು—ಸಂಕ್ಷೇಪದಲ್ಲಿ ವಿಸ್ತಾರ ದರ್ಶನ, 'ಕಿರಿದರೊಳ್ ಪಿರಿದರ್ಥ.'

ನವಂಬರ್ ೧೯೬೯ರಲ್ಲಿ ದೇಜಗೌ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿಯೂ ಹಾಮಾನಾ ವಿಶ್ವಕೋಶದ ಪ್ರಧಾನ ಸಂಪಾದಕರಾಗಿಯೂ ಅಧಿಕಾರ ಸ್ವೀಕರಿಸಿದರು. ಅದೇ ವೇಳೆಗೆ ಕಳಶಪ್ರಾಯವಾಗಿ ವಿಶ್ವಕೋಶದ ಒಂದನೆಯ ಸಂಪುಟ ಪ್ರಕಟವೂ ಆಯಿತು! 'ಬಾರಿಸು ಕನ್ನಡ ಡಿಂಡಿಮವ ಹೇ ಕರ್ನಾಟಕ ಹೃದಯ ಶಿವ' ಧ್ವನಿ ಎಲ್ಲೆಲ್ಲೂ ಮೊಳಗಿತು. ಭಾರತೀಯ ಭಾಷೆಗಳಲ್ಲಿ ಕನ್ನಡವೇ ಈ ವಿಕ್ರಮ ಸಾಧಿಸಿದ ಮೊದಲನೆಯದು.

**ಕುವೆಂಪು ಮತ್ತು ವಿಜ್ಞಾನ**

ಆಧುನಿಕ ವಿಜ್ಞಾನ ವಿಚಾರಗಳಲ್ಲಿ ಕುವೆಂಪು ಅವರಿಗೆ ಅಪಾರ ಆಸಕ್ತಿ. ೧೯೫೦-೭೦ರ ದಶಕಗಳಲ್ಲಿ ಅಭಿವರ್ಧಿಸಿದ ಆಕಾಶಯಾನದ ಬಗ್ಗೆ ವಿಶೇಷ ಕುತೂಹಲಿಗಳಾಗಿದ್ದರು. ಚಂದ್ರನ ಮೇಲೆ ಮಾನವ ಮೊದಲ ಬಾರಿಗೆ ಕಾಲೂರಿದ ಇತಿಹಾಸಪ್ರವರ್ತಕ ಯಶೋಗಾಥೆಯನ್ನು—"ಇದು ಒಬ್ಬ ವ್ಯಕ್ತಿಗೆ ಬಲು ಪುಟ್ಟ ಹೆಜ್ಜೆ, ಆದರೆ ಮನುಕುಲಕ್ಕೆ ಹನುಮಂತ

ಲಂಘನ'' (ಚಂದ್ರತಳದಿಂದ ನೀಲ್ ಆರ್ಮ್‌ಸ್ಟ್ರಾಂಗ್, ೨೧-೭-೧೯೬೯, ಉದ್ಗರಿಸಿದ ನುಡಿ)—ಸವಿಸ್ತಾರವಾಗಿ ವಿವರಿಸಿದ ಪ್ರಥಮ ವಿಶ್ವಕೋಶ ನಮ್ಮದು! ಇದನ್ನು ಆಮೂಲಾಗ್ರ ಓದಿ ಮೆಚ್ಚಿದ ಮಹಾಕವಿ ನನಗೆ ವೈಯಕ್ತಿಕವಾಗಿ ಅಭಿನಂದನೆ ಹೇಳಿದರು. ''ನಮ್ಮ ಸಂಪಾದಕ ಮಂಡಳಿಯ ಸಂಯುಕ್ತ ಯಶಸ್ಸಿದು'' ಎಂದೆ. ನಿಜಕ್ಕೂ ಯಾವುದೇ ಮಹಾ ಕಾರ್ಯ ಹಲವಾರು ಯೋಚನೆ-ಯೋಜನೆ-ಚಿಂತನ-ಮಂಥನಗಳ ಪರಮ ಫಲ, ಅಲ್ಲವೇ?

ಮುಂದೆ ಅವರಿಗೆ ವಿಜ್ಞಾನವಿಚಾರಗಳಲ್ಲಿ ಸಂದೇಹ ಬಂದಾಗ ನನಗೆ ಹೇಳಿ ಕಳುಹಿಸುತ್ತಿದ್ದರು, ಇಲ್ಲವೇ ದೂರವಾಣಿಸುತ್ತಿದ್ದರು. ಹೆಚ್ಚಾಗಿ ನಕ್ಷತ್ರಪ್ರಪಂಚಕ್ಕೆ ಸಂಬಂಧಿಸಿದ ಮೂಲಭೂತ ಪ್ರಶ್ನೆಗಳವು : ಅನ್ಯ ನಕ್ಷತ್ರಗಳಿಗೂ ಗ್ರಹವಲಯ ಇರಬಹುದಲ್ಲವೇ? ಅಲ್ಲೆಲ್ಲ ಮಾನವಸದೃಶ ಜೀವಿಗಳು ವಿಕಸಿಸಿರಬಹುದೇ? ಹಾರಾಡುವ ತಟ್ಟೆಗಳು (Unidentified Flying Objects, UFOs) ಆ ಜೀವಿಗಳ ವಿಮಾನಗಳಾಗಿರಬಹುದೇ? ಬ್ಲ್ಯಾಕ್ ಹೋಲ್ (ಕೃಷ್ಣವಿವರ) ಪರಿಕಲ್ಪನೆ ತುಂಬ ಸೊಗಸಾಗಿದೆ ಅಲ್ಲವೇ?

ಪ್ರತಿಸಲವೂ ಅವರಲ್ಲಿಗೆ ಹೋಗಿ ಮಾಹಿತಿ, ಚಿತ್ರ ಮತ್ತು ನಿದರ್ಶನಸಹಿತ ವಿವರಿಸಿ ಮರಳುತ್ತಿದ್ದೆ. ವಿಜ್ಞಾನದ ಪರಿಭಾಷೆಗೆ (ಪ್ರತೀಕ, ಸಂಜ್ಞೆ, ಸಮೀಕರಣ, ಆಲೇಖ, ಕೋಷ್ಟಕ ಮುಂತಾದವುಗಳ ವ್ಯವಸ್ಥೆ) ಅವರು ಪ್ರವೇಶ ಪಡೆದಿರಲಿಲ್ಲ, ನಿಜ, ಆದರೆ ಅವರು ಆ ಸಂಕೀರ್ಣ ಪರಿಕಲ್ಪನೆಗಳ ಹೂರಣ ಗ್ರಹಿಸಿ ವಿವರಿಸುತ್ತಿದ್ದಾಗ ಅವರಲ್ಲಿ ಅಸಾಮಾನ್ಯ ಸ್ವೋಪಜ್ಞತೆ ಬೆಳಗುತ್ತಿತ್ತು—ಋಷಿ ಪ್ರತಿಭೆಗೆ ನಿದರ್ಶನ. ನಮ್ಮ ಒಂದೊಂದು ಬೈಠಕ್ ಮುಗಿದಾಗಲೂ ಅವರ ಸಂತೃಪ್ತ ಉದ್ಗಾರ ಒಂದೇ ಧಾಟಿಯಲ್ಲಿರುತ್ತಿತ್ತು, ''ಆಧ್ಯಾತ್ಮಿಕ ದೃಷ್ಟಿಗೆ ಗೋಚರವಾಗುವ ಸೌಂದರ್ಯಕ್ಕೆ ಸಂವಾದಿಯಾಗಿ ಭೌತಾನ್ವೇಷಣೆಯಿಂದ ಆವಿಷ್ಕೃತವಾಗುವ ಸೌಂದರ್ಯವೂ ಇರುವುದು ಎಂಥ ವಿಚಿತ್ರವಲ್ಲವೇ?''

ಶುದ್ಧ ಭೌತಿಕ ಕ್ರೀಡೆಯಾಗಿ ಗಣಿತಮಾರ್ಗದಲ್ಲಿ ಮುನ್ನಡೆಯುವ ಸೈದ್ಧಾಂತಿಕ ಭೌತವಿಜ್ಞಾನಿಗೆ, ತಾನು ಪಡೆದ ಗಣಿತ ಫಲನದ ಭೌತಪ್ರತಿಫಲನ ನಿಸರ್ಗದಲ್ಲಿ ಗೋಚರಿಸಿದಾಗ ಮೂಡುವ ಬೆರಗಿನತ್ತ ಅವರ ಲಕ್ಷ್ಯ ಸೆಳೆದೆ. ಒಮ್ಮೆ ಇಂಥ ಅನುಭವ ಆದ ಭೌತವಿಜ್ಞಾನಿ ವರ್ನರ್ ಹೈಸನ್‌ಬರ್ಗ್ (೧೯೦೧-೭೬) ಆ ಕ್ಷಣ ಉದ್ಗರಿಸಿದ ನುಡಿಗಳನ್ನು ಉಲ್ಲೇಖಿಸಿದೆ, ''ನಿಸರ್ಗ ನಮ್ಮನ್ನು ಪರಮ ಸರಳತೆ ಮತ್ತು ಅಸೀಮ ಸೌಂದರ್ಯಭರಿತ ಗಣಿತರೂಪಗಳತ್ತ ಮುನ್ನಡೆಸಿದರೆ [ವಾದಗಳು (hypotheses), ಆದ್ಯುಕ್ತಿಗಳು (axioms) ಮುಂತಾದವುಗಳ ಸುಸಂಬದ್ಧ ವ್ಯವಸ್ಥೆಗಳನ್ನು ಇಲ್ಲಿ 'ರೂಪಗಳು' ಎಂದು ಹೆಸರಿಸಿದ್ದೇನೆ] ಮತ್ತು ಇಂಥ ರೂಪಗಳನ್ನು ಹಿಂದೆ ಯಾರೂ ಸಂಧಿಸಿರದಿದ್ದರೆ ಇವನ್ನು ಒಟ್ಟಾಗಿ 'ಋತ' ಎಂದೂ ಇದು ನಿಸರ್ಗದ ಒಂದು ನೈಜ ಲಕ್ಷಣವನ್ನು ಪ್ರತಿನಿಧಿಸುತ್ತದೆಂದೂ ನಂಬದೇ ವಿಧಿ ಇಲ್ಲ. ನಿಸರ್ಗ ನಮ್ಮೆದುರು, ನಾವು ಒಂದಿಷ್ಟೂ ಸಿದ್ಧವಾಗಿರದಾಗ, ತೀರ ಹಠಾತ್ತನೆ ಬಿಡಿಸಿ ಎಸೆದುಬಿಡುವ ಸಂಬಂಧಗಳ ಆ ಹೆಚ್ಚು ಕಡಿಮೆ ಭಯಕಾರಕ ಸರಳತೆ ಮತ್ತು ಸಂಪೂರ್ಣತೆ.''

ಅಂತರ್ಗತ ಶಾಶ್ವತ ಮತ್ತು ಅಗೋಚರ 'ಸತ್ಯ' (truth) ಎಂಬ ಆಧ್ಯಾತ್ಮಿಕ ಪರಿಕಲ್ಪನೆಯ ಬಾಹ್ಯ ಗೋಚರ ಮುಖವೇ 'ಋತ' (the true). ಕೈಲಾಸಗಿರಿಯ ಆಂತರಿಕ

ತ್ರಾಣ 'ಸತ್ಯ,' ಬಾಹ್ಯ ಸೌಂದರ್ಯ 'ಋತ.' ವಿಶ್ವಭೌತಸ್ಥಿರಾಂಕ 'ಚಂದ್ರಶೇಖರ್ ಪರಿಮಿತಿ'ಯನ್ನು ಆವಿಷ್ಕರಿಸಿ(೧೯೩೦) ಬೃಹನ್ನಕ್ಷತ್ರಗಳ ವಿಕಾಸಕ್ಕೆ ನಡೆ ಹಾಸಿದ ಎಸ್. ಚಂದ್ರಶೇಖರ್ (೧೯೧೦-೯೫) ತಮ್ಮ ನೊಬೆಲ್ ಭಾಷಣವನ್ನು "The simple is the seal of the true. Beauty is the splendour of truth," ಎಂಬ ಸೂಕ್ತಿ ಉಲ್ಲೇಖಿಸಿ ಸಮಾರೋಪಿಸಿದುದನ್ನು (೧೯೮೩) ಕುವೆಂಪುಅವರ ಗಮನಕ್ಕೆ ತಂದೆ. ಅಲ್ಲದೇ ಈ ಸೂಕ್ತಿಯ ಕನ್ನಡಾನುವಾದವನ್ನು ಸಂಸ್ಕೃತ ವಿದ್ವಾಂಸ ಜಿ. ಎನ್. ಚಕ್ರವರ್ತಿಯವರು ಅಷ್ಟೇ ಧ್ವನಿಯುಕ್ತವಾಗಿ ಮಾಡಿಕೊಟ್ಟುದನ್ನು ನಿರೂಪಿಸಿದೆ : "ಋತದ ಪರಿಮುದ್ರೆ ಸರಳತೆ, ಸತ್ಯದ ಪರಿವೇಷ ಸೌಂದರ್ಯ."

ಅವರ ಮುಖ ಪ್ರಫುಲ್ಲವಾಯಿತು, ಕಣ್ಣುಗಳು ಕಾಂತಿ ಬೀರಿದುವು. "ಆಧ್ಯಾತ್ಮಿಕ ಚಿಂತನೆ ಮತ್ತು ಭೌತ ವಾಸ್ತವತೆ ನಡುವಿನ ಸೀಮಾರೇಖೆಯನ್ನು ಋಷಿಗಳು ಮಾತ್ರ ದರ್ಶಿಸಬಲ್ಲರು! ಎಂಥ ವಿಸ್ಮಯ !" ಅವರ ಸಂತೃಪ್ತ ನುಡಿ.

"ಅಂಥ ದ್ರಷ್ಟಾರರು ನೀವಲ್ಲವೇ?" ನುಡಿಗೆ ಇಳಿಯದ ನನ್ನ ಮೂಕ ಭಾವವಿದು.

ಇದರ ಮಥಿತಾರ್ಥವಿಷ್ಟು : ಬೌದ್ಧಿಕ ಒಡಪು (ಪರಿಹಾರ) ಎದುರಿದೆ, ಇದಕ್ಕೆ ಒಪ್ಪುವ ಒಗಟಿನ (ಸಮಸ್ಯೆ) ಶೋಧವಾಗಬೇಕಾಗಿದೆ. ಈ ಧಾಟಿಯಲ್ಲಿ ನಮ್ಮ ಮಾತುಕತೆ ಮುಂದುವರಿಯುತ್ತಿದ್ದಂತೆ ಒಮ್ಮೆ ನಾನವರಿಗೆಂದೆ, "ಯುಗನಿದ್ರೆಯಲ್ಲಿ ಶಿಲೆ ಕೆಡೆದಿತ್ತು, ಶ್ರೀರಾಮ ಪಾದ 'ದಿವ್ಯ ಮಾಯಾಶಿಲ್ಪಿ ಕಲ್ಪನಾದೇವಿಯಂ ಕಲ್ಲಸೆರೆಯಿಂ ಬಿಡಿಸಿ ಕೃತಿಸಿದ' ರೋಮಾಂಚಕ ಸನ್ನಿವೇಶವನ್ನು ನೀವೇ 'ಶಿಲಾತಪಸ್ವಿನಿ' ಸಂಚಿಕೆಯಲ್ಲಿ ಚಿತ್ರಿಸಿರುವಂತೆ ಪೂರ್ವಸಿದ್ಧ ಒಡಪಿಗೆ ಒಪ್ಪುವ ಒಗಟು ಎಂದೋ ಪ್ರತ್ಯಕ್ಷವಾಗುವುದು ಭೌತವಿಶ್ವದಲ್ಲಿ ವಿರಳವಲ್ಲ." ಆಗ ಅವರ ಪ್ರಸನ್ನ ವದನದಿಂದ ಹೊಮ್ಮಿದ ದೀಪ್ತಿಯನ್ನು ಎಂದೂ ಮರೆಯಲಾರೆ, "ನಿಸರ್ಗವೊಂದು ಭೌತಕಾವ್ಯ, ಕವಿ ಆದರಿಂದ ಸ್ಫೂರ್ತಿ ಹೀರಿ ಶಬ್ದಕಾವ್ಯ ರಚಿಸುತ್ತಾನೆ. ಇವೆರಡೂ ಅನ್ಯೋನ್ಯಾಶ್ರಯಿಗಳೆಂದು ತಿಳಿದು ಸಂತೋಷವಾಯಿತು" ಎಂದರು.

> ಪೋಷಾಕು ಸಿದ್ಧವಿದೆ ಧರಿಪಾತನೆಲ್ಲಿಹನು ?
> ವಾಸಗೃಹ ತೆರೆದಿಹುದು ಬರುವನೆಂದೊಡೆಕಾರ ?
> ಮೂಷಿಕಾಧಿಪ ಲೆಕ್ಕಣಿಕೆ ಪಿಡಿದಿಹನು ವೇದ
> ವ್ಯಾಸಾಗಮನ ಕಾದು—ಇದು ವಿಶ್ವ ಅತ್ರಿಸೂನು

**ಗಗನಾನ್ವೇಷಕ ಕುವೆಂಪು**

ಒಂದು ಸಂಜೆ ಅವರಿಂದ ದೂರವಾಣಿ ಕರೆ ಬಂತು, "ನಾನು ಕುವೆಂಪು ಮಾತಾಡುತ್ತಿದ್ದೇನೆ. ಈಗ ನೋಡಿ, ಪಡುಬಾನಿನಲ್ಲಿ ಎರಡು ಸಮಪ್ರಕಾಶದ ಬೆಳಕಿನ ಬೊಟ್ಟುಗಳಿವೆ. ಕೆಲವು ತಿಂಗಳ ಹಿಂದೆ ಈ ದೃಶ್ಯ ಇರಲಿಲ್ಲ. ಏನು ವಿಶೇಷ?"

"ಅವು ಶುಕ್ರ ಮತ್ತು ಗುರು ಎಂಬ ಎರಡು ಗ್ರಹಗಳು, ನಕ್ಷತ್ರಗಳಲ್ಲ."

"ಅಂದರೆ ಅವುಗಳದು ಸಹಜ ಕಾಂತಿಯಲ್ಲ, ಪ್ರತಿಫಲಿತ ವೈಭವ! ಸೂರ್ಯನ ಪ್ರಕಾಶವನ್ನು ಪ್ರತಿಫಲಿಸಿ ಬೆಳಗುತ್ತವೆ, ಅಲ್ಲವೇ?"

ಚಿಕ್ಕವರಾಗಿದ್ದರೆ "ಶಾಭಾಸ್" ಎಂದಿರುತ್ತಿದ್ದೆ. ಅವರು ಮುಂದುವರಿಸಿದರು, "ಅದು ಸರಿ, ಈ ಪೈಕಿ ಯಾವುದು ಶುಕ್ರ ಯಾವುದು ಗುರು ಎಂದು ಬೇರ್ಪಡಿಸುವುದು ಹೇಗೆ?"

"ನಾಳೆ ಸಂಜೆ ತಮ್ಮಲ್ಲಿಗೆ ಬಂದು ಖುದ್ದು ಅವುಗಳ ಕೆಳಗಡೆಯೇ ಈ ಸೂಕ್ಷ್ಮ ವಿವರಿಸುತ್ತೇನೆ."

"ಆಗಲೂ ಅವು ಕಾಣುತ್ತಿರುವುವೇ?"

"ಹೌದು, ಮೋಡಗಳ ಬುರಕಿ ಮುಸುಕಿರದಿದ್ದರೆ."

ಮರುಸಂಜೆ. ಗಗನದಲ್ಲಿ ವಾಸ್ತವತೆ. ಕಾಗದದಲ್ಲಿ ಸಂವಾದೀ ಚಿತ್ರಗಳು. ನಡುವೆ ಮಹಾಕವಿ ಮತ್ತು ನಾನು. ಪ್ರಶ್ನೋತ್ತರಗಳು ಮುಂದುವರಿದುವು. ಅರ್ಥ ಪೂರ್ತಿ ಗ್ರಹಿಸಿದಾಗ ಅವರೆಂದರು, "ಹೌದು, ವಾಲಿ ಸುಗ್ರೀವರ ನಡುವಿನ ವ್ಯತ್ಯಾಸ ತಿಳಿಯುವುದು ಮೊದಲ ಹೋರಾಟದಲ್ಲಿ ಶ್ರೀರಾಮನಿಗೂ ಸಾಧ್ಯವಾಗಲಿಲ್ಲ."

"ಕೊನೆಗೂ ಶ್ರೀರಾಮ ತೊಡಿಸಿದ ಹೂಹಾರವಲ್ಲವೇ ಅದನ್ನು ಪರಿಹರಿಸಿದ್ದು?" ನಾನು ದನಿಗೂಡಿಸಿದೆ. ಧ್ವನಿ ಗ್ರಹಿಸಿ ಮಂದಹಾಸ ಮಿಡಿದರು. ನಾನೆಂದೆ "ಇನ್ನೂ ಒಂದು ವೈಶಿಷ್ಟ್ಯವಿದೆ: ಶುಕ್ರ ಎಂದೂ ಮುಂಜಾನೆಯ ಪಶ್ಚಿಮಾಕಾಶದಲ್ಲಿ, ಅಂತೆಯೇ, ಸಂಜೆಯ ಪೂರ್ವಾಕಾಶದಲ್ಲಿ ಪ್ರಕಟವಾಗದು. ಗುರುವಿಗೆ ಈ ಯಾವ ನಿರ್ಬಂಧವೂ ಇಲ್ಲ. ಸೂರ್ಯನಿಗೆ ಸಾಪೇಕ್ಷವಾಗಿ ಅದು ಎಲ್ಲಿಯೂ ಯಾವ ಹೊತ್ತಿಗೂ ಕಾಣಿಸಿಕೊಳ್ಳಬಹುದು. ತೊಂದರೆ ಉಂಟಾಗುವುದು ಎರಡೂ ಮುಂಜಾನೆ ಸೂರ್ಯೋದಯದ ಮೊದಲು ಪೂರ್ವಾಕಾಶದಲ್ಲಿ ಅಥವಾ ಸಂಜೆ ಸೂರ್ಯಾಸ್ತಮಾನದ ಬಳಿಕ ಪಶ್ಚಿಮಾಕಾಶದಲ್ಲಿ ಬೆಳಗುತ್ತಿರುವಾಗ ಮಾತ್ರ."

"ಆಗ ಇದೀಗ ತಾನೇ ನೀವು ವಿವರಿಸಿದ ತೆರದಲ್ಲಿ ಗಣನೆ ಮಾಡಬೇಕಾಗುತ್ತದೆ ಅಲ್ಲವೇ?"

"ಹೌದು ಸರ್."

"ಆದರೆ ನನಗೊಂದು ಸುಲಭೋಪಾಯ ಉಂಟು: ನಿಮಗೆ ದೂರವಾಣಿಸಿದರೆ ಸಾಕು!" ಎಂದರು ಮುಗುಳ್ನಗುತ್ತ.

ಮುಂದೊಂದು ಸಲ "ಚಂದ್ರಬಿಂಬದ ಕಲೆಗಳ ಬಗ್ಗೆ ತುಸು ಸಂಶಯವಿದೆ" ಎಂದರು. ಆಗ ಶುಕ್ಲಪಕ್ಷ. ಅಂದು ಸಂಜೆ 'ಉದಯರವಿ'ಯಲ್ಲಿ ಪಡುಬಾನನ್ನು ದಿಟ್ಟಿಸುತ್ತ ನಾವಿಬ್ಬರೂ ನಿಂತಿದ್ದೆವು: ಆ ವಿಸ್ತಾರ ಗಗನ ಫಲಕಕ್ಕೆ ಬೆಳ್ಳಕ್ಕಿಯ ಸಾಲು ತೋರಣ ಹೂಮಾಲೆ ತೊಡಿಸಿ ಕವಿಯನ್ನು ರಸವಶಗೊಳಿಸಿದ ದೃಶ್ಯ ಕಂಡೆ. ಒಂದು ಕ್ಷಣ ಭಾವಪರವಶತೆ, ಮರುಕ್ಷಣ ಸಂದೇಹ. ಕುವೆಂಪು ನುಡಿದರು ಮುತ್ತಿನ ಹಾರದಂತೆ "ಈಗ ನೋಡಿ ಚಂದ್ರಬಿಂಬ: ಪಶ್ಚಿಮಾಕಾಶದಲ್ಲಿದೆ, ಸೂರ್ಯನನ್ನು ಹಿಂಬಾಲಿಸುತ್ತಿದೆಯೋ ಎಂಬಂತೆ. ಕೃಷ್ಣಪಕ್ಷದಲ್ಲಿ ತದ್ವಿರುದ್ಧ ಪರಿಸ್ಥಿತಿ. ಈ ಮೋಡಿಯ ರಹಸ್ಯವೇನು?"

"ಸರ್ ! ಚಂದ್ರನಿಗೆ ಸ್ವಂತ ಪ್ರಭೆಯಿಲ್ಲ, ಸೂರ್ಯಪ್ರಕಾಶವನ್ನು ಪ್ರತಿಫಲಿಸಿ ಹೊಳೆಯುವ ಒಂದು ಆಕಾಶಕಾಯವದು. ಈಗ, ಚಂದ್ರ ನಮ್ಮ ಭೂಮಿಯ ಸುತ್ತ ಪರಿಭ್ರಮಿಸುತ್ತಿರುವ ಉಪಗ್ರಹ ಎಂದೂ ಭೂಮಿ ತನ್ನ ಉಪಗ್ರಹ ಚಂದ್ರನ ಸಹಿತ ಸೂರ್ಯನ ಸುತ್ತ ಪರಿಭ್ರಮಿಸುತ್ತಿರುವ ಗ್ರಹವೆಂದೂ ತಮಗೆ ಗೊತ್ತಿದೆ. ಆದರೆ ಭೂನಿವಾಸಿಗಳಾಗಿರುವ

ನಮಗೆಲ್ಲರಿಗೂ ಎಲ್ಲ ನೆಲೆ ಮತ್ತು ವೇಳೆಗಳಲ್ಲಿಯೂ ಕಾಣುವ ದೃಶ್ಯ ಮಾತ್ರ ಬೇರೆ : ಸೂರ್ಯನಿಗೆ ಸಾಪೇಕ್ಷವಾಗಿ ಚಂದ್ರ ನಮ್ಮ ಸುತ್ತ ಪಶ್ಚಿಮ-ಪೂರ್ವ ದಿಶೆಯಲ್ಲಿ ಸತತ ಪರಿಭ್ರಮಣೆಯಲ್ಲಿದೆಯೋ ಎಂಬಂತೆ."

"ಹಾಗಾದರೆ ವಾಸ್ತವ ದೃಶ್ಯ?"

"ಭೂಮಿ ಬಿಟ್ಟು ದೂರಾಕಾಶದಲ್ಲಿ ನಿಂತಾಗ ಮಾತ್ರ ಕಂಡೀತು! ನೀವೇ ಈ ಸೂಕ್ಷ್ಮ ವನ್ನು ಅತ್ಯಂತ ಮನೋಜ್ಞವಾಗಿ ಹೇಳಿರುವಿರಲ್ಲ: 'ಕಾವ್ಯ ಸತ್ತೆಯನನ್ಯ ಸತ್ತಾ ಪ್ರಮಾಣದಿಂ ಪರಿಕಿಸಲ್ ಮಿಥ್ಯೆಯಲ್ಲದೆ ತನಗೆ ತಾಂ ಮಿಥ್ಯೆಯೇಂ?' ಈಗ ನೋಡಿ ಸರ್ ! ಚಂದ್ರನ ಪಶ್ಚಿಮ ಪಾರ್ಶ್ವ ಬೆಳಗುತ್ತಿದೆ, ಏಕೆ?"

"ಚಂದ್ರನ ಬೆಳಗುಭಾಗ ಭಾಗ ಪಶ್ಚಿಮಾಭಿಮುಖಿಯಾಗಿದೆ" ಅವರೆಂದರು.

"ನೀವು ಇಂದಿನಿಂದ ತೊಡಗಿ ಪ್ರತಿ ಸಂಜೆ ಇದೇ ಹೊತ್ತಿಗೆ ಚಂದ್ರ ಬಿಂಬದ ನೆಲೆ ಮತ್ತು ಕಲೆ, ಅಂದರೆ ಹೊಳೆವ ಭಾಗ, ಗಮನಿಸಿದ್ದಾದರೆ ಎರಡು ಮುಖ್ಯ ಬದಲಾವಣೆ ಗಳನ್ನು ಗುರುತಿಸಬಹುದು."

"ಹೌದು! ಚಂದ್ರ ಸಂಜೆಯಿಂದ ಸಂಜೆಗೆ ಬೇಗಬೇಗ ಕಾಣಿಸಿಕೊಳ್ಳುತ್ತದೆ, ಅದರ ನೆಲೆ ಹೆಚ್ಚು ಹೆಚ್ಚು ಪೂರ್ವದಿಶೆಗೆ ಸರಿದಿರುತ್ತದೆ, ಒಂದಿಗೇ ಬೆಳಗು ಭಾಗದ ವಿಸ್ತಾರ ಜಾಸ್ತಿಯಾಗುತ್ತದೆ."

"ಎಲ್ಲಿಯ ತನಕ?" ನನ್ನ ಪ್ರಶ್ನೆ–

"ಹೌದಲ್ಲ ! ಮುಂದಿನ ಹುಣ್ಣಿಮೆಯಂದು ಸೂರ್ಯ-ಚಂದ್ರ ಎದುರು-ಬದಿರಾಗಿರು ತ್ತವೆ, ಸೂರ್ಯ ಅಲ್ಲಿ [ಪಶ್ಚಿಮ] ಕಂತುತ್ತಿರುವಂತೆ ಪೂರ್ಣಚಂದ್ರ ಇಲ್ಲಿ [ಪೂರ್ವ] ಮೂಡುತ್ತಿರುವುದು."

ಭೌತವಾಸ್ತವತೆಯನ್ನು (ಋತ) ಗುರುತಿಸಿದ ಆ ಕಾವ್ಯರ್ಷಿವದನ ದೀಪ್ತಿಸಿತು. ಅವರೇ ಮುಂದುವರಿದರು, "ಅಂದಮೇಲೆ ತರುವಾಯದ ಕೃಷ್ಣಪಕ್ಷದಲ್ಲಿ ಸೂರ್ಯನ ಸ್ಥಾನ ಚಂದ್ರನ ಪೂರ್ವಕ್ಕಲ್ಲವೇ? ಆದ್ದರಿಂದ ಚಂದ್ರನ ಪೂರ್ವಪಾರ್ಶ್ವ ಹೊಳೆಯುವು ದಲ್ಲವೇ?"

"ಈಗಲೂ ಸೂರ್ಯ-ಚಂದ್ರ ಅಂತರ ಪಶ್ಚಿಮ-ಪೂರ್ವ ದಿಶೆಯಲ್ಲಿ ಹಿಗ್ಗುತ್ತ, ಜೊತೆ ಯಲ್ಲೇ ಬಿಂಬದ ಬೆಳಗುಭಾಗ ಕುಗ್ಗುತ್ತ ಒಂದು ಸಂಜೆ ಚಂದ್ರ ನಾಪತ್ತೆ! ಗಿಳಿಯು ಪಂಜರದೊಳಿಲ್ಲ," ನಾನು ಮುಂದುವರಿಸಿದೆ.

"ಅರ್ಥವಾಯಿತು. ಅಂದು ಅಮಾವಾಸ್ಯೆ, ಗಿಳಿ ಸೂರ್ಯನಲ್ಲಿ ಲೀನಿಸಿತು!" ಮಗುವಿನ ಮುಗ್ಧತೆಯೋ ಋಷಿಯ ಸತ್ಯದರ್ಶನಾನಂದವೋ ಹೇಳಲಾರೆ.

### ಶ್ರೀರಾಮಾಯಣ ದರ್ಶನದಲ್ಲಿ ವಿಜ್ಞಾನ ಪ್ರತಿಮೆಗಳು

ಕುವೆಂಪು ಅವರ "ಅಲೌಕಿಕ ನಿತ್ಯ ಸತ್ಯಂಗಳಂ ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನಂ" ಆಗಿರುವ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು ಅದು ಮೊದಲ ಬಾರಿಗೆ ಎರಡು ಸಂಪುಟಗಳಲ್ಲಿ ಪ್ರಕಟವಾದಾಗಿನಿಂದಲೇ (೧೯೫೦ರ ದಶಕ) ನೈಷ್ಠಿಕವಾಗಿ ಓದುತ್ತ ಬಂದಿದ್ದೆ. ೧೯೭೦ರ ದಶಕದಲ್ಲಿ ಮಹಾಕವಿಯವರ ಜೊತೆ ಮಾತುಕತೆ ನಡೆದಾಗ ಅವರ

ವಿಜ್ಞಾನನಿಶಿತ ಚಿಂತನೆಗೆ ಮಾರುಹೋದೆ. ಈ ಮೇರುಕೃತಿಯ ವಾಚನದ ವೇಳೆ ತಂತಾನೇ ನನ್ನ ಮನದಲ್ಲಿ ಸ್ಫುರಿಸುತ್ತಿದ್ದ ವೈಜ್ಞಾನಿಕ ಪ್ರತಿಮೆಗಳನ್ನು ಟಿಪ್ಪಣಿಸುತ್ತ ಹೋದೆ. ಹಲವಾರು ಸಂದರ್ಭಗಳಲ್ಲಿ ಅವರನ್ನು ಭೇಟಿ ಮಾಡಿ ನನ್ನ ಸಂದೇಹಗಳನ್ನು ನಿವಾರಿಸಿ ಕೊಳ್ಳುತ್ತಿದ್ದೆ. ಅವರ ಸಾಲುಗಳಿಗೆ ನಾನು ಕೊಡುತ್ತಿದ್ದ ವೈಜ್ಞಾನಿಕ ವ್ಯಾಖ್ಯಾನಗಳನ್ನು ಅತ್ಯಂತ ಶ್ರದ್ಧೆಯಿಂದ ಆಲಿಸಿ ಹರ್ಷಿಸುತ್ತಿದ್ದರು. ಒಂದು ಉದಾಹರಣೆ :

ನೆಯ್ದಾಳುತಿದೆ ಜಗವನೊಂದತಿ ವಿರಾಣ್ಮನಂ,<br>
ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ<br>
ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯ ಭಾವಮಂ<br>
ನೀಡಿ

ಇಲ್ಲಿಯ 'ವಿರಾಣ್ಮನಂ' ಪದವನ್ನು ವಿಶ್ವವೆಂದೂ 'ತಂತ್ರ' ಪದವನ್ನು ಗುರುತ್ವಾ ಕರ್ಷಣಬಲವೆಂದೂ ಓದಿಕೊಂಡರೆ ಅಧ್ಯಾತ್ಮಚಿಂತನೆ ಮತ್ತು ಭೌತವಾಸ್ತವತೆ ನಡುವಿನ ಅನ್ಯೋನ್ಯ ಸಂಬಂಧ ಸ್ಪಷ್ಟವಾಗುತ್ತದೆ. ನನ್ನ ಅಧ್ಯಯನ ಮುಂದುವರಿದಂತೆ ಈ ಟಿಪ್ಪಣಿ-ಎಸಳುಗಳು ಬೆಳೆಯುತ್ತ ಹೋದುವು. ಒಂದು ದಿನ ಎಲ್ಲ ಎಸಳುಗಳನ್ನೂ ಸ್ವಸಂತೋಷಾರ್ಥ ಕೋದು ಮಾಲೆ ಕಟ್ಟಿದೆ. ಆದರೆ ತೊಡಿಸಲು ಕೊರಳೆಲ್ಲಿ ?

ಆ ಸುಮಾರಿಗೆ 'ಸಹ್ಯಾದ್ರಿ'(ರಾಷ್ಟ್ರಕವಿ ಶ್ರೀಕುವೆಂಪು ಅವರಿಗೆ ಅವರ ಎಪ್ಪತ್ತೆರಡನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಅರ್ಪಿಸಿದ ಎಪ್ಪತ್ತೆರಡು ಜನ ಲೇಖಕರ ಎಪ್ಪತ್ತನಾಲ್ಕು ಲೇಖನಗಳನ್ನೊಳಗೊಂಡ ಅಭಿನಂದನ ಗ್ರಂಥ) ದೇಜಗೌಅವರ ಪ್ರಧಾನ ಸಂಪಾದಕತ್ವ ದಲ್ಲಿ ಪ್ರಕಟವಾಗಲಿತ್ತು. ದೇಜಗೌ ನನ್ನಿಂದಲೂ ಒಂದು ಲೇಖನ ಅಪೇಕ್ಷಿಸಿದರು. ಹೀಗೆ ಅಯಾಚಿತವಾಗಿ ಆ ಕೊರಳು ಲಭಿಸಿತು !"ಶ್ರೀ ರಾಮಾಯಣದರ್ಶನದಲ್ಲಿ ವೈಜ್ಞಾನಿಕಾಂಶ ಗಳು" ಎಂಬ ಶೀರ್ಷಿಕೆಯಲ್ಲಿ ನನ್ನ ಲೇಖನ ಪ್ರಕಟವಾಯಿತು (೧೯೭೭).

**ಗಾನಪ್ರಿಯ ರಸಋಷಿ**

ಹಿರಿಯ ವೃತ್ತಿಗಾಯಕ ಮತ್ತು ನನ್ನ ಸಂಗೀತಮಿತ್ರ ಕುರೂಡಿ ವೆಂಕಣ್ಣಾಚಾರ್ ಕುವೆಂಪುರಚಿತ ಪ್ರಾರ್ಥನಾ ಗೀತೆಗಳನ್ನು ಅವರ ಸಮಕ್ಷಮ ಹಾಡುವ ಅಪೇಕ್ಷೆ ವ್ಯಕ್ತಪಡಿಸಿ ದರು. ಈ ಕೋರಿಕೆಯನ್ನು ಕವಿಗಳು ತುಂಬ ಉತ್ಸಾಹದಿಂದ ಸ್ವಾಗತಿಸಿದರು. "ಮನ್ಮನೋ ಮಂದಿರಕೆ..." "ಎಚ್ಚರಿಸು ಬಾ ಗುರುವೆ, ಚಿಚ್ಚರಣ ಕಿರಣದಲಿ..." ಮುಂತಾದವನ್ನು ವೆಂಕಣ್ಣಾಚಾರ್ ರಾಗ-ಭಾವ-ಲಯ ಸಹಿತ ಹಾಡಿ ವಿಸ್ತರಿಸಿದಾಗ ಕವಿವರೇಣ್ಯರು ಭಾವ ಪರವಶವಾಗಿದ್ದರು—"ತನ್ನ ಕಾವ್ಯಕೆ ತಾಂ ಮಹಾಕವಿ ಮಣಿಯುವಂತೆ."

ಮುಂದೊಂದು ದಿನ ಅವರಿಂದ ದೂರವಾಣಿ ಕರೆ ಬಂತು. "ನಾರಾಯಣರಾಯರೇ ! ಇದೀಗ ತಾನೇ ನಾನು 'ಸಹ್ಯಾದ್ರಿ'ಯನ್ನು ಪೂರ್ತಿ ಓದಿ ಮುಗಿಸಿದೆ. ನನಗೆ ಪರಮ ಸಂತೃಪ್ತಿ ನೀಡಿದ ಎರಡು ಲೇಖನಗಳೆಂದರೆ ಎ. ಎಸ್. ಧರಣೇಂದ್ರಯ್ಯನವರ 'ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಮನೋವೈಜ್ಞಾನಿಕ ಹೊಳಹುಗಳು' ಮತ್ತು ನಿಮ್ಮದು. ನಿಮಗಿಬ್ಬರಿಗೂ ಎಷ್ಟು ಧನ್ಯವಾದ ಹೇಳಿದರೂ ಕಡಿಮೆಯೇ!" ವಿದ್ಯುದಾಲಿಂಗನ ಸನ್ನಿವೇಶ. 'ನಾನೇನ ಹೇಳಲಿ ಬಡವನಯ್ಯಾ!' ಎದೆ ತುಂಬಿ ಹಾಡಿದೆ "ಆಶೀರ್ವಾದ

ಸರ್!'' ಹೀಗಿದ್ದರು ನಮ್ಮ ಕುವೆಂಪು (೧೯೦೪-೯೪) : ''ಕರುಣೆಗೊಂದು ಕೋಡವನ್ ಎದೆಯೊಲುಮೆಗೆ ಬೀಡವನ್ !''

**ಕುವೆಂಪು ಮತ್ತು ಅಧ್ಯಾತ್ಮವಿಜ್ಞಾನ**

ಹಿರಿಯ ಕನ್ನಡ ಪ್ರಾಧ್ಯಾಪಕರೊಬ್ಬರು ನನಗೊಮ್ಮೆ ದೂರವಾಣಿಯಲ್ಲಿ ಹೇಳಿದರು, ''ಈ ಸಲದ ಮೈಸೂರು ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ನೀವು 'ಆಧುನಿಕ ಕನ್ನಡ ಸಾಹಿತ್ಯ ದಲ್ಲಿ ಅಧ್ಯಾತ್ಮ ವಿಜ್ಞಾನ' ಎಂಬ ವಿಷಯದ ಬಗ್ಗೆ ಪ್ರಬಂಧ ಮಂಡಿಸಬೇಕು. ವಿಷಯ ವನ್ನೂ ನಿಮ್ಮ ಹೆಸರನ್ನೂ ಸೂಚಿಸಿದವರು ಕುವೆಂಪು.''

ವಿಸ್ಮಿತನಾಗಿ ಉದ್ಗರಿಸಿದೆ, ''ಅಧ್ಯಾತ್ಮದ ಬಗ್ಗೆ ನಾನು ಅಜ್ಞ. ಆದ್ದರಿಂದ ಈ ಹೊಣೆ ಹೊರಲಾರೆ.''

''ನೀವೇ ಈ ಕಾರ್ಯ ನಿರ್ವಹಿಸಲು ಸಮರ್ಥರೆಂದು ಕುವೆಂಪು ಮತ್ತೆ ಮತ್ತೆ ಹೇಳಿ ದ್ದಾರೆ. ಅವರನ್ನೇ ಕೇಳಿ ಬೇಕಾದರೆ.''

ಹನುಮಂತ ತಾತ್ತ್ವಿಕವಾಗಿಯಾದರೂ ಬ್ರಹ್ಮಾಸ್ತ್ರಕ್ಕೆ ಮಣಿಯಬೇಕಾಯಿತು. ''ಆಗಲಿ. ಅವರನ್ನು ಭೇಟಿ ಮಾಡಿ ಅವರ ಇಂಗಿತವರಿತು ಬಳಿಕ ನಿರ್ಧರಿಸುತ್ತೇನೆ,'' ಎಂದೆ.

ಮರುಸಂಜೆ ಕುವೆಂಪು ಅವರಲ್ಲಿಗೆ ಹೋಗಿ, ''ಅಧ್ಯಾತ್ಮವಿಜ್ಞಾನ ಎಂದರೇನು, ಸರ್?'' ಎಂದು ಪ್ರಶ್ನಿಸಿದೆ. ಹಾರ್ದಿಕವಾಗಿ ನಕ್ಕರು, ''ಅಧ್ಯಾತ್ಮ ಬೇರೆ, ವಿಜ್ಞಾನ ಬೇರೆ. ಅಧ್ಯಾತ್ಮ ವಿಜ್ಞಾನ ಎಂಬ ಸಂಕರಶಿಶು ನಾನರಿಯೆ! ಅಧಿದೈವ, ಅಧಿಭೌತ, ಅಧ್ಯಾತ್ಮ ಎಂಬವು ಭಾರತೀಯ ತತ್ತ್ವಶಾಸ್ತ್ರದಲ್ಲಿ ಬರುವ ಪ್ರಗಲ್ಭ ಪರಿಕಲ್ಪನೆಗಳು. ವಿಶ್ವಾದ್ಯಂತ ಸರ್ವವ್ಯಾಪಿ ಯಾಗಿರುವ ಚಿಚ್ಛಕ್ತಿ ಮತ್ತು 'ನಾನು' ಎಂಬ ಪ್ರಜ್ಞೆಯೊಳಗಿರುವ ಪ್ರತ್ಯೇಕತ್ವ ಗ್ರಹಿಸಿ ನಮ್ಮ ದಾರ್ಶನಿಕರು ಅಧಿದೈವ-ಅಧ್ಯಾತ್ಮ ಪರಿಕಲ್ಪನೆಯನ್ನು ಮಂಡಿಸಿದ್ದಾರೆ. ಇವೆರಡೂ ಅಮೂರ್ತ ಚಿಂತನೆಗಳು. ಇವುಗಳಿಂದ ಬೇರಾಗಿರುವ ಭೌತ ವಾಸ್ತವತೆಯೇ ಅಧಿಭೌತ. ಇದೇ ಇಂದು ನಾವು ತಿಳಿದಿರುವ ವಿಜ್ಞಾನದ (science) ಮೂಲ ಸೆಲೆ. ಈ ಸಂಬಂಧ ಅತ್ಯಂತ ವೈಜ್ಞಾನಿಕವಾದದ್ದು ಅಂದರೆ ತಾರ್ಕಿಕವಾದದ್ದು ನಿಜ. ಅಂದಮಾತ್ರಕ್ಕೆ ಅಧ್ಯಾತ್ಮ ವನ್ನು ವಿಜ್ಞಾನ ಎಂಬುದು ಮಾತ್ರ ಅರ್ಥಹೀನ.''

ಜೀವಂತ ಹಿರಿ ಚೇತನವೊಂದರ ಹೆಸರನ್ನು ವಿನಾಕಾರಣ ಎಳೆದುತಂದು ನನ್ನನ್ನು 'ಬಗ್ಗಿಸಲು' ಪ್ರಯತ್ನಿಸಿದ ಪ್ರಾಧ್ಯಾಪಕರಿಗೆ ಶೀತಲ ಖಚಿತತೆಯಿಂದ ಈ ವಿಷಯ ತಿಳಿಸಿದೆ.

ಕುವೆಂಪು ಅವರನ್ನು ನೆನೆದಾಗಲೆಲ್ಲ ಗಾಂಧೀಜಿಯವರ ೭೦ನೆಯ ಹುಟ್ಟು ಹಬ್ಬ ದಂದು, ೧೯೩೯, ಐನ್‌ಸ್ಟೈನ್ ಸಲ್ಲಿಸಿದ ನುಡಿಕಾಣ್ಕೆ ಮನದಲ್ಲಿ ಮಿಂಚುತ್ತದೆ. ''ಇಂಥವನೊಬ್ಬ ಎಂದಾದರೂ ಈ ನೆಲದ ಮೇಲೆ ರಕ್ತಮಾಂಸಭರಿತನಾಗಿ ಅಡ್ಡಾಡಿದುದು ನಿಜವಿರಬಹುದೇ ಎಂದು ಮುಂಬರಲಿರುವ ಪೀಳಿಗೆಗಳು ಸಂದೇಹಿಸುವುದು ಸಾಧ್ಯ.''

ಪಂಪ ಕುವೆಂಪುವರೇಣ್ಯರ
ಪೆಂಪಿನ ನುಡಿಗಳ ನಿವಾಸ ಕನ್ನಡ ದೇಶಂ
ಕಂಪಿಂ ಕತ್ತುರಿಯಾಗಿಹು-
ದಿಂಪಿಂ ಪಿಕದುಲಿಯಿದು ಸಿರಿಗನ್ನಡ ಗೆಲ್ಗೇ (೨೦೦೪)

# "ಶ್ರೀರಾಮಾಯಣದರ್ಶನ"ದಲ್ಲಿ ವೈಜ್ಞಾನಿಕಾಂಶಗಳು

## ಭಾಗ ಒಂದು

ಆಧುನಿಕ ವಿಜ್ಞಾನಯುಗದ ಒಬ್ಬ ಮಹಾಕವಿಯ ರಚನೆಯಲ್ಲಿ ಸಮಕಾಲೀನ ವಿಜ್ಞಾನ ಪ್ರಭಾವವನ್ನು ಓದುಗರು ನಿರೀಕ್ಷಿಸುವುದು ಸಹಜ. ಆದರೆ ಕಾವ್ಯವಸ್ತು "ಇತಿಹಾಸ ದೃಷ್ಟಿಗಸ್ಪಷ್ಟ ಪ್ರಾಚೀನ" ಕಾಲದ್ದಾಗಿದ್ದರೆ ಆಗ ಕವಿಗೆ ತನ್ನ ವೈಜ್ಞಾನಿಕ ಜ್ಞಾನವನ್ನು ಕಾವ್ಯ ದಲ್ಲಿ ಬಳಸಿಕೊಳ್ಳುವಾಗ ಪೂರ್ಣ ಸ್ವಾತಂತ್ರ್ಯವಿರುವುದಿಲ್ಲ. ಉದಾಹರಣೆಗೆ ರಾಮಾಯಣ ಯುದ್ಧ ವರ್ಣನೆಯಲ್ಲಿ ಆಧುನಿಕ ಅಸ್ತ್ರಗಳ ಇಲ್ಲವೇ ಸಮರತಂತ್ರಗಳ ಪ್ರತ್ಯಕ್ಷ ನಿರೂಪಣೆ ಬಂದರೆ ಅದು ಆಭಾಸ ಎನಿಸೀತು. ಈ ತೊಂದರೆಯನ್ನು ನಿವಾರಿಸಲು ವಿಜ್ಞಾನೋಪಮೆ ಗಳನ್ನೂ ವಿಜ್ಞಾನದ ಪಾರಿಭಾಷಿಕ ಪದಗಳನ್ನೂ ರಸಸುಖದ ಹದ ಕೆಡದಂತೆ ಬಳಸುವ ಸ್ವಾತಂತ್ರ್ಯ ಕವಿಗೆ ಉಂಟು; ರಸಸುಖ ವರ್ಧಿಸಿದರೆ ಅತ್ಯುತ್ತಮ.

ವಿಜ್ಞಾನದ ಪರಿಕಲ್ಪನೆಗಳನ್ನೂ (concepts) ಪರಿಭಾಷೆಯನ್ನೂ (technical language) "ಶ್ರೀರಾಮಾಯಣದರ್ಶನಂ" ಮಹಾಕಾವ್ಯದಲ್ಲಿ ಕವಿ ಹೇಗೆ ಬಳಸಿಕೊಂಡಿ ದ್ದಾರೆ ಎಂಬುದನ್ನು ಕುರಿತ ಒಂದು ಸ್ಥೂಲ ಅಧ್ಯಯನ ಈ ಪ್ರಬಂಧದ ವಸ್ತು.

ಕಾವ್ಯವನ್ನು ಮೊದಲ ಬಾರಿಗೆ ಇದೊಂದು ಸಾಹಿತ್ಯಕೃತಿ ಎಂಬ ದೃಷ್ಟಿಯಿಂದ ಓದಿದೆ. ಇದರ ಪುಟ ಪುಟದಲ್ಲೂ ಸಮಕಾಲೀನ ವಿಜ್ಞಾನಪ್ರಜ್ಞೆ ಮಿನುಗಿ ಕಾವ್ಯದ ಒಟ್ಟಂದಕ್ಕೆ ಹೊಸ ಮೆರುಗು ಒದಗುತ್ತಿದ್ದುದನ್ನು ಕಂಡು ಹೆಚ್ಚಿನ ಕುತೂಹಲ ಮೊಳೆಯಿತು. ಹೀಗಾಗಿ ಹೊಸ ತೊಂದು ಪರಿದೃಷ್ಟಿಯನ್ನು (approach) ರೂಪಿಸಿಕೊಂಡು ಕಾವ್ಯವನ್ನು ಪುನಃ ಅಭ್ಯಸಿಸಿದೆ. ಅದರ ಫಲ ಈ ಲೇಖನ.

ಸಾಹಿತ್ಯ ಮತ್ತು ವಿಜ್ಞಾನ ಮನುಷ್ಯನ ಸೃಜನಶೀಲ ಪ್ರತಿಭೆಯ ಬೇರೆ ಬೇರೆ ಮುಖಗಳು ಮಾತ್ರ. ಒಂದರಿಂದ ಇನ್ನೊಂದು ಪರಿಕಲ್ಪನೆಗಳನ್ನೂ ಪರಿಭಾಷೆಯನ್ನೂ ಪಡೆದು ಕೊಂಡಾಗ ಅರ್ಥಸ್ಪಷ್ಟತೆಗೆ ಹೊಸ ಆಯಾಮ ಲಭಿಸುತ್ತದೆ; ಜೊತೆಯಲ್ಲೇ ಭಾಷೆಗೆ ಅಪೂರ್ವವಾದ ಸೌಂದರ್ಯ ಕೂಡ ಪ್ರಾಪ್ತವಾಗುತ್ತದೆ. ಈ ದಿಶೆಯಲ್ಲಿ ಕವಿ ಕುವೆಂಪು ಅವರು ಕನ್ನಡ ಓದುಗರಿಗೆ ಅದೆಂಥ ಉನ್ನತ ಕೊಡುಗೆಯನ್ನು ಸಲ್ಲಿಸಿದ್ದಾರೆ ಎನ್ನುವುದನ್ನು "ಶ್ರೀರಾಮಾಯಣದರ್ಶನಂ" ಮಹಾಕಾವ್ಯದಲ್ಲಿ ಕಾಣಬಹುದು. ಇದರಲ್ಲಿ ನಾನು ಗುರುತಿ ಸಿದ ಪ್ರಮುಖ ವೈಜ್ಞಾನಿಕಾಂಶಗಳನ್ನು ಮಾತ್ರ ಪ್ರಸಕ್ತ ಲೇಖನದಲ್ಲಿ ಕಲೆಹಾಕಿದ್ದೇನೆ. ನನ್ನ ಅಜ್ಞತೆಯಿಂದಾಗಿ ಆಯ್ಕೆಗೆ ಸಿಕ್ಕದ ಇನ್ನೆಷ್ಟೋ ಸ್ವಾರಸ್ಯಕರ ವೈಜ್ಞಾನಿಕಾಂಶಗಳು ಇಲ್ಲಿ ಇವೆ ಎಂಬುದರ ಅರಿವು ನನಗುಂಟು. ನಮ್ಮ ಪಾತ್ರೆಯ ಗಾತ್ರದಷ್ಟು ಮಾತ್ರ ರತ್ನ ದೊರೆಯು ವುದಷ್ಟೇ ಸಮುದ್ರಗರ್ಭದಿಂದ!

ಕಾವ್ಯದಲ್ಲಿ ವೈಜ್ಞಾನಿಕಾಂಶ ಅಂದರೇನು? ವಿಜ್ಞಾನಕ್ಷೇತ್ರದಿಂದ ಒಂದು ಪರಿಕಲ್ಪನೆ ಯನ್ನು ಪಡೆದು ಅದನ್ನು ಸಾರ್ವತ್ರೀಕರಿಸಿ ಜೀವನಾನುಭವಕ್ಕೆ ಸಮೀಕರಿಸಿದಾಗ ದೊರೆ ಯುವ ನಿರೂಪಣೆ ಇದು. ಅಂತಿಮವಾಗಿ ಇದು ಕೃತಿಕಾರ ವಿಜ್ಞಾನವಿಚಾರಗಳನ್ನು ಎಷ್ಟರ ಮಟ್ಟಿಗೆ ಅರಿತು ತನ್ನದಾಗಿ ಮಾಡಿಕೊಂಡಿದ್ದಾನೆ ಎನ್ನುವುದನ್ನು ಅವಲಂಬಿಸಿದೆ. ಒಂದು ಉದಾಹರಣೆಯನ್ನು ಪರಿಶೀಲಿಸೋಣ. "ಟಾಲ್‌ಸ್ಟಾಯಿಯ ಮನಸ್ಸಿಗೆ ಅದ್ಭುತವಾದ

ವಿಘಟನ ಸಾಮರ್ಥ್ಯವಿತ್ತು. ಯಾವುದೇ ಸನ್ನಿವೇಶದ ತೀರ ಅಸ್ಪಷ್ಟ ವಿವರಗಳನ್ನೂ ಬಿಡಿ ಬಿಡಿಯಾಗಿ ಗ್ರಹಿಸಿ ಲಂಬಿಸಿ ಸಮಗ್ರ ಚಿತ್ರವನ್ನು ಬಿಂಬಿಸಬಲ್ಲ ದ್ಯುತಿಸಂವೇದಕ ಮನಸ್ಸು ಆತನದು.'' ಈ ವಾಕ್ಯಗಳ ಅರ್ಥವಿಷ್ಟು. ಒಂದು ಸೂಕ್ಷ್ಮದರ್ಶಕಕ್ಕೆ ಪೂರೈಸಿದ ಲಕ್ಷ್ಯ ದಲ್ಲಿಯ (ಬರಿಗಣ್ಣಿಗೆ ಅದು ಒಂದು ಮಚ್ಚೆಯೋ ಚುಕ್ಕಿಯೋ ಆಗಿ ತೋರಬಹುದು) ಅಸಂಖ್ಯಾತ ವಿವರಗಳನ್ನು ಅದು ಬಿಡಿಬಿಡಿಯಾಗಿ ಒಡೆದು (ವಿಘಟಿಸಿ) ಲಂಬಿಸಿ ತೋರಿಸು ತ್ತದೆ. ಇದೇ ಅವರ ವಿಘಟನ ಸಾಮರ್ಥ್ಯ (resolving power). ಛಾಯಾಚಿತ್ರಣದಲ್ಲಿ ಉಪಯೋಗಿಸುವ ಪೊರೆಯ (ಫಿಲ್ಮ್) ಕ್ರಿಯಾತಂತ್ರವೇನು? ಪೊರೆಯಲ್ಲಿರುವ ರಾಸಾಯ ನಿಕ ಲೇಪನದ ಮೇಲೆ ಬೆಳಕು (ದ್ಯುತಿ) ಬಿದ್ದ ಕ್ಷಣವೇ ಅಲ್ಲೊಂದು ಅನುರೂಪ ಪ್ರತಿಕ್ರಿಯೆ ಉಂಟಾಗುತ್ತದೆ. ಇದರ ಯುಕ್ತ ಸಂಸ್ಕರಣದಿಂದ ಮೂಲ ವಸ್ತುವಿನ ಯಥಾಚಿತ್ರವನ್ನು ರೂಪಿಸುವುದು ಸಾಧ್ಯ. ಆದ್ದರಿಂದ ಪೊರೆ ದ್ಯುತಿಸಂವೇದಕವಾಗಿದೆ (photosensitive); ಅದು ಮೂಲ ವಸ್ತುವಿನ ಆಕಾರವನ್ನು ಕುರಿತ ಹಲವಾರು ಲಕ್ಷಣಗಳನ್ನು ಎವೆಹೊಡೆಯು ವುದರೊಳಗೆ ಸೆರೆಹಿಡಿದಿರುವುದು ಎನ್ನುತ್ತೇವೆ. ಟಾಲ್‌ಸ್ಟಾಯಿಯ ವ್ಯಕ್ತಿಚಿತ್ರವನ್ನು ಬರೆ ಯುವಾಗ ಈ ಮೇಲೆ ಉದಾಹರಿಸಿದಂಥ ಒಂದು ವಾಕ್ಯ ಬಂದರೆ ಅದು ವೈಜ್ಞಾನಿಕಾಂಶ ಎಂದೆನ್ನಿಸಿಕೊಳ್ಳುತ್ತದೆ.

ಪ್ರತಿಯೊಬ್ಬ ಸೃಜನಶೀಲ ವ್ಯಕ್ತಿಗೂ—ಆತ ಕವಿ ಆಗಿರಲಿ, ಶಿಲ್ಪಿ ಆಗಿರಲಿ, ವಿಜ್ಞಾನಿ ಆಗಿರಲಿ—ತಾನು ನಿರ್ಮಿಸಲಿರುವ ವ್ಯವಸ್ಥೆಗೆ (system) ತಕ್ಕಂಥ ಚೌಕಟ್ಟನ್ನು (frame-work) ಆರಿಸುವ ಸ್ವಾತಂತ್ರ್ಯ ಉಂಟು. ಇದನ್ನು ಆಯ್ದ ಬಳಿಕ ಆಯಾ ವ್ಯವಸ್ಥೆಯ ವ್ಯಕ್ತಿತ್ವಕ್ಕೆ ಒಪ್ಪುವ ಮಾತುಗಳಲ್ಲಿ ಚೌಕಟ್ಟಿನ ಪರಿಚಯವನ್ನು ಓದುಗನಿಗೆ ಆತ ಮಾಡಿ ಕೊಡುತ್ತಾನೆ. ಇಂಥ ಪರಿಚಯಾನಂತರ ಓದುಗ ಕವಿಯೊಂದಿಗೆ ಸಹೃದಯನಾಗುತ್ತಾನೆ; ವಿಜ್ಞಾನದ ಪರಿಭಾಷೆಯಲ್ಲಿ ಹೇಳುವುದಾದರೆ ಅವರೀರ್ವರೂ ಒಂದೇ ಆವೃತ್ತಿಯಲ್ಲಿ (frequency) ಇರುತ್ತಾರೆ.

> ನನ್ನೀ ಕೃತಿಯನೋದುವಾತ್ಮರಾ ದಾರಿದ್ರ್ಯಮಂ ಪರಿಹರಿಸಿ,
> ಓ ಸರಸ್ವತಿಯೆ, ನೆಲಸಲ್ಲರಸಿಯಾಗಿ, ಸಹೃದಯ ಸರಸಲಕ್ಷ್ಮಿ
>
> (ಅಯೋಧ್ಯಾಸಂಪುಟಂ, ಸಂಚಿಕೆ ೮, ಸಾಲು ೧೮-೨೦)

ಎಂಬುದಾಗಿ ಕವಿ ಆಶಿಸಿರುವಲ್ಲಿ ಮತ್ತು

> ದರ್ಶನಧ್ವನಿರಸಾಮೃತ ಪಾನದಾನಂದದಿಂ
> ಲೋಕಶೋಕವನಳಿಸಿ ಭುವನತ್ರಯಂಗಳಂ
> ತಣಿಪ ನಂದನ ತಪೋದೀಕ್ಷೆಯಂ ಕೊಂಡೆಸಪ
> ರಸಋಷಿಗೆ ಯೋಗಮತಿ ಸಹೃದಯ ವಿಭೂತಿಗೆ ನಮೋ !
>
> (ಶ್ರೀಸಂಪುಟಂ, ಸಂಚಿಕೆ ೧೩, ಸಾಲು ೨೧೯-೨೨೨)

ಎಂಬುದಾಗಿ ಕವಿ ನಿವೇದಿಸಿಕೊಂಡಿರುವಲ್ಲಿ ಇದೇ ಭಾವ ಅಧ್ಯಾಹಾರ.

"ಶ್ರೀರಾಮಾಯಣದರ್ಶನಂ" ಮಹಾಕಾವ್ಯದ ಆರಂಭದ ಹಲವಾರು ಸಾಲುಗಳಲ್ಲಿ (೧-೧೫೫) ಕವಿ ತಾನು ಕಟ್ಟಲಿರುವ ಕಾವ್ಯಸೌಧದ (ಅಂದರೆ ವ್ಯವಸ್ಥೆಯ) ಚೌಕಟ್ಟನ್ನು ನಿರೂಪಿಸಿದ್ದಾರೆ.

ಬಾಳ್ಗಬ್ಬದೊಳ್ ಕರುಣೆ ತಾಂ ಬೇನೆಗುದಿದೊಡಮಲ್ತೆ
ಮೆರೆದಪುದು ಪೊರ ಪೊಣ್ಮುತಾ ಮಹಾಕಾವ್ಯ ಶಿಶುತಾಂ
ಚಾರು ವಾಗ್ವೈಖರಿಯ ಛಂದಶ್ಶರೀರದಿಂ ?[೧]

(ಅ. ಸಂ.—೧, ೩೨-೩೪)

ಎಂಬುದಾಗಿ ಈ ವಿವರಣೆ ಉಂಟು. ಇಂಥ ಒಂದು ವ್ಯವಸ್ಥೆಯಲ್ಲಿ

ನಿನ್ನ ಕಯ್ ಪಿಳಿಯೆ ಕಬ್ಬಿಣದಿಂದೆಯುಂ
ಪೊರಸೂಸಿದಪುದು ಕಬ್ಬಿನ ರಸಂ

(ಅ. ಸಂ.—೧, ೧೩೪-೧೩೫)

ಎಂಬ ನಿರೂಪಣೆ ವೈಜ್ಞಾನಿಕ ಸತ್ಯವೇ ಆಗಿದೆ. ಭೌತವಿಜ್ಞಾನದ ಚೌಕಟ್ಟಿನೊಳಗೆ ಇದು ಸತ್ಯವಲ್ಲ ಎಂಬುದು ನಮಗೆ ಗೊತ್ತುಂಟು. ಏಕೆಂದರೆ ಯಾವ ಪ್ರಯೋಗ ಮಾಡಿಯೂ ಕಬ್ಬಿಣದಿಂದ ಕಬ್ಬಿನ ರಸವನ್ನು ಹಿಂಡುವುದು ಅಸಾಧ್ಯ. ಆದ್ದರಿಂದ ಯಾವುದೇ ಹೇಳಿಕೆಯ ಸತ್ಯಾಸತ್ಯತೆಯನ್ನು ನಿರ್ಣಯಿಸುವ ಮುನ್ನ ಅದು ಯಾವ ಚೌಕಟ್ಟಿನಲ್ಲಿ ಇದೆ, ಅದರೊಳಗಿನ ವಿಧಿ ನಿಯಮಗಳೇನು ಇವೇ ಮುಂತಾದ ಪೂರ್ಣವಿವರಗಳೂ ನಮಗೆ ತಿಳಿದಿರಬೇಕಾದದ್ದು ಅತ್ಯಗತ್ಯ, ಅನಿವಾರ್ಯ ಕೂಡ. ಇದನ್ನು ಕವಿ

ಬ್ರಹ್ಮ ಸತ್ತೆಯನಾ ಪರಬ್ರಹ್ಮ ಸತ್ತೆಯಿಂ
ಮಾತ್ರಮೆಯೆ ದರ್ಶಿಸುತಿದಂ ಮಿಥ್ಯೆಯೆಂಬುದೇಂ
ಪೂರ್ಣ ಸತ್ಯಮೆ? ಯೋಗ ವಿಜ್ಞಾನಮೊಪ್ಪದು ಕಣಾ !

(ಅ. ಸಂ.—೧, ೬೯-೭೧)

ಎಂಬ ನುಡಿಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಇಷ್ಟು ಮಾತ್ರವಲ್ಲ, ಇನ್ನೂ ಮುಂದುವರಿದು

ಕಾವ್ಯಸತ್ತೆಯನನ್ಯ ಸತ್ತಾ ಪ್ರಮಾಣದಿಂ
ಪರಿಕಿಸಲ್ ಮಿಥ್ಯೆಯಲ್ಲದೆ ತನಗೆ ತಾಂ ಮಿಥ್ಯೆಯೇಂ ?

(ಅ ಸಂ.—೧, ೭೬-೭೭)

ಎಂಬುದಾಗಿ ಮಾನದಂಡದ ಆಯ್ಕೆಯಲ್ಲಿಯ ಔಚಿತ್ಯ ಕುರಿತು ಎಚ್ಚರಿಕೆ ಕೂಡ ನೀಡಿದ್ದಾರೆ. ಆ ಎಚ್ಚರಿಕೆ ಇದು : ಹೋಲಿಸಲಾಗದುದನ್ನು ಹೋಲಿಸಬಾರದು; ಹೋಲಿಸಲಾಗುವವನ್ನು ಮಾತ್ರ ಹೋಲಿಸಬಹುದು; ಅಳತೆಯ ಮಾನದಂಡ, ಅಳತೆ ಮಾಡಲ್ಪಡುವ ವಸ್ತುವಿನ ಗಾತ್ರವನ್ನು ಅನುಲಕ್ಷಿಸಿ, ಅರಿವಿಗೆ ನಿಲುಕುವ ಸಂಖ್ಯೆಯನ್ನು ಕೊಡುವಂತಿರಬೇಕು, ಒಂದು ವ್ಯವಸ್ಥೆಯಲ್ಲಿ ಸಂಗತವಾಗುವ (consistent) ಫಲಿತಾಂಶ ಬೇರೆ ಒಂದು ವ್ಯವಸ್ಥೆಯಲ್ಲಿ ಸಂಗತವಾಗಬೇಕಾಗಿಲ್ಲ; ಇತ್ಯಾದಿ. ಇವೇ ಮೊದಲಾದವು ವಿಜ್ಞಾನದಲ್ಲಿ ಹೇಗೋ ಜೀವನದಲ್ಲೂ ಹಾಗೇ ಪದೇ ಪದೇ ಅನುಭವಕ್ಕೆ ಬರುವ ಸಂಗತಿಗಳು.

ಕವಿ ಕುವೆಂಪು ಅವರು ಆಧುನಿಕ ವಿಜ್ಞಾನದ ಮೂಲಭೂತ ಪರಿಕಲ್ಪನೆಗಳನ್ನು ಚೆನ್ನಾಗಿ ಬುದ್ಧಿ ಹಾಗೂ ಭಾವಗತ ಮಾಡಿಕೊಂಡು ಅವನ್ನು ಯಶಸ್ವಿಯಾಗಿ ಈ ಕಾವ್ಯದಲ್ಲಿ ಬಳಸಿದ್ದಾರೆ. ಇಲ್ಲಿ ಬರುವ ಉಲ್ಕೆ, ಧೂಮಕೇತು, ಸಪ್ತರ್ಷಿಮಂಡಲ, ಜಡತ್ವ, ಚೇತನ,

೧. ಇಲ್ಲಿ ಕಂಡುಬರುವ ವೈಜ್ಞಾನಿಕಾಂಶವೂ ಗಮನಾರ್ಹ. ಶಿಶುಜನನವನ್ನು ಕುರಿತ ಶಾರೀರಿಕ ಕ್ರಿಯೆಯನ್ನು ಸಾರ್ವತ್ರೀಕರಿಸಿ ಜೀವನಾನುಭವಕ್ಕೆ ಸಮೀಕರಿಸಿದಾಗ ದೊರೆಯುವ ನಿರೂಪಣೆ ಇದು.

ಗುರುತ್ವಾಕರ್ಷಣೆ, ನಕ್ಷತ್ರ, ರವಿ, ಬೆಳ್ಳಿ, ಜೀವಾತು ಇವೇ ಮುಂತಾದ ವಿಜ್ಞಾನದ ಪಾರಿಭಾಷಿಕ ಪದಗಳೂ ಅಲ್ಲಲ್ಲಿ ಧ್ವನಿಸುವ ವೈಜ್ಞಾನಿಕ ಸಿದ್ಧಾಂತಗಳೂ ಕಾವ್ಯದ ಉದ್ದಕ್ಕೂ ಅಸಂಖ್ಯಾತ ವಿಜ್ಞಾನರಸಸ್ಥಾನಗಳನ್ನು ನಿರ್ಮಿಸಿವೆ. ಇವೆಲ್ಲವನ್ನೂ ಗುರುತಿಸಿ ಹೆಚ್ಚಿನ ರಸಸುಖವನ್ನು ಪಡೆಯುವ ಭಾಗ್ಯ ಓದುಗರದಾಗಲಿ ಎಂದು ಹಾರೈಸುತ್ತೇನೆ. ಓದುಗರಿಗೆ ಒಂದು ನಮ್ರ ಸೂಚನೆ. ನನ್ನ ಈ ಲೇಖನದ ಎರಡನೆಯ ಭಾಗವನ್ನು ಅವರು ಓದುವ ಮೊದಲು ಕಾವ್ಯವನ್ನು ಒಮ್ಮೆ ಓದಿಕೊಳ್ಳುವುದು ಕಡ್ಡಾಯ. ಮಗುದೊಮ್ಮೆ ಓದುವಾಗ, ಈ ಲೇಖನದಲ್ಲಿ ವಿವರಿಸಿರುವ ಸಾಲುಗಳು ಬಂದಾಗ, ಓದನ್ನು ಕ್ಷಣಕಾಲ ನಿಲ್ಲಿಸಿ ಆ ಸನ್ನಿವೇಶದ ಮುನ್ನೆಲೆಯಲ್ಲಿ ಇಲ್ಲಿಯ ವಿವರಣೆ ಹೇಗೆ ಹೊಂದಿಕೊಳ್ಳುತ್ತದೆ ಎನ್ನುವುದನ್ನು ಪರಿಶೀಲಿಸಬೇಕು. ಹೀಗೆ ಮಾಡಿದರೆ ಮಾತ್ರ ಹೊಳೆದೀತು ಕವಿ ಅದೆಷ್ಟು ಔಚಿತ್ಯಪೂರ್ಣವಾಗಿ ಹಾಗೂ ಸಮರ್ಥವಾಗಿ ಆಧುನಿಕ ವೈಜ್ಞಾನಿಕಾಂಶಗಳನ್ನು ಈ ಪ್ರಾಚೀನ ಚೌಕಟ್ಟಿಗೆ ಹೊಂದಿಸಿ ರಸಸುಖವನ್ನು ಸಾಧಿಸಿದ್ದಾರೆ ಎಂಬ ಅಂಶ. ಅಲ್ಲದೇ ಆಗ ಓದುಗರು ಈ ಕಾವ್ಯದಲ್ಲಿ ಇನ್ನಷ್ಟು ವಿಜ್ಞಾನರಸಸ್ಥಾನಗಳನ್ನು ಸ್ವತಃ ಗುರುತಿಸಿ ಅವುಗಳಿಂದ ಹೆಚ್ಚಿನ ಅರ್ಥಮಧುವನ್ನು ಹೀರಲು ಸಮರ್ಥರೂ ಆಗುವರು.

## ಭಾಗ ಎರಡು

**ಸೂಚನೆ** : ಉದ್ಧರಣಗಳು ಕಾವ್ಯ ಸಾಗಿದ ಅನುಕ್ರಮದಲ್ಲೇ ಉಂಟು. ಪ್ರತಿಯೊಂದು ಉದ್ಧರಣದ ಅಡಿಯಲ್ಲೂ ಆಕರವನ್ನು ಸೂಚಿಸಿದೆ. ಮೊದಲಿನ ಎರಡು ಅಕ್ಷರಗಳು ಸಂಪುಟಸೂಚಿಗಳು. ಒಡನೆ ಬರುವ ಸಂಖ್ಯೆ ಸಂಚಿಕೆಸೂಚಿ. ಮತ್ತೆ ಬರುವ ಸಂಖ್ಯೆಗಳು ಪಂಕ್ತಿಸೂಚಿಗಳು. ಅಧ್ಯಯನಕ್ಕೆ ಬಳಸಿದ ಆವೃತ್ತಿ : ಮೈಸೂರು ವಿಶ್ವವಿದ್ಯಾನಿಲಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ, ೧೯೭೧.

೧

ಪೂರ್ಣಮದು; ಪೂರ್ಣಮಿದು; ಪೂರ್ಣದಿಂ ಬಂದುದೀ
ಪೂರ್ಣಮಾ ಪೂರ್ಣದಿಂ ಪೂರ್ಣಮಂ ಕಳೆದೊಡಂ
ಪೂರ್ಣಮೆಯೆ ತಾನುಳಿವುದು

(ಅಯೋಧ್ಯಾಸಂಪುಟಂ—೧, ೭೨-೭೪)

ಇದು ಉಪನಿಷತ್ತಿನ ಸುಪ್ರಸಿದ್ಧ ಮಂತ್ರದ ಕನ್ನಡ ರೂಪ. ಮನುಷ್ಯನಿಗೆ ತನ್ನ ಪ್ರಜ್ಞೆಯ ವಿವಿಧ ಸ್ತರಗಳಲ್ಲಿ ಲಭಿಸುವ ಅನುಭವಗಳು ಆಯಾ ಸ್ತರಗಳಲ್ಲಿ ಸತ್ಯವೇ ಆಗಿವೆ. ಒಂದು ಸ್ತರದ ಅನುಭವವನ್ನು ಇನ್ನೊಂದು ಸ್ತರದ ಅನುಭವದಿಂದ ಅಳೆಯುವುದು ಸಲ್ಲದು. ಪ್ರತಿಯೊಂದೂ ಅದರದರಷ್ಟಕ್ಕೆ ಪೂರ್ಣವಾಗಿಯೇ ಇದೆ; ಅದರಿಂದ ಏನನ್ನು ತೆಗೆದರೂ ಅದಕ್ಕೆ ಏನನ್ನು ಸೇರಿಸಿದರೂ ಅದು ಪೂರ್ಣವಾಗಿಯೇ ಇರುತ್ತದೆ ಎಂಬುದಾಗಿ ಕವಿ ಇಲ್ಲಿ ಹೇಳುತ್ತಿದ್ದಾರೆ.

ಕವಿಕೃತಿಯುಮಾ ಬ್ರಹ್ಮಕೃತಿಯಂತೆ ಋತಚಿದ್
ವಿಲಾಸಮಾ ಕೃತಿಲೋಕಮೀ ಪ್ರಕೃತಿ ಲೋಕದೊಲೆ

ಬಹುಲೋಕ ಕಿರಣಮಯ ಸತ್ಯ ಸೂರ್ಯೋತ್ತಮನ
ಚಿತ್ ಪ್ರಕಾಶನದೊಂದು ರಸಲೋಕ ರೂಪ ಕಿರಣಂ (ಅ. ಸಂ.—೧, ೭೮-೮೧)

ಬ್ರಹ್ಮಕೃತಿಯಾದ ವಿಶ್ವ ನಮ್ಮ ಪಂಚೇಂದ್ರಿಯಗಳ ಚೌಕಟ್ಟಿನೊಳಗೆ ಎಷ್ಟು ಸತ್ಯವೋ ಕವಿ ಕೃತಿಯಾದ ಕಾವ್ಯ ಭಾವರಸಲೋಕದೊಳಗೆ ಅಷ್ಟೇ ಸತ್ಯ; ಒಂದೊಂದೂ ಅದರದರ ಷ್ಟಕ್ಕೆ ಪೂರ್ಣವಾಗಿಯೇ ಇದೆ. ಈ ದೃಷ್ಟಿಯನ್ನು ರೂಪಿಸಿಕೊಂಡು ಸಹೃದಯರು ಕಾವ್ಯ ರಸಾಸ್ವಾದನ ಮಾಡಬೇಕು; ಹೇಗೆಂದರೆ

ಕಾಣವೇಳ್ಕುಂ ಪೊಕ್ಕು ಕೃತಿನೇತ್ರ ಪಥದಿಂ
ಕವೀಂದ್ರಮತಿ ಲೋಕದೊಳ್ ಪೊಳೆವ ಋತ ಕಲ್ಪನಾ-
ಮೂರ್ತಂಗಳಂ, ಭಾವಚರ ನಿತ್ಯಸತ್ಯಂಗಳಂ (ಅ. ಸಂ.—೧, ೮೪-೮೬)

ಈಗ, "ಪೂರ್ಣ" ಪದವನ್ನು ಗಣಿತದ "ಅನಂತ" (infinity) ಎಂದು ಭಾವಿಸಿದ್ದೇ ಆದರೆ ೭೨-೭೪ ಸಾಲುಗಳಿಗೆ ಒಂದು ವಿಶಿಷ್ಟ ವೈಜ್ಞಾನಿಕಾರ್ಥ ಬರುತ್ತದೆ. ಈ ಕೆಳಗಿನ ಮೂರು ಸಂಖ್ಯಾ ಶ್ರೇಢಿಗಳನ್ನು (number sequences) ಪರಿಶೀಲಿಸಬೇಕು:

A : ೧, ೨, ೩, ೪, ೫, ೬, ೭, ೮, ೯, ೧೦, ೧೧, ೧೨, ೧೩, ೧೪, ೧೫, ೧೬, .....

B : ೧, ೩, ೫, ೭, ೯, ೧೧, ೧೩, ೧೫, .....

C : ೨, ೪, ೬, ೮, ೧೦, ೧೨, ೧೪, ೧೬, .....

ಪ್ರತಿಯೊಂದು ಶ್ರೇಢಿಯೂ ಅಂತ್ಯವೇ ಇಲ್ಲದೆ ಮುಂದುವರಿಯುವುದು. ಆದ್ದರಿಂದ ಇವುಗಳಿಗೆ ಅನಂತ ಶ್ರೇಢಿಗಳು ಎಂಬ ಹೆಸರುಂಟು. A ಒಂದು ಅನಂತ ಶ್ರೇಢಿ, B ಇನ್ನೊಂದು ಅನಂತ ಶ್ರೇಢಿ, C ಮತ್ತೊಂದು ಅನಂತ ಶ್ರೇಢಿ. A ಶ್ರೇಢಿಯಿಂದ ಬೆಸ ಸಂಖ್ಯೆಗಳನ್ನು ಮಾತ್ರ ಆಯ್ದು ಬೇರೆ ಒಂದು ಶ್ರೇಢಿಯನ್ನು ರಚಿಸಬೇಕು. ಅದು ೧, ೩, ೫, ೭, ೯, ....ಆಗುತ್ತದೆ; ಇದು B ಶ್ರೇಢಿ ಎಂಬುದು ಸ್ಪಷ್ಟ. Bಯನ್ನು Aಯಿಂದ ಹೊರ ತೆಗೆದ ಬಳಿಕ A ಶ್ರೇಢಿಗೆ ೨, ೪, ೬, ೮, ೧೦, .... ಎಂಬ ನೂತನ ರೂಪ ಬರುವುದು. ಇದು C ಶ್ರೇಢಿ. ಆದ್ದರಿಂದ A ಎಂಬ ಅನಂತದಿಂದ B ಎಂಬ ಅನಂತವನ್ನು ತೆಗೆದಾಗ ಉಳಿಯುವುದು C ಎಂಬ ಅನಂತ. ಪುನಃ B ಶ್ರೇಢಿಗೆ C ಶ್ರೇಢಿಯನ್ನು ಸೇರಿಸಿದಾಗ A ಶ್ರೇಢಿ ದೊರೆಯುವುದು. ಆದ್ದರಿಂದ B ಎಂಬ ಅನಂತಕ್ಕೆ C ಎಂಬ ಅನಂತವನ್ನು ಸೇರಿಸಿ ದಾಗ ದೊರೆಯುವುದು ಮತ್ತೆ A ಎಂಬ ಅನಂತ. ಹೀಗೆ ಅನಂತಕ್ಕೆ ಅನಂತವನ್ನು ಕೂಡಿಸಿ ದಾಗ ಇಲ್ಲವೇ ಅನಂತದಿಂದ ಅನಂತವನ್ನು ಕಳೆದಾಗ ಅನಂತವೇ ಸಿದ್ಧಿಸುವುದು. ಗಣಿತದಲ್ಲಿ ಬರುವ ಸಂಖ್ಯೆಗಳು, ಅವು ಎಷ್ಟೇ ದೊಡ್ಡವಾಗಿದ್ದರೂ, ಸಾಂತಸಂಖ್ಯೆಗಳೇ. ೫,೦೦,೦೦,೦೦೦ ಎಂಬ ಸಂಖ್ಯೆ ೧ಕ್ಕಿಂತ ಅದೆಷ್ಟೋ ದೊಡ್ಡದು ನಿಜ. ಆದರೂ ಅದು ಅನಂತವಲ್ಲ. ತಾತ್ತ್ವಿಕವಾಗಿ ನಾವು ೫,೦೦,೦೦,೦೦೦ಯನ್ನು ಅಂತೆಯೇ ಅದಕ್ಕಿಂತ ಬಲು ದೊಡ್ಡದಾದ ಯಾವುದೇ ಸಂಖ್ಯೆಯನ್ನು ಸಹ, ಎಣಿಕೆ ಮಾಡಿ ಪೂರೈಸಬಲ್ಲೆವು. ಅಲ್ಲದೇ ಇಂಥ ಯಾವುದೇ ಬೃಹತ್ಸಂಖ್ಯೆಯಿಂದ ಅದನ್ನೇ ಕಳೆದಾಗ ದೊರೆಯುವ ಉತ್ತರ ಸೊನ್ನೆ. ಆದ್ದರಿಂದ ಯಾವ ಸಂಖ್ಯೆಯನ್ನೂ ಅನಂತ ಎಂದು ಭಾವಿಸುವುದು ಸಾಧುವಲ್ಲ. ಹೀಗಾಗಿ ಗಣಿತಜ್ಞರು ಸಾಂತಸಂಖ್ಯೆಗಳ ಎಣಿಕೆಯ ಜಾಡನ್ನು ತೊರೆದು ಅನಂತ ಎನ್ನುವ ಹೊಸ ಪರಿಕಲ್ಪನೆಯನ್ನು ಉಪಜ್ಞಿಸಿ (invent) ಅದರ ವಿಶಿಷ್ಟ ಗಣಿತವನ್ನು ಸುಭದ್ರ ತಾರ್ಕಿಕ

ತಳಹದಿಯ ಮೇಲೆ ನೆಲೆಗೊಳಿಸಿದ್ದಾರೆ. ಅದನ್ನು ಸಾಂತಸಂಖ್ಯೆಗಳ ಗಣಿತದೊಡನೆ ಸಮೀಕರಿಸಬಾರದು. "ಅನಂತಮಂ ಸಾಂತದಲ್ಪಕ್ಕೆಳೆವ ಸಾಹಸಂ" ಅಸಂಗತ (inconsistent) ಫಲಿತಾಂಶಗಳನ್ನು ನೀಡುತ್ತದೆ. "ಅನಂತಮಂ ಅಳೆಯಲಳವೇ?" ಎಂಬಲ್ಲಿ ಇದೇ ಭಾವ ಅಡಕವಾಗಿದೆ.

೨

ನೆಲದಲ್ಲಿ, ಬಾನಲ್ಲಿ
ಕಡಲು ಕಾಡುಗಳಲ್ಲಿ ಪಕ್ಕಿ ಮಿಗ ಪುಲ್ಗಳಲಿ
ಆರ್ಯರಲಿ ಮೇಣ್ ಅನಾರ್ಯರಲಿ, ಕೇಳ್, ವಿಶ್ವಮಂ
ಸರ್ವತ್ರ ತುಂಬಿದಂತರ್ಯಾಮಿ ಚೇತನಂ ತಾಂ
ಪ್ರೇಮಾತ್ಮವಾಗಿರ್ಪುದು (ಅ. ಸಂ.—೧, ೨೪೬-೨೪೯)

ಭೌತವಿಶ್ವವನ್ನು ಸರ್ವತ್ರ ವ್ಯಾಪಿಸಿ ಅದರ ಪ್ರಸಕ್ತ ವಿನ್ಯಾಸವನ್ನು ರೂಪಿಸುವ ಹಾಗೂ ಭವಿಷ್ಯವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುವ ಸಾರ್ವತ್ರಿಕ ಗುರುತ್ವಾಕರ್ಷಣ ಬಲವನ್ನು ಈ ಸಾಲುಗಳಲ್ಲಿಯ "ಅಂತರ್ಯಾಮಿ ಚೇತನಂ" ಓದುಗರ ಮನಸ್ಸಿನಲ್ಲಿ ಸ್ಫುರಿಸುತ್ತದೆ. ಪ್ರೇಮ ಅಮೂರ್ತವಾಗಿ ವ್ಯಕ್ತಿಗಳನ್ನು ಹೇಗೊ ಹಾಗೆ ಗುರುತ್ವಾಕರ್ಷಣ ಬಲ ಮೂರ್ತವಾಗಿ ವಸ್ತುಗಳನ್ನು ಹತ್ತಿರಕ್ಕೆ ಸೆಳೆಯುವ ಒಂದು ಭೌತಪರಿಮಾಣ.

೩

ದೂರದರ್ಶಕ ಯಂತ್ರದಕ್ಷಿಯೊಳ್ ಕಣ್ಣಿಟ್ಟು,
ಗಗನವಿಜ್ಞಾನಿ ತಾಂ ರಾತ್ರಿಯಾಕಾಶದಲಿ
ಕಾಣ್ಬೊಂದು ತಾರಾಗರ್ಭದಂತೆ. (ಅ. ಸಂ.—೧, ೨೭೩-೨೭೫)

ಆಧುನಿಕ ವಿಜ್ಞಾನದಿಂದ ನೇರವಾಗಿ ಆಯ್ದ ಒಂದು ನಿದರ್ಶನವಿದು. ಇಲ್ಲಿ "ತಾರಾಗರ್ಭ" ಎಂದರೆ "ತಾರೆಗಳನ್ನು ಗರ್ಭದಲ್ಲಿ ತಳೆದಿರುವ ವಸ್ತು" ಎಂದು ಅರ್ಥವಿಸಬೇಕು. ಈ ವಸ್ತುವಿಗೆ ನೀಹಾರಿಕೆ (nebula) ಎಂದು ಹೆಸರು. ಬರಿಗಣ್ಣಿಗೆ ಮಂದ ಬೆಳಕಿನ ಮಸಕು ಮಚ್ಚೆಯಂತೆ ಕಾಣುವ ನೀಹಾರಿಕೆಯನ್ನು ವಿಜ್ಞಾನಿಗಳು ದೂರದರ್ಶಕದ ಮೂಲಕ ವೀಕ್ಷಿಸಿ ಅದು ಹೊಸ ನಕ್ಷತ್ರಗಳು "ಸಿದ್ಧ"ವಾಗುವ "ಕರ್ತಾರನ ಕಮ್ಮಟ" ಎಂದು ತೀರ್ಮಾನಿಸಿದ್ದಾರೆ. "ಸರಯೂ ತರಂಗಿಣಿಯ ಪಚ್ಚೆಯ ಪಸುರ್ ದಡದ ಮೇಲೆ" ದಶರಥ ಹೂಡಿದ ಪುತ್ರಕಾಮೇಷ್ಟಿ ಯಜ್ಞ ಕುಂಡ, "ವಿಪುಲ ದೂರದಲಿ" ನಿಂತು ನೋಡುವವನಿಗೆ, ಹೇಗೆ ಕಾಣಬಹುದು? ಕಪ್ಪು ನೀಲಾಕಾಶದ ಮಹಾವಿಸ್ತಾರದ ನಡುವಿನ ನೀಹಾರಿಕೆಯಂತೆ. ಈ ಕುಂಡ ದಶರಥಪುತ್ರರ ಉದಯಕ್ಕೆ ಸಾಂಕೇತಿಕವೂ ಆಗಿದೆ, ನೀಹಾರಿಕೆಯ ಗರ್ಭದಿಂದ ನಕ್ಷತ್ರಗಳು ಮೈದಳೆಯುವಂತೆ, ಎಂಬುದನ್ನು ಲಕ್ಷಿಸಬೇಕು.

೪

ಕೊಳ್ಳಿದಂ, ಕಾಮಧೇನುವಿನ ಕೊಡಗೆಚ್ಚಲಂ
ಪಾಲ್ಗರೆದು ಗೆಯ್ದ ಪಾಯಸಮಿದಂ ಮರುಭೂಮಿ
ನಗುವ ನಂದನವಪ್ಪುದಿದನೀಂಟೆ (ಅ. ಸಂ.—೧. ೩೫೫-೩೫೭)

ನಿಸರ್ಗವೇ ಇಲ್ಲಿ ಕಾಮಧೇನು. ವಿಜ್ಞಾನದ ಹಾದಿಯಲ್ಲಿ "ಹಿಂಸಾ ಕ್ರೌರ್ಯಮಿಲ್ಲದಿಹ ಪ್ರೇಮಕ್ಕೆ ನೋಂತು" ಅನ್ವೇಷಣೆಯನ್ನು ಮುಂದುವರಿಸಿದಾಗ ನಿಸರ್ಗಸುರಭಿಯ ಕೊಡ ಗೆಚ್ಚಲಿನಿಂದ ಸ್ರವಿಸಿದ ಅಮೃತವೇ ಪರಮಾಣುಶಕ್ತಿ. ಇದನ್ನು ರಚನಾತ್ಮಕ ಉದ್ದೇಶಕ್ಕೆ ಬಳಸಿಕೊಂಡರೆ ಖಂಡಿತವಾಗಿಯೂ ಅಳುವ ಬೆಂಗಾಡು ಹಸುರು ಬನವಾಗದಿರದು.

ಅಳುವ ಕಡಲಿನಲಿ
ತೇಲಿಬರುತಲಿದೆ
ನಗೆಯಹಾಯಿದೋಣಿ (ಅಡಿಗ)

೫

ಯಮಳ ತಾರೆಗಳಿರ್ದುಮೊಂದೆ ಚುಕ್ಕಿಯ ತೆರದಿ
ತೋರ್ಪ ನಕ್ಷತ್ರದೋಲ್ (ಅ. ಸಂ.—೧. ೩೮೪-೩೮೫)

ಖಗೋಳವಿಜ್ಞಾನ ಹಲವಾರು ಯಮಳ ನಕ್ಷತ್ರಗಳನ್ನು (binary stars) ಗುರುತಿಸಿದೆ. ಸರಿಸುಮಾರಾಗಿ ಸಮ ಗಾತ್ರದ, ಒಂದರಿಂದ ಇನ್ನೊಂದು ಸಾಕಷ್ಟು ದೂರದಲ್ಲಿರುವ ಮತ್ತು ಪರಸ್ಪರ ಗುರುತ್ವಾಕರ್ಷಣದ ಪರಿಣಾಮವಾಗಿ ಒಂದರ ಸುತ್ತ ಇನ್ನೊಂದು ಪರಿಭ್ರಮಿಸುತ್ತಿರುವ ಒಂದು ಜೊತೆ ನಕ್ಷತ್ರಗಳಿವು. ಸಮ ಬಲಿಶಾಲಿಗಳಾದ ಇಬ್ಬರು ವ್ಯಕ್ತಿಗಳು ಆಡುವ ಅಪ್ಪಾಲೆ ತಿಪ್ಪಾಲೆ ಆಟದಂಥ ವಿದ್ಯಮಾನವಿದು. ಯಮಳ ನಕ್ಷತ್ರಗಳ ನಡುವಿನ ಭೌತಾಂತರ ಮಾನವಮಾನಕದಲ್ಲಿ ಅಗಾಧವಾಗಿದ್ದರೂ ವಿಶ್ವಮಾನಕದಲ್ಲಿ ತೀರ ಸಾಧಾರಣ. ಅಲ್ಲದೇ ಭೂಮಿಯಿಂದ ಯಾವುದೇ ಯಮಳವ್ಯವಸ್ಥೆಯ ದೂರ ಬೃಹತ್ತಾಗಿ ಇರುವುದರಿಂದ ಅವು ಎರಡಿದ್ದರೂ ಒಂದೇ ಚುಕ್ಕಿಯಂತೆ (ನಕ್ಷತ್ರದಂತೆ) ಕಾಣುತ್ತವೆ. ಸುಮಿತ್ರಾಗರ್ಭದಲ್ಲಿದ್ದ ಯಮಳ ತಾರೆಗಳನ್ನು (ಲಕ್ಷ್ಮಣ ಮತ್ತು ಶತ್ರುಘ್ನ) ಕುರಿತು ಮೇಲಿನ ಸಾಲುಗಳಿವೆ. ಮುಂದಕ್ಕೆ ಇವರು ಹೇಗೆ ರಾಮ ಮತ್ತು ಭರತರನ್ನು ಅನುಕ್ರಮ ವಾಗಿ ಅನುಸರಿಸಿ "ಒಂದೆ ಚುಕ್ಕಿಯ ತೆರದಿ" ತೋರುತ್ತಾರೆ ಎಂಬುದನ್ನು ಇಲ್ಲಿ ಗಮನಿಸ ಬೇಕು. (ನೋಡಿ : ಅ. ಸಂ.—೧, ೬೮೪-೬೮೯).

೬

ತಾರಾಗಣಮೆ ತೋರ್ಬೆರಳ್
ತಾನಾಗೆ, ದೆಸೆಯರಿತು, ಕಳ್ತರೊಳೆ ನಡೆದರಯ್
ಸಾಹಸದ ಕಣ್ಣೊಹೆಯಿಂ. (ಅ. ಸಂ.—೨, ೨೦೯-೨೧೧)

ವಿಶ್ವಾಮಿತ್ರನೊಡಗೂಡಿ ರಾಮಲಕ್ಷ್ಮಣರು ಮಿಥಿಳಾಪುರಿಯೆಡೆಗೆ ಸಾಗುತ್ತಿದ್ದಾರೆ. ಕೌಶಿಕನಿಗೆ ಅದು ಚಿರಪರಿಚಿತ ದಾರಿಯಾಗಿದ್ದರೂ "ಕಣಿವೆಗಳನಿಳಿದದ್ರಿಗಳನಡರಿ ಬರು

ತಿರಲ್'' ಅಲ್ಲಿ ಬಟ್ಟೆ ತಪ್ಪಿದೆ. ರಾತ್ರಿ ಸಂಜನಿಸಿದೆ. ಇಂಥ ಅವೇಳೆಯಲ್ಲಿ ಅವರು ಆಕಾಶ ಕಾಯಗಳ, ಅಂದರೆ ಸ್ಥಿರ ನಕ್ಷತ್ರಚಿತ್ರಗಳ, ವಿನ್ಯಾಸಗಳನ್ನು ಅನುಲಕ್ಷಿಸಿ ಮುಂದುವರಿಯು ತ್ತಿದ್ದಾರೆ. ಉದಾಹರಣೆಗೆ, ಸಪ್ತರ್ಷಿಮಂಡಲ ಮತ್ತು ಕುಂತೀ (Cassiopeia) ನಕ್ಷತ್ರ ಪುಂಜಗಳ ನೆರವಿನಿಂದ ಧ್ರುವನಕ್ಷತ್ರವನ್ನು ಪತ್ತೆ ಹಚ್ಚುವುದು ಸುಲಭ (ನೋಡಿ ೨೦). ಈ ಸ್ಥಿರ ನಕ್ಷತ್ರ ಚಿತ್ರಗಳು ನೇರ ಉತ್ತರ ದಿಕ್ಕನ್ನು ಸೂಚಿಸುತ್ತವೆ. ಸಹಜವಾಗಿ ಇತರ ದಿಕ್ಕುಗಳು ಅನುಗತವಾಗುತ್ತವೆ. ಚಂದ್ರ; ಗ್ರಹಗಳು; ಮಹಾವ್ಯಾಧ, ವೃಶ್ಚಿಕ, ತ್ರಿಶಂಕು ಮುಂತಾದ ಪ್ರಸಿದ್ಧ ನಕ್ಷತ್ರಪುಂಜಗಳು; ಅಭಿಜಿತ್, ಸ್ವಾತೀ, ಲುಬ್ಧಕ, ಅಗಸ್ತ್ಯ ಮುಂತಾದ ಉಜ್ಜ್ವಲ ನಕ್ಷತ್ರಗಳು—ಇವುಗಳ ನೆರವಿನಿಂದಲೂ ದೆಸೆಯರಿತು ಕತ್ತಲೆಯಲ್ಲಿ ನಡೆಯ ಬಹುದು (ನೋಡಿ—೩೧, ೩೨). ಅಲ್ಲಿ ಸ್ಥಿರ ಧ್ರುವತಾರೆ, ಇಲ್ಲಿ "ವಜ್ರಮೌನದ ಅಚಿನ್ ನಿದ್ರೆ"ಯಲ್ಲಿರುವ ಶಿಲೆ: ಅಲ್ಲಿ ಮಹಾಪತಿವ್ರತೆ ಅರುಂಧತಿ (ನಕ್ಷತ್ರ), ಇಲ್ಲಿ ಶಿಲಾತಪಸ್ವಿನಿ ಅಹಲ್ಯೆ—ಈ ಸಾಮ್ಯಗಳನ್ನೂ ಗಮನಿಸಬೇಕು. ಸಪ್ತರ್ಷಿಮಂಡಲದ (Ursa Major) ೭ ನಕ್ಷತ್ರಗಳಿವು (ಪೂರ್ವದಿಕ್ಕಿನಿಂದ ತೊಡಗಿ): ಮರೀಚಿ, ವಸಿಷ್ಠ, ಆಂಗೀರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು. ವಸಿಷ್ಠನ ತೀರ ಒತ್ತಿಗೆ ಇದೆ ಮಂದ ಮಿನುಗಿನ ತಾರೆ ಅರುಂಧತಿ. ಪುಲಹ-ಕ್ರತು ರೇಖೆಯನ್ನು ಉತ್ತರಕ್ಕೆ ವಿಸ್ತರಿಸಿದಾಗ ದೊರೆಯುವ ಕ್ಷೀಣಪ್ರಕಾಶದ ತಾರೆಯೇ ಧ್ರುವನಕ್ಷತ್ರ.

## ೭

ದಿವ್ಯ ಮಾಯಾ ಶಿಲ್ಪಿ<br>
ಕಲ್ಪನಾದೇವಿಯಂ ಕಲ್ಲ ಸೆರೆಯಿಂ ಬಿಡಿಸಿ<br>
ಕೃತಿಸಿದನೆನಲ್ (ಅ. ಸಂ.—೨, ೨೮೫-೨೮೭)

ರಾಮನ ಪಾದಸ್ಪರ್ಶದಿಂದ "ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ" ಮತ್ತು ಅದರಿಂದ ಹೊರಬಂದು "ರಘು ತನೂಜನಡಿದಾವರೆಗೆ ಹಣೆ ಮಣಿದು ನಿಂದುದೊರ್ವ ತಪಸ್ವಿನೀ ವಿಗ್ರಹಂ." ಅಹಲ್ಯೋದ್ಧರಣದ ಈ ಸನ್ನಿವೇಶವನ್ನು ಕವಿ ಇನ್ನೊಂದು ದೃಷ್ಟಿ ಯಿಂದ ನೋಡುತ್ತ ಮೇಲಿನ ಸಾಲುಗಳನ್ನು ಬರೆದಿದ್ದಾರೆ: ಬಂಡೆಯನ್ನು ಕಂಡರಿಸಿದಾಗ ವಿಗ್ರಹ ದೊರೆಯುತ್ತದೆ, ನಿಜ; ಬಂಡೆಯಲ್ಲಿ ಈ ವಿಗ್ರಹ ಅಂತರ್ಗತವಾಗಿತ್ತು, ಶಿಲ್ಪಿ ಶ್ರೇಷ್ಠನೊಬ್ಬನಿಗೆ ಮಾತ್ರ ಇದನ್ನು ಕಾಣಲು ಹಾಗೂ ಹೊರತೆಗೆಯಲು ಸಾಧ್ಯವಾಯಿತು. ಶ್ರೀರಾಮನಾದರೂ ಮಾಡಿದ್ದು ಇದೇ ಕಲಾಕಾರ್ಯವನ್ನು ಎಂದು ಕವಿ ಇಲ್ಲಿ ಹೇಳು ತ್ತಿದ್ದಾರೆ. ಹೀಗೆ ಮೂಡಿಬಂದ ಕೃತಿಗೆ (ಅಹಲ್ಯೆಗೆ) ರಾಮ ಭಕ್ತಿಪೂರ್ವಕ ನಮಿಸುತ್ತಾನೆ, ಹೇಗೆಂದರೆ "ತನ್ನ ಕಾವ್ಯಕೆ ತಾಂ ಮಹಾಕವಿ ಮಣಿಯುವಂತೆ!" ಮೇಲೆ ಉದ್ಧರಿಸಿರುವ ಸಾಲುಗಳು ಸತ್ಯದ ಆವಿಷ್ಕಾರವಾಗುವ ಸಮಸ್ತ ಕ್ಷೇತ್ರಗಳಿಗೂ ಸಾರ್ವತ್ರಿಕವಾಗಿ ಅನ್ವಯ ವಾಗುತ್ತವೆ. ವಿಜ್ಞಾನರಂಗದಿಂದ ಒಂದು ಸುಪ್ರಸಿದ್ಧ ಉದಾಹರಣೆಯನ್ನು ಉಲ್ಲೇಖಿಸಿ ಇದನ್ನು ಸ್ಪಷ್ಟೀಕರಿಸಬಹುದು. ಸೌರವ್ಯೂಹದ ಆದಿಯಿಂದಲೂ ಸೂರ್ಯನ ಸುತ್ತ ಭೂಮಿ ಚಂದ್ರ ಮುಂತಾದ ಗ್ರಹೋಪಗ್ರಹಗಳೆಲ್ಲವೂ ಪರಿಭ್ರಮಿಸುತ್ತಿದ್ದುವು, ಇಂದಿಗೂ ಪರಿಭ್ರಮಿಸುತ್ತಿವೆ. ಆದರೆ ಜನ ಕಂಡದ್ದು, ಇಂದಿಗೂ ಕಾಣುವಂತೆ,

ಭೂಮಿಯ ಸುತ್ತ ಪರಿಭ್ರಮಿಸುತ್ತಿರುವ ವಿಶ್ವವನ್ನು! ಆದ್ದರಿಂದ ಅಂದಿನ ವಿಜ್ಞಾನಿಗಳನ್ನೂ ಒಳಗೊಂಡಂತೆ ಸಮಸ್ತರೂ ವಿಶ್ವಕೇಂದ್ರವೆಂದರೆ ಅಚಲವಾಗಿರುವ ನಮ್ಮ ಭೂಮಿಯೇ ಎಂದು ತೀರ್ಮಾನಿಸಿದ್ದರು. ಹೀಗೆ ಸತ್ಯ ಕಲ್ಲ ಸೆರೆಯಲ್ಲಿ ಸಿಕ್ಕಿಹಾಕಿಕೊಂಡಿತ್ತು. ಇದನ್ನು ಸೆರೆಬಿಡಿಸಿ ಸೂರ್ಯಕೇಂದ್ರವಾದವನ್ನು ಕೃತಿಸಿದವ ನಿಕೊಲಾಸ್ ಕೊಪರ್ನಿಕಸ್ (೧೪೭೩-೧೫೪೩) ಎಂಬ “ದಿವ್ಯ ಮಾಯಾ ಶಿಲ್ಪಿ.” ಇಂಥ ಒಬ್ಬೊಬ್ಬ ವಿಜ್ಞಾನಿಯೂ ಒಬ್ಬೊಬ್ಬ ಮಹಾಕವಿಯೇ, ಅವನ ಒಂದೊಂದು ಕೃತಿಯೂ ಮಹಾಕಾವ್ಯವೇ. (ನೋಡಿ—೧೮)

೮

ಕಲ್ಲಾದರೇನ್?

ತೀವ್ರ ತಪದಿಂದೆ ಚೇತನ ಸಿದ್ಧಿಯಾಗದೇಂ ? (ಅ. ಸಂ.—೨, ೨೯೮-೩೦೦)

ರಾಮಚರಣಚುಂಬನದ ಪರಿಣಾಮವಾಗಿ ಶಿಲಾತಪಸ್ವಿನಿ ಅಹಲ್ಯೆ ಮೈದಳೆದು “ರಘು ತನೂಜನಡಿದಾವರೆಗೆ ಹಣೆ ಮಣಿದು” ನಿಂತಿದ್ದಾಳೆ. ಈ ವಿದ್ಯಮಾನವನ್ನು ಇನ್ನೊಂದು ದೃಷ್ಟಿಯಿಂದ ನೋಡಬಹುದು: ರಾಮಪಾದಸ್ಪರ್ಶ ನಿಮಿತ್ತ ಮಾತ್ರ, ವಾಸ್ತವವಾಗಿ ಅಹಲ್ಯೆಯ ದೀರ್ಘ ತಪಸ್ಸೇ ಇದನ್ನು ಸಾಧಿಸಿತು. ಈ ಭಾವವನ್ನು ಮೇಲಿನ ಸಾಲುಗಳು ಒಳಗೊಂಡಿವೆ. ಆಧುನಿಕ ಭೌತವಿಜ್ಞಾನದ ಒಂದು ಆವಿಷ್ಕಾರವನ್ನು ಇವುಗಳಲ್ಲಿ ಕಾಣ ಬಹುದು. ಭೌತಪ್ರಪಂಚದ ಸಮಸ್ತ ವಸ್ತುಗಳನ್ನೂ ಜಡವಸ್ತುಗಳು, ಶಕ್ತಿರೂಪಗಳು ಎಂಬ ಎರಡು ಪ್ರಧಾನ ವಿಭಾಗಗಳಾಗಿ ವಿಂಗಡಿಸುವುದು ಸಾಧ್ಯ. ಗಾಳಿ, ನೀರು, ಕಲ್ಲು, ಲೋಹ ಮುಂತಾದವು ಜಡವಸ್ತುಗಳು. ಉಷ್ಣ, ವಿದ್ಯುತ್ತು, ಬೆಳಕು, ಕಾಂತತ್ವ, ಜಲಾ ಶಯದ ನೀರಿನಲ್ಲಿ ಅಡಕವಾಗಿರುವ ಕಾರ್ಯಸಾಮರ್ಥ್ಯ ಮುಂತಾದವು ಶಕ್ತಿರೂಪಗಳು. ಐನ್‌ಸ್ಟೈನರ (೧೮೭೯-೧೯೫೫) ಸಾಪೇಕ್ಷತಾ ಸಿದ್ಧಾಂತದ ಪ್ರಕಾರ ಜಡತ್ವ-ಶಕ್ತಿ ಭೇದ ಕೇವಲ ತೋರ್ಕೆಯದು (ಬರ್ಫ-ನೀರು ವ್ಯತ್ಯಾಸವನ್ನು ಕಲ್ಪಿಸಿಕೊಂಡರೆ ಒಂದು ಸ್ಥೂಲ ಭಾವನೆ ಬರುವುದಷ್ಟೆ); “ಘನೀಭವಿಸಿದ” ಶಕ್ತಿ ಜಡತ್ವವಾದರೆ “ದ್ರವೀಭವಿಸಿದ” ಜಡತ್ವ ಶಕ್ತಿ ಆಗುತ್ತದೆ. ಇವುಗಳ ನಡುವಿನ ಭೌತಸಂಬಂಧವನ್ನು $E=mc^2$ ಎಂಬ ಸರಳ ಸುಪ್ರಸಿದ್ಧ ಸಮೀಕರಣ ವ್ಯಕ್ತಪಡಿಸುವುದು. ಇದಕ್ಕೆ ಐನ್‌ಸ್ಟೈನರ ಶಕ್ತಿ-ದ್ರವ್ಯರಾಶಿ ಸಮಾನತಾ ಸಮೀಕರಣವೆಂದು ಹೆಸರು. ಇಲ್ಲಿ $E$ ಶಕ್ತಿಯನ್ನೂ $m$ ದ್ರವ್ಯರಾಶಿಯನ್ನೂ (ಜಡತೆ) $c$ ಬೆಳಕಿನ ವೇಗವನ್ನೂ ಪ್ರತಿನಿಧಿಸುತ್ತವೆ. ತಾತ್ತ್ವಿಕವಾಗಿ ಯಾವುದೇ ಜಡವಸ್ತು ವನ್ನು ಶಕ್ತಿಯಾಗಿಯೂ, ವಿಲೋಮತಃ, ಯಾವುದೇ ಶಕ್ತಿಯನ್ನು ಜಡವಸ್ತುವಾಗಿಯೂ ಮಾರ್ಪಡಿಸಬಹುದು. ಪರಮಾಣು ಬಾಂಬ್ ಮೊದಲಿನ ತತ್ತ್ವಕ್ಕೆ ಉದಾಹರಣೆಯಾದರೆ ಹೈಡ್ರೊಜನ್ ಬಾಂಬ್ ಎರಡನೆಯ ತತ್ತ್ವಕ್ಕೆ ಉದಾಹರಣೆ. ಈಗ, ಜಡತೆಯನ್ನು ಶಕ್ತಿ ಯಾಗಿ ಪರಿವರ್ತಿಸಲು ಬೇಕಾಗುವ ತಪಸ್ಸೆಂದರೆ ಮನುಷ್ಯ ನಡೆಸುವ ಮಹಾಪ್ರಯೋಗ ಗಳು.

ಇಲ್ಲಿ ಡಿವಿಜಿಯವರ ನುಡಿಗಳನ್ನೂ ಗಮನಿಸಬೇಕು.

ಜಡವೆಂಬುದೇನು ಸೃಷ್ಟಿಯಲಿ ಚೇತನಸುಪ್ತಿ<br>
ಅಡಗಿ ನಿದ್ರಿಪುದಲ್ಲಿ ಚೈತನ್ಯದಗ್ನಿ

ಮಿಡಿಯೆ ಪರಸತ್ತ್ವ ವಿದ್ಯುದ್ದೀಪ್ತಿಯದನಾಗ
ನಡೆವುದದು ಜೀವಿವೊಲು ಮಂಕುತಿಮ್ಮ

ಶಿಲೆಯಾಗಿ ನಿದ್ರಿಸುತ್ತಿರ್ದಾಕೆ ರಾಮಪದ
ತಲದ ಸಂಸ್ಪರ್ಶದಿಂದೆದ್ದು ನಿಂತಂತೆ
ಚಲಿಸದೆನಿಸಿದ ಜಡವನಾವ ಗಾಳಿಯೊ ಸೋಕಿ
ಬಲ ತೀವಿ ಚರಿಪುದದು ಮಂಕುತಿಮ್ಮ

೯

ಕರ್ದ್ದಿಂಗಳಾಗಸದ
ಕರ್ಮಣೆಯ ಕುಟ್ಟಿಮದಿ ಕೆದರಿರ್ದ ಪೂಗಳಂ
ಗುಡಿಸಲೆಂದಿರುಳವೆಣ್ ಕೈಲಾಂತು ನಿಡುನೀಳ್ದ
ಕೆಂಗೆಂಡದುರಿಯ ಸಮ್ಮಾರ್ಜನಿಯೊ, ಪೊಳ್ತಿಳಿಯೆ
ಕಳ್ತಲೆಯ ದಾರಿ ನಡೆಯಲನಂತ ಯಾತ್ರಿಕಂ,
ಕಾಲಪುರುಷಂ, ಪಿಡಿದ ಪೊಂಜೊ ತಾಂ ಪೇಳೆಂಬಿನಂ
ನೆತ್ತರುರಿಗೂದಲಂ ಬೀಸಿ ರಂಜಿಸುತಿರ್ದ ಆ
ಭೀಷ್ಮ ಭೀಷಣ ಧೂಮಕೇತು (ಅ. ಸಂ.—೩, ೬೬-೭೩)

ಚಂದ್ರರಹಿತ ರಾತ್ರಿಯ ಆಕಾಶದ ಗಭೀರತೆಯಲ್ಲಿ ಧೂಮಕೇತುವಿನ ದೃಶ್ಯವನ್ನು ಬಲು ಮನೋಜ್ಞವಾಗಿ ಚಿತ್ರಿಸುವ ಸಾಲುಗಳಿವು. ಬಿಳಿಗೊಂಡೆ ಮಂಡೆ, ಅದರಿಂದ ಸೂರ್ಯ ವಿಮುಖವಾಗಿ ಚಾಚಿರುವ ಮಸಕು ಬಾಲ—ಇದು ಧೂಮಕೇತುವಿನ ಸ್ಥೂಲ ಚಿತ್ರ. ಈ ದೃಶ್ಯ ಎಷ್ಟು ವಿಚಿತ್ರವೋ ಅಷ್ಟೇ ಅಪೂರ್ವ ಕೂಡ. ಆದ್ದರಿಂದ ಧೂಮಕೇತುವಿನ ದರ್ಶನ ಅನಿಷ್ಟಸೂಚಕವೆಂದು ಜನ ನಂಬಿದ್ದಿದೆ; ಧೂಮಕೇತು ಕಾಣಿಸಿಕೊಂಡಾಗ ಭೂಮಿಯ ಮೇಲೆ ಸಂಭವಿಸಿದ ವಿಪ್ಲವ, ದುರ್ಘಟನೆಗಳನ್ನು ಧೂಮಕೇತುವಿಗೆ ಹೊಂದಿಸಿದ್ದೂ ಇದೆ. ಧೂಮಕೇತು ಸೂರ್ಯನ ಸುತ್ತಲೂ ಸರಿಸುಮಾರಾಗಿ U-ಆಕಾರದ ಪಥದ ಮೇಲೆ ಸಂಚರಿಸುವುದು. ಆಕಾಶದ ಆಳದಿಂದ ಬಂದು, ಸೂರ್ಯನ ಸಮೀಪವಿರುವಾಗ ನಮಗೆ ಕಾಣಿಸಿಕೊಂಡು, ಮುಂದೊಂದು ದಿವಸ ಹಾಗೆಯೇ ಅಂತರ್ಧಾನವಾಗಿ ಹೋಗುತ್ತದೆ. ಈ ದಿವಸಗಳಲ್ಲಿ ಮಾತ್ರ ಅದರ ಚಲನೆಯನ್ನು ಗುರುತಿಸಬಹುದು.

ಶೇಕ್‌ಸ್ಪಿಯರ್, ಕವಿ 'ಜೂಲಿಯಸ್ ಸೀಸರ್' ನಾಟಕದಲ್ಲಿ ಧೂಮಕೇತು ಪ್ರತಿಮೆಯನ್ನು ಬಳಸಿರುವ ಪರಿಗಮನಿಸಬಹುದು :

ಕಾಣಿಸವು ಧೂಮಕೇತುಗಳು ತಿರುಕರು ಸಾಯೆ
ಸಾಮ್ರಾಟರಂತ್ಯಮಂ ಬಾನೆ ತಾನುರಿದು ಬಿತ್ತರಿಸುವುದು

೧೦

ನೆಯ್ದಾಳುತಿದೆ ಜಗವನೊಂದತಿವಿರಾಣ್ ಮನಂ
ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ

ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯ ಭಾವಮಂ
ನೀಡಿ (ಅ. ಸಂ.—೩, ೧೩೧-೧೩೪)

ಗುರುತ್ವಾಕರ್ಷಣ ನಿಯಮವನ್ನು ಈ ಸಾಲುಗಳು ಧ್ವನಿಸುತ್ತವೆ (ನೋಡಿ-೨). ಭೂಮಿಯ ಮೇಲೆ ನಾವು ಸ್ವೇಚ್ಛೆಯಂತೆ ಸಂಚರಿಸಬಲ್ಲೆವು ಎಂಬ ಭ್ರಾಂತಿ ನಮ್ಮಲ್ಲಿದೆ. ಕಡಿದಾದ ಚಡಾವು ಏರುವಾಗ ನಮ್ಮ ಸಂಚಾರಸ್ವಾತಂತ್ರ್ಯ ಅದೆಷ್ಟು ಸೀಮಿತ ಎಂಬುದು ಅರಿವಾಗುವುದು. ಇನ್ನು ಮೇಲಕ್ಕೆ ನೆಗೆದಾಗ, ಹೇಗೆ ಲಾಗಹೊಡೆದರೂ ನೆಲಕ್ಕೇ ಬೀಳುವುದ ರಿಂದ, ನಮ್ಮ ಪಾರತಂತ್ರ್ಯದ ಬಿಸಿ ಚೆನ್ನಾಗಿ ತಟ್ಟುತ್ತದೆ. ಭೂಮಿಯ ಸಮೀಪತಮ ಆಕಾಶ ಕಾಯವಾದ ಚಂದ್ರನಲ್ಲಿಗೆ ಹೋಗಬೇಕಾದರೂ ನಾವು ಸಾಧಿಸಬೇಕಾದ ಮಹಾವೇಗ ಹಾಗೂ ತಾಂತ್ರಿಕ ಪ್ರಗತಿಯನ್ನು ಗಮನಿಸುವಾಗ ನಮ್ಮ ದಾಸ್ಯದ ಪೂರ್ಣ ಜ್ಞಾನ ನಮಗೆ ಗೊತ್ತಾಗುವುದು. ಹೀಗೆ ಗುರುತ್ವಾಕರ್ಷಣೆ ನಮಗೆ "ಇಚ್ಛೆಯಾ ಸ್ವಾತಂತ್ರ್ಯ ಭಾವಮಂ ನೀಡಿ" ನಮ್ಮನ್ನು "ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿ" ಹಾಕಿದೆ.

## ೧೧

ಕಾಣ್ಬುದಸದಳಮಲಾ
ಮನುಜ ಮನದುತ್ತರಮುಖಿಗೆ ಬಿದಿಯ ಚಿರತಾರೆ ! (ಅ. ಸಂ.—೪, ೯-೧೦)

"ಪಿರಿಯಂಗೆ ರಾಮಂಗೆ ಪಟ್ಟಂಗಟ್ಟಿ ಬೇಗದಿಂದಿರದೆ ತಾಂ ಪಾರಲೌಕಿಕದೆಡೆಗೆ ತನ್ನಾತ್ಮಮಂ ತಿರುಗಿಸಲ್ಕೆಳಸಿ"ದ ದಶರಥ ವಿಧಿಯ ಕೈಗೊಂಬೆಯಾಗಿ ಅದೇ ಪ್ರಿಯಪುತ್ರ ನಿಗೆ ವನವಾಸನಿರೂಪವನ್ನು ನೀಡುವಂತಾಗುತ್ತದೆ. ದೊರೆ ಮೂರ್ಛೆ ಹೊಂದಿದ್ದಾನೆ. ರಾಮ ವನಗಾಮಿಯಾಗಲು ಸ್ವಸಂತೋಷದಿಂದ ಮುಂದಾಗಿದ್ದಾನೆ. "ಕ್ಷಣಪೂರ್ವದೊಳ್ ಹರ್ಷದಾಗರಮಾಗಿ ನಲಿಯುತಿರ್ದಾ ಅಯೋಧ್ಯೆ ತಾಂ ಶೋಕಸಾಗರಮಾಯ್ತೆನಲ್, ಕಾಣ್ಬುದಸದಳಮಲಾ ಮನುಜ ಮನದುತ್ತರಮುಖಿಗೆ ಬಿದಿಯ ಚಿರತಾರೆ!" ಉತ್ತರ ಮುಖಿ ಅಥವಾ ದಿಕ್ಸೂಚಿ ಒಂದು ಉಪಕರಣ. ಇದರೊಳಗೊಂದು ಚಲನಶೀಲ ಕಾಂತ ಸೂಜಿ (magnetic needle). ಉಪಕರಣವನ್ನು ಬೇಕಾದಂತೆ ತಿರುಗಿಸಿ ಮಟ್ಟಸ ಸ್ಥಾನದಲ್ಲಿ ಟ್ಟಾಗ ಸೂಜಿ ಉತ್ತರ-ದಕ್ಷಿಣ ದಿಕ್ಕುಗಳಿಗೆ ಅಭಿಮುಖವಾದ ವಿನ್ಯಾಸವನ್ನು ತಳೆದು ನಿಶ್ಚಲ ವಾಗುತ್ತದೆ. ಸೂಜಿಯಲ್ಲಿ ಗುರುತಿಸಿರುವ ಉತ್ತರ ಕೊನೆ ಉತ್ತರಕಾಂತೀಯ ಧ್ರುವವನ್ನು (magnetic north) ಸೂಚಿಸುತ್ತದೆ. ಈಗ, ಸ್ಥಿರಧ್ರುವನಕ್ಷತ್ರ ಇರುವ ದಿಕ್ಕು ನಿಜ ಉತ್ತರ (true north). ಇವೆರಡೂ ಬೇರೆ ಬೇರೆ. ಆದ್ದರಿಂದ ಉತ್ತರಮುಖಿಗೆ ಚಿರತಾರೆಯನ್ನು (ಧ್ರುವನಕ್ಷತ್ರ) "ಕಾಣ್ಬುದಸದಳ."

## ೧೨

ಮರ್ತ್ಯದಾಳ್ ಬಿದಿಯೊಡನೆ ತಾಂ ನಡೆಯುವನ್ನೆಗಂ
ಕಲಿ; ಬಿಂಕದಿಂ ಬಿದಿಗಿದಿರ್ ಮಲೆಯೆ ಬಲಿ (ಅ. ಸಂ.—೪, ೧೨೯-೧೩೦)

ಇಲ್ಲಿ "ಬಿದಿ" (ವಿಧಿ) ಪದದ ಬದಲು "ನಿಸರ್ಗ" ಪದವನ್ನು ಆದೇಶಿಸಿಕೊಂಡರೆ ಅರ್ಥಕ್ಕೆ ಹೊಸ ವ್ಯಾಪ್ತಿ ಬರುತ್ತದೆ. ನಿಸರ್ಗಕ್ಕೆ ಅನುವರ್ತಿಯಾಗಿದ್ದಷ್ಟು ಕಾಲ ಮಾನವನ

ಬಾಳು ಹಸನಾಗಿರುತ್ತದೆ; ಅದನ್ನು ವಿರೋಧಿಸಿ ನಡೆಯಲು ಯತ್ನಿಸಿದರೆ ಒಂದಲ್ಲ ಒಂದು ದಿವಸ ಅವನ ಸರ್ವನಾಶ ಖರೆ.

೧೩

ನಡುರಾತ್ರಿ
ತಾರಾಖಚಿತ ನೀಲಿಮೆಯನುಟ್ಟು ನಿಂದತ್ತು
ನೀರವಂ. ತತ್ತಳಿಸಿ ನೋಡುತಿರ್ದಿರ್ದಂತೆ
ಪಜ್ವಳಿಸುತರಿಲೊಂದು ಬಾನ್‌ಪಟದೊಳುರಿದುರಿದು
ಕರ್ಬಿತ್ತರಕೆ ಬೆಂಕೆಗೆರೆಯ ಚಿತ್ತಾರಮಂ
ಮೆತ್ತಿ ಬರೆದರಮನೆಯ ಕತ್ತಲೊಳ್ ಹುದುಗಿರ್ದ
ವಸ್ತುಗಳ್ಗಿತ್ತು ನೆಳಲಂ. ಜವಂ ಜವದಿಂದ
ಮರೆಯಾಯ್ತು ಮುಳುಗಿ. (ಅ. ಸಂ.—೫, ೮೨-೮೯)

ಉಲ್ಕಾಪಾತವನ್ನು ಬಲು ಮನೋಹರವಾಗಿ ವರ್ಣಿಸುವ ಸಾಲುಗಳಿವು (ನೋಡಿ—೪೧).

೧೪

ರವಿಯಾಕರ್ಷಣೆಯನುಳಿಯೆ,
ನಿಚ್ಚನೇಮಂಗೆಟ್ಟು, ಬಟ್ಟೆ ನಿಟ್ಟೆಗೆ ತಪ್ಪಿ,
ತತ್ತರಿಸಿ, ನೀಲ ಶೂನ್ಯಕ್ಕುರುಳುರುಳುವಿಳೆಯಂತೆ (ಅ. ಸಂ.—೬. ೭೩-೭೫)

"ಮನುಜರೊಲ್ಮೆಯ ಸವಿಯನೊಂದಿನಿತುಮಂ ಕಾಣದೆ, ಮಿಗದ ತೆರದಿ ವಿದುಳಿಲ್ಲ ದೆಯೆ ಬೆಳೆದು ಜಡತೆವೆತ್ತಿರ್ದಸೋಂಬೆ" ಮಂಥರೆ. ಕೇಕಯ ರಾಜ ಇವಳನ್ನು ತನ್ನ ಪ್ರಿಯಪುತ್ರಿ ಕೈಕೆಗೆ ದಾದಿಯಾಗಿ ನೇಮಿಸಿದಾಗ "ಮಂಥರೆಯ ಬಾಳ್ ನಿಶೆಗೆ ಶಶಿಯುದಿಸಿ ದಂತಾಯ್ತು." ಮುಂದೆ ಕೈಕೆ ಭರತನನ್ನು ಬೆಸಲೆಯಾದಾಗ "ಮಂಥರೆಗೆ ಮೂರನೆಯ ಕಣ್ ಮೂಡಿದಂತಾಯ್ತು." ಆಕೆ ಕೈಕೆ ಭರತರನ್ನು ಅದೆಷ್ಟು ನೆಚ್ಚಿಕೊಂಡಿದ್ದಳೆಂದರೆ "ನರರನ್ಯರಿಲ್ಲಾಯಿತ್ತು ಮಂಥರೆಯ ಲೋಕಕ್ಕೆ ಕೈಕೆ ಭರತರ್ ವಿನಾ.... ಭರತನಾಳ್ಕೆಗಾಗಿ ಈ ಪೃಥಿವಿ!" ಮುಂದಿನ ಕತೆ ಗೊತ್ತೇ ಇದೆ. ರಾಮ, ಲಕ್ಷ್ಮಣ, ಸೀತೆಯರು ಅರಣ್ಯಕ್ಕೆ ತೆರಳಿ ದ್ದಾರೆ. ದಶರಥ ಸಾವನ್ನಪ್ಪಿದ್ದಾನೆ. ದುಃಖಮಲಿನ ಅಯೋಧ್ಯೆಗೆ ಭರತ ತನ್ನ ಮಾವನ ಮನೆಯಿಂದ ಆಗಮಿಸುತ್ತಾನೆ. "ಕೇಳ್ದು ಭರತಂ ಬಂದುದಂ ಮಂಥರೆಯ ಮನಂ ಕೇಗಿ ಕುಣಿದುದು, ಹೀಲಿಗರಿ ಗೆದರಿ." ಭರತ ದೊರೆ ಆಗುತ್ತಾನೆ ಎಂಬ ಉತ್ಸಾಹ ಸಂಭ್ರಮ ಗಳಲ್ಲಿದ್ದವಳಿಗೆ ಮೊದಲು ದೊರೆತದ್ದು ಶತ್ರುಘ್ನನಿಂದ ತಾಡನೆ, "ಅಯ್ಯೊ ದಮ್ಮಯ್ಯ, ಬಾರಣ್ಣಯ್ಯ, ರಕ್ಷಿಸೋ" ಎಂದು ಅವಳು ಭರತನನ್ನು ಉದ್ದೇಶಿಸಿ ಹಲುಬಿ ಮೊರೆ ಇಟ್ಟಾಗ ಆತನಿಂದ ಲಭಿಸಿದ್ದು ಭರ್ತ್ಸನೆ, "ತೊಲಗೆಲೆ ಕರೂಪಿ, ಓ, ತೊಲಗು, ಕಣ್ಬೊಲ ದಿಂದೆ ತೊಲಗಾಚೆ, ಪಾಪಿ, ಬಳಿಸಾರದಿರ್; ನಿಲ್ಲದಿರ್." ಭರತನೆಂಬ ರವಿಯ ಆಕರ್ಷಣೆ ಒಂದರಿಂದಲೇ ನೆಲೆಪಡೆದಿದ್ದ ಮಂಥರೆಯ ಏಕೈಕ ಆಸರೆ ಈಗ ತುಂಡಾಗಿ ಹೋಗಿದೆ. ಇನ್ನವಳಿಗೆ ಮುಂಬಟ್ಟೆ ಸೊನ್ನೆ.

ಭೂಮಿ-ಸೂರ್ಯರ ಸಂಬಂಧವನ್ನು ಈಗ ಪರಿಶೀಲಿಸೋಣ. ಭೂಮಿ ನಿರಂತರ

ವಾಗಿಯೂ ನಿಯಮಬದ್ಧವಾಗಿಯೂ ಸೂರ್ಯನ ಸುತ್ತ ಪರಿಭ್ರಮಿಸುತ್ತಿರುವುದು ಇವೆರಡರ ನಡುವಿನ ಪರಸ್ಪರಾಕರ್ಷಣೆಗಳ ಪರಿಣಾಮವಾಗಿ ಎಂಬುದು ಈಗ ಸುವಿದಿತ ಸಿದ್ಧಾಂತ. ಈ ಆಕರ್ಷಣೆಗಳಲ್ಲಿ ಭೂಮಕಾಯವಾದ ಸೂರ್ಯನ ಆಕರ್ಷಣಬಲ ಅಲ್ಪ ಕಾಯವಾದ ಭೂಮಿಯ ಆಕರ್ಷಣಬಲಕ್ಕಿಂತ ಅದೆಷ್ಟೋ ಪಟ್ಟು ಅಧಿಕ. ಹೀಗಾಗಿ, ಮೊತ್ತದಲ್ಲಿ ಸೂರ್ಯಾಕರ್ಷಣಬಲವೇ ಭೂಕಕ್ಷೆಯನ್ನೂ ಕಕ್ಷಾವೇಗವನ್ನೂ ಕಕ್ಷಾವಧಿ ಯನ್ನೂ ನಿರ್ಧರಿಸುತ್ತದೆ. ಇಂಥ ಜೀವದಾಯಿನಿ ಆಕರ್ಷಣ ಬಳ್ಳಿಯನ್ನು ಭೂಮಿ ಕಡಿದು ಕೊಂಡದ್ದೇ ಆದರೆ ಅದಕ್ಕೆ ವಿಶಾಲ ವಿಶ್ವದ ಅನಂತ ಶೂನ್ಯತೆಯಲ್ಲಿ ವಿನಾಶವೊಂದೇ ಗತಿ—"ಜಲಮಂ ತಿರಸ್ಕರಿಸಿ ಪೊರಮಟ್ಟ ತಾವರೆಯೆರ್ದೆಗೆ ರವಿಯೆ ಗುರುವೈರಿ ತಾನೆಂತುಟಂತೆ." (ನೋಡಿ—೨೧, ೨೨)

೧೫

ಚಿಂತೆಗೆ ಅತೀತಮಪ್ಪಾ ಸೃಷ್ಟಿಯ ರಹಸ್ಯಮಂ
ಚಿಂತಿಸುವ, ಚರ್ಚಿಸುವ, ಸಿದ್ಧಾಂತಗೊಳಿಸಿಯುಂ
ಸಂದೇಹಗೊಂಡದಂ ಮತ್ತೊಂದರಿಂ ತಿದ್ದಿ, ಮೇಣ್
ತತ್ತರಿಸುವನ್ನೆಗಂ ಬುದ್ಧಿ ಜಿಜ್ಞಾಸಿಸುತೆ
ಮುನ್ನಡೆವ ಸಾಹಸ (ಅ. ಸಂ.—೭, ೧೬೧-೧೬೬)

ವೈಜ್ಞಾನಿಕ ವಿಧಾನವನ್ನು ಸೂತ್ರರೂಪದಲ್ಲಿ ಈ ಸಾಲುಗಳು ಹೇಳುತ್ತವೆ. ಇದರ ಮುಖ್ಯ ಹಂತಗಳು ಹೀಗಿವೆ: ಲಕ್ಷ್ಯದಲ್ಲಿರುವ ವಿದ್ಯಮಾನಕ್ಕೆ ಕಾರಣವಾಗುವ ಸಕಲ ಕಾರಕ ಗಳನ್ನೂ ಅನುಲಕ್ಷಿಸಿ ಒಂದು ಊಹೆಯ ಮಂಡನೆ; ಈ ಊಹೆಯನ್ನು ಅದೇ ವಿದ್ಯಮಾನದ ವಿವಿಧ ಮುಖಗಳಿಗೂ ಸನ್ನಿವೇಶಗಳಿಗೂ ಅನ್ವಯಿಸಿ, ಸಂದೇಹಿಸಿ, ವಿವರಗಳನ್ನು ಸಂಗ್ರ ಹಿಸಿ ಬಳಿಕ ಪರಿಷ್ಕೃತ ಊಹೆಯ ಮಂಡನೆ; ಹೀಗೆಯೇ ಮುಂದುವರಿದು ಪೂರ್ಣ ಸಿದ್ಧಾಂತದ ಸ್ಥಾಪನೆ.

೧೬

ದೇವಾಸುರರ ಮಂದರದ ಮೇಣ್
ವಾಸುಕಿಯ ಮಥನ ದ್ವೈತ್ಯತೆಗೆಂತು ಮುನ್ನೊಮ್ಮೆ
. . . . . . . . . . . . . . . . . . . .
. . . . . . . . . . . . . . . . . . . .
ಹುಟ್ಟು ಮೂಡಿಲ್ಲದುದರಿಂದೆಸೆವುದಾ ದೀವಿ
ಮೂಗುವಟ್ಟಂತೆವೋಲ್ (ಅ. ಸಂ.—೯, ೩೫೩-೩೮೪)

ಇದೊಂದು ಮಹೋಪಮೆ. ವನವಾಸಿ ರಾಮನನ್ನು ಅಯೋಧ್ಯೆಗೆ ಕರೆತರಲು ಭರತ ಕಾಡಿಗೆ ಹೋಗಿದ್ದಾನೆ. ರಾಮನನ್ನು ಮೊದಲ ಬಾರಿಗೆ ಕಂಡಾಗ "ನುಗ್ಗಿ ಮುಂದೋಡಿದನ್ ಭರತನುನ್ಮಾದವೇರ್ದನೋಲ್, .... 'ಅಣ್ಣಯ್ಯ ಓ' ಎಂದೊಂದೆ ಸೊಲ್ಲೊರಲ್ದಡಿಯ ನೆಯ್ದುವ ಮುನ್ನಮೆ ಸಡಿಲ್ದು ದೊಪ್ಪನೆ ಕೆಡೆದನಿಳೆಗೆ, ತನ್ನ ಭಾರಕೆ ತಾನೆ ಬೇರು ಬಳಲಿದ ತರುಣತರು ಬೀಳುವಂತೆ"—ಇದು ಭರತನ ಮಾನಸಿಕ ಸ್ಥಿತಿ. ಆಗ ರಾಮನ ಮಾನಸಿಕ

ಸ್ಥಿತಿ ಹೇಗಿತ್ತು? ಲಕ್ಷ್ಮಣನಿಗೆ ರಾಮ ಹೇಳುತ್ತಾನೆ "…. ನಿನ್ನವೋಲೆನಗಾತನುಂ ಪ್ರಿಯಂ... ವತ್ಸ ಲಕ್ಷ್ಮಣ, ಅಯ್ಯೋ ಹನಿ ತುಂಬುತಿದೆ ಕಣ್ಗೆ, ಕಾರಣವನರಿಯೆನೇತಕೊ ಕಂಠಕೊದಗುತಿದೆ ಶಿಶುಗದ್ಗದಂ: ತಾಯಿ ತಂದೆಯರನಿನ್ನೊರ್ಮೆ ಕಾಣ್ಬೆವೆಂಬುಲ್ಲಾಸಮದೆ ದಿಟಂ ಕಾರಣಂ." ತಂದೆಯ ಅಪಮೃತ್ಯುವಿನ ಸಂಗತಿ ರಾಮನಿಗೆ ಇನ್ನೂ ತಿಳಿದಿಲ್ಲ. ಆದರೆ ದಶರಥ ಎಲ್ಲೂ ಕಾಣುತ್ತಿಲ್ಲ. ಭರತನ ಜಟೆ, ಕಳೆಗುಂದಿದ ಮುಖ, ದುರ್ದರ್ಶ ಸಂಕಟಾಕೃತಿ ಅಮಂಗಳವನ್ನು ಸಾರುವಂತಿವೆ. "ತಂದೆಗಸುಖವೆ? ನೆಲಕೆ ಕಂಟಕವೆ? ನೆಮ್ಮದಿಯ ಕೇಡೆ ತಾಯಂದಿರಿಗೆ? ಬಾಧೆಯೇನಾದುದೇನೆಮ್ಮ ಕೋಸಲ ಜನಕೆ?" ಎಂಬುದಾಗಿ ಭರತ ರಾಮನನ್ನು ಕಾತರತೆಯಿಂದ ಪ್ರಶ್ನಿಸುತ್ತಾನೆ. ಇಂಥ ಮಾನಸಿಕ ಸ್ಥಿತಿಗಳ ಸಂಘರ್ಷದಲ್ಲಿ ಮೂರ್ಛೆ ತಳೆದ ಭರತ ರಾಮನ ಶಿಶಿರೋಪಚಾರಕ್ಕೆ ಕಣ್ದೆರೆದು "ಜನಕಜಾರಮಣ ಧೀರೋದಾತ್ತ ವಕ್ಷವಾರ್ಧಿಯ ನೀಲ ನಾವೆಯೊಳ್ ತೇಲಿದನು ಶಾಂತಿಯ ತುರೀಯಕೆ." ಈ ಸನ್ನಿವೇಶವನ್ನು, ಮೇಲೆ ಉದಾಹರಿಸಿರುವ ಸಾಲುಗಳಲ್ಲಿ, ಒಂದು ಭೌತ ಘಟನೆಗೆ ಕವಿ ಹೋಲಿಸಿದ್ದಾರೆ. ಅಟ್ಲಾಂಟಿಕ್ ಹಾಗೂ ಪೆಸಿಫಿಕ್ ಮಹಾಸಾಗರಗಳು ಡಿಕ್ಕಿಗೊಂಡಾಗ ತಲೆ ಎತ್ತುವ ಪುಟ್ಟ ದ್ವೀಪ, ಕಾಲಾಂತರದಲ್ಲಿ ಆ ಬಂಜರಿನಲ್ಲಿ ನಳನಳಿಸಿ ನಗುವ ಜೀವ ರಾಶಿ—ಇದು ಆ ಘಟನೆ. ರಾಮ-ಭರತರ ಮಾನಸಿಕ ಕ್ಷೋಭೆಗಳ ಸಂಘರ್ಷದಿಂದ ಎಚ್ಚರ ತಪ್ಪಿ ಬಿದ್ದ ಭರತ ಅಣ್ಣನ ಶುಶ್ರೂಷೆಯಿಂದ ಎಚ್ಚರ ಪಡೆದು ಎದ್ದದ್ದನ್ನು ಈ ಘಟನೆಯ ಮೂಲಕ ಕವಿ ಪ್ರತಿಮಿಸಿದ್ದಾರೆ.

೧೭

ಸಂಜೆ, ಪಡುವಲ್ ಪಣೆಯ ಮೇಲೆ, ಪನಿ
ಕಿಡಿಯಾದ ಮಾಳ್ಕೆಯಿಂ, ತಳತಳಿಸುತಿರೆ ಬೆಳ್ಳಿ (ಅ. ಸಂ.—೧೦, ೩೪೦-೩೪೧)

ಬೆಳ್ಳಿ ಎನ್ನುವ ಪದವನ್ನು ಶುಕ್ರಗ್ರಹಕ್ಕೆ ಬಳಸುವುದು ವಾಡಿಕೆ. ಉಜ್ಜ್ವಲ ಬೆಳ್ಳಿಯ ಹೊಳಪಿನಿಂದ ಇದು ಶೋಭಿಸುವುದರಿಂದ ಈ ಹೆಸರು ಬಂದಿದೆ. ಭೂಮಿಯಲ್ಲಿರುವ ವೀಕ್ಷಕನಿಗೆ ಶುಕ್ರ ಒಂದೋ ಸಂಜೆ ಪಶ್ಚಿಮಾಕಾಶದಲ್ಲಿ ಸೂರ್ಯಾಸ್ತಮಾನದ ತರುವಾಯ ಇಲ್ಲವೇ ಮುಂಜಾನೆ ಪೂರ್ವಾಕಾಶದಲ್ಲಿ ಸೂರ್ಯೋದಯದ ಮುನ್ನ ಕಾಣಬಹುದಷ್ಟೆ. ಇನ್ನೇನು ಕತ್ತಲೆ ಕವಿಯಲಿದೆ ಅಥವಾ ಇನ್ನೇನು ಸೂರ್ಯ ಮೂಡಲಿದೆ ಎನ್ನುವುದನ್ನು ಬೆಳ್ಳಿಯ ಅಸ್ತಿತ್ವ ಪ್ರತೀಕಿಸುತ್ತದೆ. ಪ್ರಸಕ್ತ ಸಂದರ್ಭದಲ್ಲಿ ಕವಿ ಸಂಜೆಬೆಳ್ಳಿಯನ್ನು ಉಪಯೋಗಿಸಿಕೊಂಡು ಸೀತಾರಾಮಲಕ್ಷ್ಮಣರಿಗೆ ಮುಂದೆ ಬರಲಿರುವ ಕತ್ತಲೆಯ ದಿವಸಗಳ ಕಿರುರೇಖೆಯನ್ನು ಬಲು ಕಲಾತ್ಮಕವಾಗಿ ಎಳೆದಿದ್ದಾರೆ. (ನೋಡಿ—೮೦. ಸಂ.-೮, ೧೦)

೧೮

ಮಿಥ್ಯೆ ಬಿರಿಯಲ್ಕೆ
ಸತ್ಯಂ ಪ್ರತ್ಯಕ್ಷಮಪ್ಪಂತೆವೋಲ್
(ಕಿಷ್ಕಿಂಧಾ ಸಂಪುಟಂ—೨, ೨೬೩-೨೬೪)

ವಿಜ್ಞಾನರಂಗದಲ್ಲಿ ನಡೆದಿರುವ ಮತ್ತು ಮುಂದೆ ನಡೆಯಲಿರುವ ಒಂದೊಂದು

ತತ್ತ್ವದ ಆವಿಷ್ಕಾರಕ್ಕೂ ಈ ಸಾಲುಗಳನ್ನು ಅನ್ವಯಿಸಬಹುದು. ಇಲ್ಲಿ "ಮಿಥ್ಯೆ" ಎಂದರೆ ಸುಳ್ಳು ಎಂದು ಅರ್ಥಮಾಡಬಾರದು—ಆವಿಷ್ಕರಣ ಕಾಲದ ತನಕ ಸಂಗೃಹೀತವಾದ ಸಕಲ ದತ್ತಾಂಶಗಳ ಸಂಕಲನವಿದು, ಸತ್ಯವನ್ನು ನಮ್ಮಿಂದ ಮರೆಮಾಡಿರುವ ಮುಸುಕಿದು. ಈ "ನಶ್ವರದ ಹೃದಯಮಂ" ಭೇದಿಸಿ ವಿಜ್ಞಾನ ಸೀಮಾಪುರುಷ ಸತ್ಯವನ್ನು ಹೊರಗೆಡಹುತ್ತಾನೆ, ಅನಾವರಣಗೊಳಿಸುತ್ತಾನೆ. (ನೋಡಿ—೭)

### ೧೯

### ಪೃಥ್ವಿಗೆ ರಾಹು ಬೇರೆಯೇಂ ತನ್ನ ನೆಳಲಲ್ಲದೆಯೆ?

(ಕಿ. ಸಂ.—೩, ೮೫-೮೭)

ಸೀತೆಯನ್ನು ಕಳೆದುಕೊಂಡ ರಾಮಲಕ್ಷ್ಮಣರು ಆಕೆಯನ್ನು ಅರಸುತ್ತ ಹೋಗುತ್ತಿದ್ದಾರೆ. ಕಬಂಧ ಎಂಬ "ಅಕಶೇರು ಕಶ್ಮಲ ಸರೀಸೃಪಂ" ರಾಮನನ್ನು ಹಿಡಿದು ಕಬಳಿಸಲು ಪ್ರಯತ್ನಿಸುತ್ತದೆ. "ತನ್ನಾ ನಿರಾಶೆಯೆ ತನಗೆ ಕಾಣಿಸಿತೆನಲ್ಕಾ ಕಬಂಧನಂ ಕಂಡೊಡನೆ ನಡುಗಿತು ತನು" ರಾಮನಿಗೆ. ಮುಂದೆ ಕಬಂಧಬಾಹುಗಳನ್ನು ಲಕ್ಷ್ಮಣ ಛೇದಿಸಿ ರಾಮನನ್ನು ಸೆರೆ ಬಿಡಿಸುತ್ತಾನೆ. "ಬೆಮರ್ದು ನೆಗೆದೆಳ್ದನ್ ರಘೂದ್ವಹಂ ಕಣ್ದೆರೆದು ಮೈತಿಳಿದು ಭಯಮೂರ್ಛೆಯಿಂ" ಲಕ್ಷ್ಮಣನಿಂದಾಗಿ ತಾನು ಬದುಕಿದೆನೆಂದು ರಾಮ ಸಹಜವಾಗಿ ಹೇಳುವಾಗ ಲಕ್ಷ್ಮಣ ಮರುನುಡಿಯುತ್ತಾನೆ "ತಿಳಿದವಂ ತನ್ನ ನೆರಳಿಗೆ ತಾನೆ ಹೆದರುವನೆ?" ರಾಮನ ಉತ್ತರ "ತಿಳಿದವಂ! ತಿಳಿದ ಮೇಲಲ್ತೆ?" ಲಕ್ಷ್ಮಣನ ಮರುಸವಾಲು "ಪೃಥ್ವಿಗೆ ರಾಹು ಬೇರೆಯೇಂ ತನ್ನ ನೆಳಲಲ್ಲದೆಯೇ?" ಹೀಗೆಯೇ ಸಂವಾದ ಮುಂದುವರಿಯುತ್ತದೆ. ಖಗೋಳವೈಜ್ಞಾನಿಕವಾಗಿ ರಾಹು ಪದಕ್ಕೆ ಬೇರೆ ಅರ್ಥ ಉಂಟು. ಅಲ್ಲಿ ರಾಹುವಿಗೆ (ಅಂತೆಯೇ ಕೇತುವಿಗೂ) ಪ್ರತ್ಯೇಕ (ಕಾಲ್ಪನಿಕ) ಅಸ್ತಿತ್ವ ಇರುವುದು. ಭೂಮಿಯ ಸುತ್ತ ಸೂರ್ಯ, ಸ್ಥಿರ ನಕ್ಷತ್ರಗಳ ಮುನ್ನೆಲೆಯಲ್ಲಿ, ವಾರ್ಷಿಕವಾಗಿ ಒಂದು ಪರಿಭ್ರಮಣೆ ಮುಗಿಸುತ್ತಿರುವಂತೆ ಭಾಸವಾಗುತ್ತದೆ. ಸೂರ್ಯನ ಈ ತೋರ್ಕೆ ಹಾದಿಗೆ ಕ್ರಾಂತಿವೃತ್ತ ಎಂದು ಹೆಸರು. ಚಂದ್ರ ವಾಸ್ತವವಾಗಿ ಭೂಮಿಯ ಸುತ್ತ ಪರಿಭ್ರಮಿಸುತ್ತದೆ. ಚಾಂದ್ರ ಕಕ್ಷೆಯೂ ಕ್ರಾಂತಿವೃತ್ತವೂ ಎರಡು ಸ್ಥಿರ ಬಿಂದುಗಳಲ್ಲಿ ಸಂಧಿಸುವಂತೆ ಭಾಸವಾಗುತ್ತವೆ. ಇವೇ ರಾಹು ಮತ್ತು ಕೇತು. ಆದ್ದರಿಂದ ಇವುಗಳಿಗೆ ಭೂಮಿಯ ನೆರಳಿನಿಂದ ಪ್ರತ್ಯೇಕವಾದ ಅಸ್ತಿತ್ವ ಉಂಟು. ಇನ್ನೂ ಒಂದು ಸಂಗತಿ. ಸೂರ್ಯಗ್ರಹಣವೆಂದರೆ ಚಂದ್ರನ ನೆರಳಿಗೆ ಭೂಮಿಯಪ್ರವೇಶ; ಚಂದ್ರಗ್ರಹಣವೆಂದರೆ ಭೂಮಿಯ ನೆರಳಿಗೆ ಚಂದ್ರನ ಪ್ರವೇಶ. ಈ ಎರಡು ಘಟನೆಗಳೂ ಸಾಧ್ಯವಾಗುವುದು ರಾಹು ಇಲ್ಲವೇ ಕೇತು ಬಿಂದುವಿಗೆ ಸಾಕಷ್ಟು ಸಮೀಪದಲ್ಲಿ ಸೂರ್ಯನಿರುವಾಗ ಅಮಾವಾಸ್ಯೆ ಅಥವಾ ಹುಣ್ಣಿಮೆ ಒದಗಿ ಬಂದಾಗ ಮಾತ್ರ. ಕುವೆಂಪು ಅವರೊಡನೆ ಈ ವಿಷಯ ಪ್ರಸ್ತಾವಿಸಿದಾಗ ಪ್ರಸಕ್ತ ಸಂದರ್ಭದಲ್ಲಿ "ರಾಹು" ಪದವನ್ನು ರೂಢಿಯ ಅರ್ಥದಲ್ಲಿ (ಅಂದರೆ ಕವಿಸಮಯ) ಬಳಸಿರುವುದಾಗಿ ಹೇಳಿದರು. (ನೋಡಿ—ಲಂ. ಸಂ.— ೧೦, ೨೩೧-೨೩೨; ಶ್ರೀ ಸಂ—೨, ೩೭೭).

## ೨೦

### ಸಪ್ತರ್ಷಿಮಂಡಲಮೊಯ್ಯನೇಳ್ವುದಂ ನೋಡುತಿರೆ

(ಕಿ. ಸಂ.—೩, ೩೨೮-೩೨೯)

ಫೆಬ್ರುವರಿ ತಿಂಗಳಿನಿಂದ ತೊಡಗಿ ಮುಂದೆ ಆರು ತಿಂಗಳ ಕಾಲ ಸಂಜೆ ಆಕಾಶದಲ್ಲಿ ಸ್ಪಷ್ಟವಾಗಿ ಕಾಣುವ ಏಳು ನಕ್ಷತ್ರಗಳ ಚಿತ್ರವೇ ಸಪ್ತರ್ಷಿಮಂಡಲ. ಮೂಡುತ್ತಿರುವಾಗ ಬಲು ದೊಡ್ಡ ಪ್ರಶ್ನಾರ್ಥಕ ಚಿಹ್ನೆಯಂತೆಯೂ ಮಧ್ಯಾಹ್ನರೇಖೆಯ ಸಮೀಪ ಬಂದಾಗ ಕಿತ್ತೆಸೆದ ರತ್ನಹಾರದಂತೆಯೂ ಕಂತುತ್ತಿರುವಾಗ ಹಿಡಿ ಮುರಿದ ಸೌಟು ಇಲ್ಲವೇ ಹಿರಿ ನೇಗಿಲಿನಂತೆಯೂ ಕಾಣುವ ಈ ಏಳು ನಕ್ಷತ್ರಗಳಿಗೆ ಪ್ರಾಚೀನ ಮಾನವ ಏಳು ಋಷಿಗಳ ಹೆಸರುಗಳನ್ನು ನೀಡಿದ್ದಾನೆ: ನೋಡಿ ೬. ಪುಲಹ-ಕ್ರತು ರೇಖೆಯನ್ನು (ಇದು ಮೊದಲು ಮೂಡುತ್ತದೆ) ವೃದ್ಧಿಸಿದರೆ ತುಸು ದೂರದಲ್ಲಿ ಅದು ಸ್ಥಿರ ಧ್ರುವನಕ್ಷತ್ರವನ್ನು ಸಂಧಿಸುತ್ತದೆ. ರಾಮಲಕ್ಷ್ಮಣರು ಸೀತಾನ್ವೇಷಣೆಯ ಹಾದಿಯಲ್ಲಿ ಶಬರಿ ಆಶ್ರಮ ಸೇರಿದ್ದಾರೆ. ಆದರೆ ಅಲ್ಲಿ ರಾಮ ವಿಚಿತ್ರವಾದ ಮನೋರೋಗಕ್ಕೆ ಈಡಾಗಿ ದಿನ ದಿನ ಕೃಶನಾಗುತ್ತಾನೆ: "ತಾಳಲಾರದ ಶೋಕಭಾರದಿಂ ದಾಶರಥಿ ಏಳಲಾರದೆ ಶಯ್ಯೆಯಿಂ ಶಬರಿ ಶುಶ್ರೂಷೆಯಂ ಬೇಳ್ಪತಿಥಿಯಾದನ್." ಇಂಥ ಸನ್ನಿವೇಶದಲ್ಲಿ ತೀರ ಖಿನ್ನಮನಸ್ಕನಾಗಿ "ಒರ್ದಿನಂ ಕರ್ದಿಂಗಳಿರುಳಲ್ಲಿ ಲಕ್ಷ್ಮಣನೊರ್ವನೆಯೆ ಹೊರಗೆ ನಡೆಯತೊಂದರೆಯಗ್ರದೊಳ್ ಸುಯ್ದು ಸುಯ್ದಳ್ತಳ್ತು ಕುಳ್ತು" ಗಗನವನ್ನು ದಿಟ್ಟಿಸುತ್ತಾನೆ. ಆಗ ಸಪ್ತರ್ಷಿಮಂಡಲ ಮೂಡುವ ದೃಶ್ಯ ಗೋಚರಿಸುತ್ತದೆ. ಅದು ಧ್ರುವನಕ್ಷತ್ರ ಸೂಚಿಯಾಗಿದೆ ಎಂಬ ಖಗೋಳ ವೈಜ್ಞಾನಿಕಾಂಶ ಲಕ್ಷ್ಮಣನಿಗೆ (ಆದ್ದರಿಂದ ರಾಮನಿಗೆ) ಮುಂದೆ ಒದಗಲಿರುವ ಶುಭ ಸೂಚನೆಯ ಪ್ರತೀಕವೆಂಬುದು ಗಮನಾರ್ಹ. ಮುಂದಿನ ಸಾಲುಗಳನ್ನು (ಅದೇ— ೩೨೯-೩೩೩) ಓದಿದಾಗ ಈ ಅಂಶ ವೇದ್ಯವಾಗುತ್ತದೆ (ನೋಡಿ—೨೬)

## ೨೧

### ಗ್ರಹದ ನಿಷ್ಠೆಯನೇಕೆ ನಿಷ್ಠೆ ಮಾಡುವೆ ರವಿಗೆ ?

(ಕಿ. ಸಂ.—೭, ೨೩೮)

ಪ್ರಕೃತ ಕಾವ್ಯದಲ್ಲಿ ಬರುವ ರಾವಣ "ಪುಟ್ಟುವಾಗಳೆಯೆ ನಾಂ ನೆತ್ತರೊಳೆ ಪೆರ್ಣ್ಗೊಡಲಿನಾಸೆಯಾ ಬೇಟಮಂ ಪೊತ್ತು" ಜನಿಸಿದಾತ. ಅವನ ದೃಷ್ಟಿಯಲ್ಲಿ ಪಾತಿವ್ರತ್ಯ ಎನ್ನುವುದೊಂದು ಅರ್ಥಹೀನ ಆದರ್ಶ. ಏಕೆಂದರೆ ಅವನ ಅನುಭವದಲ್ಲಿ "ರಾಕ್ಷಸೇಶ್ವರನ ಮೈಸಿರಿಗೆ.... ಮೆಚ್ಚಿ ವಶವಾಗದಿರ್ದಾ ಪವಿತ್ರಾಂಗಿ" ಇಲ್ಲವೇ ಇಲ್ಲ (ನೋಡಿ— ಕಿ. ಸಂ. —೧, ೩೨೬-೩೩೪). ಆದ್ದರಿಂದ ಸೀತೆ ಅವನಿಗೆ ವಶವಾಗಬೇಕಾದದ್ದು ಸಹಜ ಎಂಬುದು ಆತನ ತರ್ಕ. ಆದರೆ ರಾವಣನ ಸೆರೆಯಲ್ಲಿ ಸಿಕ್ಕಿದ್ದ ಸೀತೆಯ ವರ್ತನೆ ತದ್ವಿರುದ್ಧವಾಗಿತ್ತು. ಇದಕ್ಕೆ ಪರಿಹಾರವೇನು? ಸೀತೆಯ ಇಚ್ಛಾನುಸಾರ ತಾನೂ ತನ್ನ ಬಳಗದವರೂ ನಡೆದುಕೊಂಡರೆ ಮುಂದೊಂದು ದಿನ ಆಕೆ ತನ್ನ ವಶವಾದಾಳು ಎಂಬುದು ಆತನ ನಂಬಿಕೆ. ಈ ಏರ್ಪಾಡೂ ನಡೆದಿದೆ; ಫಲ ನೀಡುವ ಲಕ್ಷಣ ಕಾಣಲಿಲ್ಲ. ಇವೆಲ್ಲವುಗಳ ಪರಿಣಾಮವಾಗಿ "ನಾನಾ ತುಮುಲ ಭಾವ ಘರ್ಷಣೆಗೆ ರಣನಾದ ರಾವಣಂ." ಇಂಥ ಮಾನಸಿಕ ಹಿನ್ನೆಲೆ

ಯಲ್ಲಿ ರಾವಣ ತನ್ನ ಪ್ರಿಯಪತ್ನಿಯೂ ಪತಿವ್ರತಾ ಶಿರೋಮಣಿಯೂ ಆದ ಮಂಡೋದರಿಯ ಪೂಜಾಮಂದಿರ ಪ್ರವೇಶಿಸುತ್ತಾನೆ. ಮಂಡೋದರಿಯ ಸ್ವಭಾವ ಹೇಗಿದೆ? "ನಾನಕ್ಕನೆನ್ ನಿನಗೆ. ತಂಗೆ, ವಯಸ್ಸಿನಿಂದಂತೆ ದುಕ್ಕದಿಂ !" (ನೋಡಿ—ಕಿ. ಸಂ.-೮) ಎನ್ನುವ ಸೂತ್ರವಾಕ್ಯದಲ್ಲಿ ಕವಿ ತುಂಬ ಕುಶಲವಾಗಿ ಈಕೆಯ ಋಜುಸ್ವಭಾವವನ್ನು ಆಸವಿಸಿದ್ದಾರೆ. ಸೀತೆಯೂ ಮಂಡೋದರಿಯೂ ಒಂದೇ ಕಾರಣದಿಂದ ಸಹದುಃಖಿಗಳು. ಇವರೀರ್ವರ ತಪಃಪ್ರಭಾವದಿಂದ ರಾವಣನಿಗೆ ಜ್ಞಾನೋದಯವಾಗುವುದೇ ನಿಜವಾದ ಮಂಗಳ. ಆದ್ದರಿಂದಲೇ ಮಂಡೋದರಿ ಸೀತೆಗೆ ಹೇಳುತ್ತಾಳೆ "ಆ ಮಂಗಳಂ ನಿನಗೆ ಶೀಘ್ರದಿನಕ್ಕೆ ! ನಿನ್ನ ಮಂಗಳಮೆನಗೆ ಮಂಗಳಂ !" ಇಂಥ ಮಂಡೋದರಿ ಶಿವಮಂದಿರ ದಲ್ಲಿ ಪತಿಹಿತಕ್ಕಾಗಿ ಧ್ಯಾನನಿರತಳಾಗಿದ್ದಾಳೆ. ಅಲ್ಲಿಗೆ ರಾವಣ ಪ್ರವೇಶಿಸುತ್ತಾನೆ. "ನಮಿಸಿದನ್ ಮನ್ಮಥಾರಿಗೆ ಮನ್ಮಥನ ಬಂದಿ! ಮುಂಬರಿದನುಬ್ಬೇಗಮಂ ತಡೆಯಲಾರದೆಯೆ ಕುಗ್ಗಿ ಕುಸಿದಂತಿರ್ದ ದೀನ ದುಃಖದ ಸತಿಯ ಹೊರೆಗೆ." ಪತಿಪತ್ನಿಯರಲ್ಲಿ ಮಾತು ಮುಂದುವರಿಯುತ್ತದೆ. ರಾವಣ ಹೇಳುತ್ತಾನೆ "ನಿನ್ನವನ್ ನಾನೇಗಳುಂ." ಮಂಡೋದರಿ "ಅಯ್ಯೋ ಆ ಪುಣ್ಯಮೆಂದಿಗೊ!" ಎಂದು ನಿಡುಸುಯ್ಯುತ್ತಾಳೆ. ಆಗ ರಾವಣ ಹೇಳಿದ ಮಾತು "ಮತ್ತೆ ಮತ್ತದೆ ಕೊರತೆ! ಗ್ರಹದ ನಿಷ್ಠೆಯನೇಕೆ ನಿಷ್ಠೆ ಮಾಡುವೆ ರವಿಗೆ, ರಾಜ್ಞಿ? ಪಚ್ಚುಗೊಂಡುದರಿಂದಮೇಂ ಅದನಿಕಿನಿತಪೂರ್ಣತೆಯ ಕೊರೆಯಿಲ್ಲ; ಕರೆ ಸಲ್ಲ." ಖಗೋಳವೈಜ್ಞಾನಿಕವಾಗಿ ಹೇಳುವುದಾದರೆ ಸೂರ್ಯ ಪ್ರತಿಯೊಂದು ಗ್ರಹವನ್ನೂ (ವಾಸ್ತವವಾಗಿ ಸೌರವ್ಯೂಹದ ಸಮಸ್ತ ಕಾಯಗಳನ್ನೂ) ಪ್ರತಿಯೊಂದು ಗ್ರಹ ಸೂರ್ಯನನ್ನೂ ಗೊತ್ತಾದ ಒಂದು ನಿಯಮಾನುಸಾರ ಪರಸ್ಪರ ಆಕರ್ಷಿಸುತ್ತವೆ. ಈ ಆಕರ್ಷಣ ಬಲವನ್ನೇ ಕವಿ ಇಲ್ಲಿ "ನಿಷ್ಠೆ" ಎಂಬುದಾಗಿ ಬಳಸಿಕೊಂಡಿದ್ದಾರೆ. ಸೂರ್ಯ ಮಹಾಗಾತ್ರ ಹಾಗೂ ದ್ರವ್ಯರಾಶಿ ಇರುವ ನಕ್ಷತ್ರ—ಸೂರ್ಯಗೋಳದೊಳಗೆ ಒಂದು ಲಕ್ಷಭೂಮಿಗಳನ್ನು ತುಂಬಿದರೂ ಅಲ್ಲಿ ಖಾಲಿ ಜಾಗ ಉಳಿಯುತ್ತದೆ; ಸೂರ್ಯನ ಸಹಿತ ಸೌರ ವ್ಯೂಹದ ಒಟ್ಟು ದ್ರವ್ಯರಾಶಿಯಲ್ಲಿ ಸೂರ್ಯದ್ರವ್ಯರಾಶಿ ೯೯.೮೬%. ಹೀಗಾಗಿ ಸೂರ್ಯ ಯಾವುದೇ ಗ್ರಹವನ್ನು ತನ್ನೆಡೆಗೆ ಸೆಳೆವ ಗುರುತ್ವಾಕರ್ಷಣ ಬಲ ಆ ಗ್ರಹ ಸೂರ್ಯನನ್ನು ತನ್ನೆಡೆಗೆ ಸೆಳೆವ ಬಲಕ್ಕಿಂತ ಅದೆಷ್ಟೆಷ್ಟೋ ಪಟ್ಟು ಅಧಿಕ. ಉದಾಹರಣೆಗೆ ಭೂಮಿಯನ್ನು ಸೂರ್ಯ, ಭೂಮಿ ಸೂರ್ಯನನ್ನು ಸೆಳೆಯುವ ಬಲಕ್ಕಿಂತ ೩,೩೨,೪೮೮ ಪಟ್ಟುಅಧಿಕ ಬಲದಿಂದ ತನ್ನೆಡೆಗೆ ಸೆಳೆಯುತ್ತದೆ. ಆದ್ದರಿಂದ ಮೊತ್ತದಲ್ಲಿ ಸೂರ್ಯನ ಸುತ್ತ ಸಮಸ್ತ ಕಾಯಗಳೂ ಪರಿಭ್ರಮಿಸುವ ವಿದ್ಯಮಾನ ಉಂಟಾಗುತ್ತದೆ. ಸೂರ್ಯನ ಈ ಅಗಾಧ ಬಲ ವನ್ನು ಗ್ರಹಗಳ ನಡುವೆ ಅದೆಷ್ಟೇ ಪಾಲುಮಾಡಿ (ಪಚ್ಚುಗೊಳಿಸಿ) ವಿತರಣೆ ಮಾಡಿದರೂ ಸೂರ್ಯನಿಗೆ ರವೆಯಷ್ಟೂ ಕೊರತೆ ಉಂಟಾಗುವುದಿಲ್ಲ—ಸಮುದ್ರದಿಂದ ಎಷ್ಟು ತಂಬಿಗೆ ನೀರು ತೆಗೆದರೂ ಹೇಗೆ ಅದರ ಗಾತ್ರದ ಮೇಲೆ ಏನೂ ಪರಿಣಾಮವಾಗುವುದಿಲ್ಲವೋ ಹಾಗೆ. ರಾವಣ ಇಂಥ ಮಹಾಪ್ರಬಲಿ, ಪ್ರಭಾವಶಾಲಿ. ಅವನೊಬ್ಬ ರವಿ. ಅವನ ಪ್ರೇಮ (ನಿಷ್ಠೆ) ಈಗ ಸೀತೆ ಎಡೆಗೆ (ಹೊಸ ಗ್ರಹ) ಸ್ವಲ್ಪ ಹರಿದ ಮಾತ್ರಕ್ಕೆ ಅದರಿಂದ ಮಂಡೋದರಿಗೆ (ಮೊದಲಿನ ಗ್ರಹ) ಸಲ್ಲುವ ಪ್ರೇಮಕ್ಕೆ(ನಿಷ್ಠೆ) "ಇನಿತಪೂರ್ಣತೆಯ ಕೊರೆ"ಯೂ ಇಲ್ಲ. ಇದು ರಾವಣನ ತರ್ಕಧಾಟಿ.

**೨೨**

ಸೂರ್ಯನಾತಪಕೆ ಕಾಲದ ತಪಂ ನೆರವಾಗಲಾ
ಬಜ್ಜರತನಂ ಬರ್ಪುದೊಯ್ಯನಿದ್ದಲಿಗೆನಲ್ (ಕಿ. ಸಂ.—೮, ೧೮೫-೧೮೬)

ರಾವಣನ ಸೆರೆಯಲ್ಲಿರುವ ಸೀತೆ ದುಃಖಿತೆ; ಇಂಥ ಪತಿವ್ರತೆಗೆ ಈ ಹಿಂಸೆ ತನ್ನ ಪತಿಯಿಂದಾಗಿ ಒದಗಿತಲ್ಲ ಎಂದು ಮಂಡೋದರಿ ಅಧಿಕ ದುಃಖಿತೆ. ಮಂಡೋದರಿ ಸೀತೆಯನ್ನು ರಹಸ್ಯವಾಗಿ, ಅಂದರೆ ರಾವಣಾನುಮತಿ ಇಲ್ಲದಿದ್ದರೂ, ಸಂಧಿಸಿ ತನ್ನ ಮನದ ವ್ಯಾಕುಲವನ್ನು ಹೊರಗೆಡಹಿದ್ದಾಳೆ; ಮತ್ತು

ನನ್ನಂತೆ,
ದೇವಿ, ನೀನುಂ ಪ್ರಾರ್ಥಿಸಾ, ನನ್ನ ಪತಿಯೆರ್ದೆಗೆ
ಶುದ್ಧಿ ದೊರೆಕೊಳ್ವಂತೆ. ನಾನದನೆ ಬೇಡಲ್ಕೆ
ಬರುತಿರ್ದೆನೀಯೆಡೆಗೆ ನಿನ್ನ ಸಾನ್ನಿಧ್ಯಕ್ಕೆ (ಕಿ. ಸಂ.—೮, ೧೫೩-೧೫೬)

ಈ ಪರಿಯಾಗಿ ಸೀತೆಯನ್ನು ಬೇಡುತ್ತಾಳೆ. ಸೀತೆಯ ಸಹಜ ಪ್ರತಿಕ್ರಿಯೆ ಆ ಮೊದಲೇ ವ್ಯಕ್ತವಾಗಿದೆ :

ನೀನಸುರಿ ?
ನೀನಸುರಿಯಲ್ತು; ದೇವತೆ. ಪತಿವ್ರತೆಯಾಗಿ
ನಮಗೆಲ್ಲಮಾದರ್ಶ ಮಾತೆ. ನಿನಗಾಂ ನಮಿಸೆ
ಶೀಘ್ರದಿಂದೆನಗೆ ಮಂಗಳಮಪ್ಪುದೆಂದು ನಾಂ
ಬಲ್ಲೆನ್ (ಕಿ. ಸಂ.—೮, ೧೪೮-೧೫೨)

ಈ ಇಬ್ಬರು ಮಹಾಪತಿವ್ರತೆಯರ ಏಕೋದ್ದೇಶ ರಾವಣೋದ್ಧಾರ ; ಒಬ್ಬಳ ಮಂಗಳ ಇನ್ನೊಬ್ಬಳಿಗೂ ಮಂಗಳ. ಇದರಿಂದಾಗಿ ಸೀತೆಗೆ

ಸೆರೆಮನೆಯೆ ಆತ್ಮಸಾಧನೆಗೊಂದು
ಎಲೆಯ ಮನೆಯಾಯಿತ್ತು ! ಪೌಲಸ್ತ್ಯಜನ ಲಂಕೆ
ಮಂಡೋದರಿಯ ಲಂಕೆಯಾಯಿತ್ತು ; ರಾವಣನ
ಮೇಲಿರ್ದ ವೈರಭಾವಂ ಸುಲಭದಿಂ ಕರಗಿ
ಮಂಡೋದರಿಯ ಪತಿಯ ಮೇಲಣ ಕರುಣೆಯಾಯ್ತು
(ಕಿ. ಸಂ.—೮, ೧೮೧-೧೮೪)

ಹೀಗೆ ಸೀತೆ ಮಂಡೋದರಿಯರಿಬ್ಬರೂ ತಪಸ್ಸು ಮಾಡುವಾಗ ರಾವಣನ ಪಾಪ ನಾಮಾವಶೇಷವಾಗುವುದು ತೀರ ಸಹಜವಾದದ್ದು; ಹೇಗೆಂದರೆ ಸಾಕಷ್ಟು ಕಾಲ ಉಷ್ಣದ ತೀವ್ರ ಒತ್ತಡಕ್ಕೆ ಈಡಾದ ಇದ್ದಲಿನಲ್ಲಿ ವಜ್ರದ ಗುಣ ಮೂಡುವಂತೆ. ವೈಜ್ಞಾನಿಕವಾಗಿ ಇದ್ದಲೂ (ಇಂಗಾಲ) ವಜ್ರವೂ ಒಂದೇ ರಚನೆ ಉಳ್ಳವು. ಭೂಗರ್ಭದಲ್ಲಿ ಇಂಗಾಲ ಅತ್ಯುಷ್ಣ ಹಾಗೂ ಸಂಮರ್ದಗಳಿಗೆ ಈಡಾದಾಗ ವಜ್ರ ಉಂಟಾಗುತ್ತದೆ.

೨೩

ಸಿಂಧು ಮಹಿಮೆಯನಳೆಯೆ
ಪೇಳ್ ಪನಿಯೆಣಿಕೆ ಏಕೆ ?

(ಕಿ. ಸಂ.—೯, ೩೭೦-೩೭೧)

ಸುಗ್ರೀವಾಜ್ಞೆಯ ಅನುಸಾರ ನೆರೆದಿದ್ದ "ಕಪಿಧ್ವಜ ಚಮೂಸಮೂಹಂಗಳಂ" ರಾಮನಿಗೆ ಪರಿಚಯಿಸುವ ಸನ್ನಿವೇಶ. "ಸಾನುಕಂದರದದ್ರಿ ಸೀಮೆಯಂ ತುಂಬಿದಾ ಗಿರಿ ಅರಣ್ಯ ಸ್ಪರ್ಧಿಯಂ ಕಾಣುತಾ ಕಪಿಸೈನ್ಯ ವಾರ್ಧಿಯಂ" ರಾಮನ ಹೃದಯವೂ ಹಾಗೆ ತುಂಬಿ ಬರುತ್ತದೆ. ಹೀಗೆ ವರ್ಣಿಸಿದ ಕವಿ ಈ ಮೇಲಿನ ಸಾಲುಗಳಲ್ಲಿ ಗಣಿತದ ಒಂದು ಸರಳ ವಿಧಿಯನ್ನು ಹೇಳಿದ್ದಾರೆ: ಸಮುದ್ರದಲ್ಲಿರುವ ಜಲರಾಶಿಯನ್ನು ಹನಿಗಳ ಮಾನಕದಿಂದ ಅಳೆದರೆ ಮುಗಿಯಲಾರದು ಹೇಗೋ ಹಾಗೆ ಈ ಮಹಾಕಪಿಸೈನ್ಯರಾಶಿಯನ್ನೂ ಬಿಡಿಬಿಡಿಯಾಗಿ ಎಣಿಸಿ ಇಲ್ಲವೆ ವರ್ಣಿಸಿ ಮುಗಿಯಲಾರದು; ಗಾತ್ರಾನುಗುಣ ಮಾನಕ ಆವಶ್ಯಕ ಎನ್ನುವುದು ಅಧ್ಯಾಹಾರ.

೨೪

ಬೇರಿಗೆರೆಯುವ ನೀರ್ ಕೊಂಬೆ ಕೊಂಬೆಯನೇರಿ
ಮರಮಂ ಪೊರೆವವೋಲ್ ನಿನಗೆರೆದುದೀ ವಾಗ್‌ಧಾರೆ
ಜೀವಾತುವಕ್ಕೆಲ್ಲರುಲ್ಲಸಕೆ.

(ಕಿ. ಸಂ.—೯, ೫೫೧-೫೫೩)

ಆಂಜನೇಯನಿಗೆ ಸುಗ್ರೀವ ಸೀತಾನ್ವೇಷಣೆಯ ಮಹಾಕಾರ್ಯವನ್ನು ಆಜ್ಞಾಪಿಸುತ್ತ ಆತನ ಸಾಹಸಗಳನ್ನು ಕೊಂಡಾಡುತ್ತಾನೆ: "ನಿನಗೆ, ಪೊಗಲಾರದೆಡೆಯಿಲ್ಲಮೆಲ್ಲಿಯುಂ. ನೀಂ ಪ್ರಾಣಜಂ ದೇಶಕಾಲಾನುವೃತ್ತಿಯ ನಯದಿ ನಯಪಂಡಿತಂ" ಎಂದು ಕ್ರೋಡೀಕರಿಸುತ್ತ ಈ ಮೇಲೆ ಬರೆದಿರುವ ಸಾಲುಗಳನ್ನು ಉಸುರುತ್ತಾನೆ. ಜೀವಾತು ಎಂದರೆ ವಿಟಮಿನ್ ಎನ್ನುವ ಆಧುನಿಕ ವಿಜ್ಞಾನದ ಪರಿಕಲ್ಪನೆಯನ್ನು ಕವಿ ಇಲ್ಲಿ ಸೊಗಸಾಗಿ ಬಳಸಿಕೊಂಡಿದ್ದಾರೆ. (ನೋಡಿ—ಲಂ. ಸಂ.—೭, ೨೮೭-೨೮೮. ಅದೇ-೮, ೧೪೩.)

೨೫

ಮೂಲಮಿರ್ಪವನೀಜಕಿಂದೊ ನಾಳೆಯೊ ಫಲಂ ;
ಬೇರ್ಗಡಿದರೇನುಂಟು ? ಚಿತೆಗಿಂಧನಂ !

(ಕಿ. ಸಂ.—೧೦, ೯೨೧-೯೨೨)

ಸಂಪಾತಿ ಅರುಹಿದ ಸೂಕ್ಷ್ಮವನ್ನು, ಅಂದರೆ "ನೂರು ಯೋಜನದಾಚೆ, ಲಂಕೆ, ರಾಕ್ಷಸ ದ್ವೀಪಮಿದೆ ಶರಧಿ ಮೇಖಲೆಯಾಗಿ. ಖಳ ದಶಗ್ರೀವನಿನಕುಲನ ಕಾಂತೆಯನಲ್ಲಿ ಬೈತಿಟ್ಟಿಹಂ" ಈ ಸಂಗತಿಯನ್ನು ಗ್ರಹಿಸಿದ ಅಂಗದಾದಿ ಕಪಿವೀರರು ಮುಂದಿನ ಹಂತವನ್ನು ಚರ್ಚಿಸುತ್ತಿರುವ ಪ್ರಸಂಗ. ತಮ್ಮ ತಮ್ಮ ಸಾಗರೋತ್ತರಣಸಾಮರ್ಥ್ಯವನ್ನು ಆ ವೀರರು ಅರಿಕೆ ಮಾಡಿದ್ದಾರೆ. ಅವರ ನಾಯಕನಾದ ಅಂಗದ ಹೇಳುತ್ತಾನೆ: "ಎನಗೆ ಬಲ್ಮೆಯಿಹುದು

ತ್ತರಿಸೆ ಶತಯೋಜನದ ಶರಧಿಯಂ. ಪಿಂತೆ ಮರಳಲ್ಕೆನಗೆ ಬೇಳ್ಪದಟಿನೊಳೆ ಶಂಕೆ.'' ಆಗ ವೃದ್ಧ ಜಾಂಬವನೆದ್ದು ರಾಜನೀತಿಯನ್ನು ಹೇಳುವಾಗ ಬರುವ ಸಾಲುಗಳಿವು : ನಾಯಕನಿದ್ದುದಾದರೆ ಇಂದಲ್ಲ ನಾಳೆ ಯಶಸ್ಸು ಲಭ್ಯವಾಗಬಹುದು; ಆದ್ದರಿಂದ ಮೊದಲ ಹಂತದಲ್ಲೇ ನಾಯಕನನ್ನು ದುರ್ದಮ್ಯ ಸಾಹಸಕ್ಕೆ ನೂಕುವುದು ತರವಲ್ಲ. ಇದನ್ನು ಸ್ಪಷ್ಟೀಕರಿಸಲು ಕವಿ ಇಲ್ಲಿ ಮರ ಹಾಗೂ ಅದರ ಬೇರಿನ ಉಪಮೆಯನ್ನು ಬಳಸಿದ್ದಾರೆ.

೨೬

ಲಾಂಗೂಲ ಚವರಿಯಿಂದಂಬರದರಿಲ್ಗಳಂ
ಗುಡಿಸಿ ಪಾತಾಳಕುದುರಿಸುವಾರ್ಪು

(ಕಿ. ಸಂ.—೧೦, ೧೯೬-೧೯೭)

ಸಾಗರೋಲ್ಲಂಘನಕ್ಕೆ ಸಿದ್ಧನಾಗಿ ''ಗಾತ್ರದಿಂ ಹೈಮಾಚಲಸ್ಪರ್ಧಿ''ಯಾಗಿ ನಿಂತಿದ್ದ ಹನುಮಂತ ತನ್ನ ಬಳಗದವರಿಗೆ ನೀಡಿದ ಆಶ್ವಾಸನೆಯ ಅಂಗವಾಗಿ ಈ ಸಾಲುಗಳು ಬರುತ್ತವೆ. ಬಾಲದ ಬರಲಿನಿಂದ ಬಾನಂಗಳವನ್ನೇ ಗುಡಿಸಿ ಕಸರೂಪದ ನಕ್ಷತ್ರಗಳನ್ನು ಒಗ್ಗೂಡಿಸಿ (ಪಶ್ಚಿಮದ) ಪಾತಾಳಕ್ಕೆ ತಳ್ಳಿಬಿಡುತ್ತೇನೆ ಎನ್ನುವಲ್ಲಿಯ ಕಲ್ಪನೆ ಬಲು ಸೊಗಸಾಗಿದೆ. ಇದನ್ನು ಆಕಾಶದಲ್ಲಿಯ ಒಂದು ಸುಂದರ ವಿದ್ಯಮಾನಕ್ಕೆ ಸಂಬಂಧಿಸ ಬಹುದು. ಸಪ್ತರ್ಷಿಮಂಡಲ (ನೋಡಿ—೨೦) ನಮ್ಮ ಮಧ್ಯಾಹ್ನರೇಖೆಯನ್ನು ದಾಟಿ ಇನ್ನೇನು ಪಶ್ಚಿಮಾಕಾಶಕ್ಕೆ ಹೊರಳಲಿದೆ ಎನ್ನುವಾಗಿನ ನೋಟವನ್ನು ಗಮನಿಸಬೇಕು (ಮೇ-ಜೂನ್ ತಿಂಗಳುಗಳ ಸಂಜೆ ಅನುಕೂಲ). ಅದರ ಹಿಡಿಯ ಭಾಗವನ್ನು, ಅಂದರೆ ಅತ್ರಿ-ಆಂಗೀರಸ್ಸು. ವಸಿಷ್ಠ-ಮರೀಚಿಗಳನ್ನು ಜೋಡಿಸುವ ವಕ್ರರೇಖೆಯನ್ನು ಅದೇ ಕ್ರಮದಲ್ಲಿ, ದಕ್ಷಿಣದೆಡೆಗೆ ವಿಸ್ತರಿಸಿದರೆ ಒಂದು ಉಜ್ಜ್ವಲ ನಕ್ಷತ್ರ ತಲಪುತ್ತೇವೆ. ಇದು ಸ್ವಾತೀ ನಕ್ಷತ್ರ. ರೇಖೆಯನ್ನು ಮತ್ತಷ್ಟು ವೃದ್ಧಿಸಿದರೆ ಅದು ಆಕಾಶದ ದಕ್ಷಿಣ-ಪೂರ್ವ ಭಾಗದಲ್ಲಿ ನಾಲ್ಕು ನಕ್ಷತ್ರಗಳು ರಚಿಸುವ ಒಂದು ಚತುಷ್ಕೋಣಾಕೃತಿಯಲ್ಲಿ ಅಂತ್ಯವಾಗುತ್ತದೆ. ಈ ಆಕೃತಿಗೆ ಹಸ್ತಾ ನಕ್ಷತ್ರವೆಂದು ಹೆಸರು. ಈಗ ನೀಲವ್ಯೋಮದ ಮಹಾ ವಿಸ್ತಾರದಲ್ಲಿ ಸಪ್ತರ್ಷಿ ಮಂಡಲ-ಸ್ವಾತೀ-ಹಸ್ತಾ ನಕ್ಷತ್ರಗಳ ಸಮಗ್ರ ಚಿತ್ರವನ್ನು ಲಕ್ಷ್ಯವಿಟ್ಟು ಗ್ರಹಿಸಿದರೆ ದೈತ್ಯ ಗಾತ್ರದ ಪ್ರಾಣಿಯೊಂದರ ಬಾಲ ಸಮಗ್ರಾಕಾಶವನ್ನು ಪೂರ್ವದಿಂದ ಪಶ್ಚಿಮಕ್ಕೆ ಗುಡಿ ಸುತ್ತ ನಕ್ಷತ್ರಗಳನ್ನು ಪಶ್ಚಿಮದ ಪಾತಾಳಕ್ಕೆ ಎಸೆಯುತ್ತ ಸಾಗುತ್ತಿದೆ ಎಂಬ ಭಾವ ಸ್ಫುರಿಸುತ್ತದೆ. (ನೋಡಿ—ಕಿ. ಸಂ.—೧೧, ೯೭-೧೦೦, ಅದೇ, ೧೭೫-೧೭೭)

೨೭

ಪೃಥಿವಿಯಾಕರ್ಷಣೆಯ ಶಕ್ತಿ
ಗತಿಸಲ್ಕೆ ಬಾಂದಳಕೆ ಸಿಡಿವ ಪೃಥುಲಾಚಲದ ಕೂಟ

(ಕಿ. ಸಂ.—೧೧, ೧೦೮-೧೧೦)

ಹನುಮಂತ ಸಾಗರೋಲ್ಲಂಘನವನ್ನು ಇದೀಗ ತಾನೇ ತೊಡಗಿದ್ದಾನೆ—ಸ್ಥಾವರಾ ಚಲದ ಅಗ್ರದಿಂದ ಈ ಜಂಗಮಾಚಲ ಲಂಕಾಭಿಮುಖವಾಗಿ ಜಿಗಿದಿದೆ. ಜಂಗಮಾಚಲ

ದಲ್ಲಿ (ಅಂದರೆ ಹನುಮಂತನಲ್ಲಿ) ನೆಲೆಗೊಂಡಿರುವ ವೀಕ್ಷಕನಿಗೆ ಈ ದೃಶ್ಯ ಹೇಗೆ ಕಾಣುತ್ತದೆ? "ನಗಂ ತೆಕ್ಕನೆಯೆ ಕೆಳ ಕೆಳಗಿಳಿದುರುಳ್ವ ತೆರನಾಯ್ತು ನಿಮಿಷಮಾತ್ರಂ." ಭೂಮಿಯ ಮೇಲಿನ ಸಮಸ್ತ ಚರಾಚರ ವಸ್ತುಗಳೂ ಭೂಗುರುತ್ವದ ಪರಿಣಾಮವಾಗಿ ಭೂಮಿಗೆ ಬಂಧಿತವಾಗಿ ಉಳಿದುಕೊಂಡಿವೆ (ನೋಡಿ—೧೦). ಈ ಕಾರಣದಿಂದಲೇ ವಾಯು ಹಾಗೂ ಜಲರಾಶಿಗಳು ಭೂಮಂಡಲದಲ್ಲೇ ಉಳಿದಿವೆ ಮತ್ತು ಮೇಲೆಸೆದ ಕಲ್ಲು ನೆಲಕ್ಕೆ ಬೀಳುತ್ತದೆ. ಈಗ, ಕಾಲ್ಪನಿಕವಾಗಿ, ಈ ಗುರುತ್ವ ಬಲ ಇಲ್ಲವೆಂದು ಭಾವಿಸಿದರೆ ಏನಾದೀತು? ಅಂತರಿಕ್ಷದೆಡೆಗೆ ವಿಶಾಲ ಪರ್ವತ ಸಮೂಹಗಳು ಕೂಡ ಜಿಗಿದು ಮಾಯವಾಗದಿರವು. ಹನುಮಂತಲಂಘನ ಇಂಥ ಒಂದು ವಿದ್ಯಮಾನವನ್ನು ನೆನಪಿಗೆ ತರುವಂತಿತ್ತು ಎಂದು ಕವಿ ಇಲ್ಲಿ ಚಿತ್ರಿಸಿದ್ದಾರೆ.

### ೨೮

ದೇಶಮಂ ಪಿಂಡುತೆ ಕಿಮುಳ್ಚುತ್ತೆ ಕಾಲಮಂ

(ಕಿ. ಸಂ.—೧೧, ೧೯೦)

ಹನುಮಂತನ ಸಾಗರೋತ್ತರಣ ವೇಗವನ್ನು ವರ್ಣಿಸುವಾಗ ಬರುವ ಮಾತುಗಳಿವು. ಕವಿ ಇಲ್ಲಿ ಸಾಪೇಕ್ಷತಾ ಸಿದ್ಧಾಂತದ ಭಾವನೆಯನ್ನು ಸೊಗಸಾಗಿ ಅಳವಡಿಸಿಕೊಂಡಿದ್ದಾರೆ: ಕಾಲ (time) ಮತ್ತು ಆಕಾಶ (ದೇಶ space) ಅವಿಚ್ಛಿನ್ನವಾಗಿ ಬೆಸುಗೆಗೊಂಡಿವೆ, ಇದನ್ನು ದೇಶ-ಕಾಲ ಅವಿಚ್ಛಿನ್ನತೆ (space-time continuum) ಎನ್ನುವುದುಂಟು. ಇದನ್ನೇ ಕವಿ "ನೀಹಾರಿಕಾ ಲಕ್ಷಗಳ್, ನಕ್ಷತ್ರ ಕೋಟಿಗಳ್, ಸೂರ್ಯ-ಚಂದ್ರಾದಿ ವಂಕಿಮ ದೇಶಕಾಲದ ಮನೋಜ್ಞವೀಧಿ" ಎಂದು ವರ್ಣಿಸಿದ್ದಾರೆ (ಶ್ರೀ. ಸಂ.—೧೩, ೧೬೬-೧೬೮). ಮಹಾವೇಗದಲ್ಲಿ ಅಂದರೆ ಬೆಳಕಿನ ವೇಗದಲ್ಲಿ ಸಂಚರಿಸುವಾಗ ಮಾತ್ರ ಆಕಾಶ-ಕಾಲ-ಅವಿಚ್ಛಿನ್ನತೆ ವೇದ್ಯವಾಗುತ್ತದೆ.

### ೨೯

ರವಿಗಾತ್ರಮಂ ನಗುವ ತಾರಾದ್ವಯಂ,
ಸಂಖ್ಯಾತೀತಮಾ ಜ್ಯೋತಿವತ್ಸರದ ದೂರದೊಳ್,
ವಿಶ್ವಾಂತರಿಕ್ಷದೊಳ್, ಯುಗ ಯುಗಾಂತರಕೊರ್ಮೆ
ಲಕ್ಷಯೋಜನ ನಿಕಟಮಾಗಲ್, ಪರಸ್ಪರಂ
ಸಂಕರ್ಷಿಸಲ್ ತೊಡಗಿಪುವಯ್, ಶಿಖಿಜ್ವಾಲೆ
ಯೋಜನ ಸಹಸ್ರಮಂ ಲಂಘಿಸುತೆ, ಜಿಹ್ವೆಯಂ
ಚಾಚುತಾಕಾಶಮಂ ನೆಕ್ಕುತಿರೆ, ಮೆಲ್ಲನೆಯೆ
ಪ್ರಳಯಾನುರಾಗದಿಂದೊಂದನೊಂದಂ ಸೆಳೆದು
ಬಳಿ ಸಾರ್ವುವಾ ಮಂಡಲದ್ವಯಂ

(ಕಿ. ಸಂ.—೧೧, ೨೮೭-೨೯೦)

ನಮಗೆ ಸೂರ್ಯನೇ ಊಹಾತೀತ ಗಾತ್ರದ (ನೋಡಿ—೨೧) ನಕ್ಷತ್ರ. ಆದರೆ ವಿಶಾಲ

ವಿಶ್ವದಲ್ಲಿ ಇಂಥ ಹಾಗೂ ಇದಕ್ಕಿಂತ ಅಧಿಕ ಗಾತ್ರದ ನಕ್ಷತ್ರಗಳು ಸಂಖ್ಯಾತೀತವಾಗಿವೆ. ವಿಶ್ವದ ದೂರಗಳನ್ನು ಜ್ಯೋತಿವತ್ಸರದ ಮಾನದಂಡದಲ್ಲಿ ಅಳೆಯುವುದು ವಾಡಿಕೆ. ಸೆಕೆಂಡಿಗೆ ೩೦೦,೦೦೦ ಕಿಲೊಮೀಟರುಗಳನ್ನು ಧಾವಿಸುವ ಬೆಳಕಿನ ಕಿರಣ ೧ ವರ್ಷದ ಅವಧಿಯಲ್ಲಿ ಗಮಿಸುವ ದೂರವೇ ೧ ಜ್ಯೋತಿವತ್ಸರ (ಜ್ಯೋತಿರ್ವರ್ಷ). ನಮ್ಮ ದೃಷ್ಟಿಯಿಂದ ವಿಶ್ವದಲ್ಲಿ ವಿಪುಲ ನಕ್ಷತ್ರಗಳಿರುವುದು ನಿಜವಾದರೂ ವಿಶ್ವದ ಅಗಾಧತೆಯೊಡನೆ ಹೋಲಿಸುವಾಗ ಅದರ ಬಹ್ವಂಶ ಖಾಲಿಯಾಗಿಯೇ ಉಂಟು. ಇಂಥಲ್ಲಿ ಸಮ ಗಾತ್ರಗಳ ಎರಡು ನಕ್ಷತ್ರಗಳು ಪರಸ್ಪರ ಸಂಘರ್ಷಿಸುವಷ್ಟು ಸಮೀಪ ಬರುವುದು ಯುಗ ಯುಗಾಂತರಗಳಲ್ಲಿ ನಡೆಯುವ ಒಂದು ಅಪೂರ್ವ ಘಟನೆ. ಇದು ಸಂಭವಿಸಿದಾಗ ಈ ನಕ್ಷತ್ರಗಳ ನಡುವೆ ಗುರುತ್ವಾಕರ್ಷಣೀಯ ಕದನ ಆರಂಭವಾಗುವುದು. ಆಗ ಒಂದು ಇನ್ನೊಂದನ್ನು ತನ್ನೆಡೆಗೆ ಸೆಳೆಯತೊಡಗುತ್ತದೆ. ಇದರ ಪರಿಣಾಮವಾಗಿ ಪ್ರತಿಯೊಂದರಿಂದಲೂ ಇನ್ನೊಂದರ ಕಡೆಗೆ ಅನಿಲಜ್ವಾಲಾಜಿಹ್ವೆಗಳು ಚಾಚುತ್ತವೆ. ಇದೊಂದು ಮಹಾ ಪ್ರಳಯೋಪಮ ದೃಶ್ಯ. (ಇಂಥ ಒಂದು ಸಂಘಟ್ಟನೆಯ ಪರಿಣಾಮವಾಗಿ ಸೂರ್ಯ ಅದರ ಗ್ರಹವಲಯವನ್ನು ಪಡೆದಿರಬಹುದೆಂಬ ಒಂದು ಊಹೆ ೨೦ನೆಯ ಶತಮಾನದ ಆದಿಯಲ್ಲಿತ್ತು.)

೩೦

ಚುಕ್ಕಿ ಚುಕ್ಕಿಯ ಹಾಸುಹೊಕ್ಕಿಂದೆ ಕಿಕ್ಕಿರಿದ
ಅಸಂಖ್ಯ ನಕ್ಷತ್ರಮಯದಮೃತಪಥ

(ಕಿ. ಸಂ.—೧೧, ೬೧-೬೨)

ಸಾಗರೋತ್ತರಣ ಮುಗಿಸಿ ಹನುಮಂತ ಇನ್ನೇನು ಲಂಕಾದ್ವೀಪದ ಮೇಲೆ ಇಳಿಯಬೇಕು. ಆಗ ಸಂಜೆ ಆಗಿದೆ.

ಆರು ಬಣ್ಣಿಸಬಲ್ಲರಾಂಜನೇಯನ ದೃಷ್ಟಿ
ಕಂಡುದಂ, ಮೇಣ್ ಚಿತ್ತಮೊಳಕೊಂಡುದಂ ? ಹಿಗ್ಗಿ
ಕಂಡನಾಕಾಶದೆತ್ತರದಿಂದೆ ಲಂಕೆಯಂ,
ಬೈಗುಗಪ್ಪಪ್ಪಿರ್ದುಮುಜ್ಜ್ವಲಿಸುತಿರ್ದಾ
ಸಮುದ್ರವೇಲಾಸ್ಥಗಿತ ದೈತ್ಯನೃಪನಗರಿಯಂ,
ಜಟಿಲ ಕೌಶಲರಚಿತ ದೀಪಸ್ತಬಕ ಖಚಿತಮಂ
ವಿಸ್ತೀರ್ಣಮಂ.

(ಕಿ. ಸಂ.—೧೧, ೩೮೩-೩೮೯)

ಆ ಎತ್ತರದಿಂದ ಆಂಜನೇಯನಿಗೆ ಕಂಡ ಲಂಕಾನಗರಿಯ ಬೆಳಗು ದೃಶ್ಯವನ್ನು ಕವಿ, ಭೂತಳದಲ್ಲಿ ನಿಂತವನಿಗೆ ಬಾನಿನ ಅನಂತತೆಯಲ್ಲಿ ಕಾಣುವ ಆಕಾಶಗಂಗೆಗೆ ಹೋಲಿಸಿದ್ದಾರೆ. ಅಸಂಖ್ಯಾತ ನಕ್ಷತ್ರಗಳ ಒಕ್ಕೂಟವಿದು. ಬಿಡಿಯಾಗಿ ಎಣಿಕೆಗೆ ಸಿಕ್ಕದು; ಆದರೆ ಒಟ್ಟಾಗಿ ಮಂದ ಬೆಳಕಿನ ಹೊನಲು ದಕ್ಷಿಣದಿಂದ ಉತ್ತರಕ್ಕೆ ಚಾಚಿರುವಂತೆ ಭಾಸವಾಗುತ್ತದೆ.

೩೧

ಕೃತ್ತಿಕಾರೋಹಿಣಿಯರನುಗಾಮಿ ಮೃಗಶಿರಕೆ
ಹೊಂಚುತಿರ್ದುದು ಮೃಗವ್ಯಾಧ ಬಾಣೋಜ್ಜ್ವಲ
ಗಭಸ್ತಿ.

(ಕಿ. ಸಂ.—೧೨, ೩೪೧-೩೪೩)

ದಶಶಿರಕನಕಲಕ್ಷ್ಮಿಯಾದ ಲಂಕಿಣಿಯ ಸೊಕ್ಕು ಮುರಿದು ಹನುಮಂತ ನಿಜರೂಪದಲ್ಲಿ ಲಂಕೆಯನ್ನು ಪ್ರವೇಶಿಸುತ್ತಾನೆ. ಆಗ ಮಧ್ಯರಾತ್ರಿಯ ವೇಳೆ. ಪೂರ್ಣಚಂದ್ರಬಿಂಬ ಮುಗಿಲಿಲ್ಲದ ಆಗಸದಿಂದ ಮುಗಿಯದ ಜೊನ್ನಮಳೆ ಸುರಿಸುತ್ತಿದೆ. ನಕ್ಷತ್ರಗಳ ಕಾಂತಿ ಸಹಜವಾಗಿ ಮಸಳಿ ಅತ್ಯುಜ್ಜ್ವಲವಾದವು ಮಾತ್ರ ದೂರ ದೂರ ಹರಡಿಕೊಂಡಂತೆ ಕಾಣುತ್ತಿವೆ. ಇಂಥವುಗಳ ಪೈಕಿ ಮುಖ್ಯವಾದವು ವೃಷಭರಾಶಿ ಹಾಗೂ ಮಹಾವ್ಯಾಧ ನಕ್ಷತ್ರ ಪುಂಜ. ಮೊದಲಿನದರಲ್ಲಿ ಕೃತ್ತಿಕೆ ಮತ್ತು ರೋಹಿಣಿ ನಕ್ಷತ್ರಗಳೂ ಎರಡನೆಯದರಲ್ಲಿ ಮೃಗಶಿರಾ, ಆರ್ದ್ರಾ ಮೊದಲಾದ ನಕ್ಷತ್ರಗಳೂ ಇವೆ. ಮೇಲಿನ ಸಾಲುಗಳಲ್ಲಿ ಕವಿ ಒಂದು ಪುರಾಣೋಕ್ತ ಕಲ್ಪನೆಯನ್ನು ಬಳಸಿಕೊಂಡಿದ್ದಾರೆ. ವೃಷಭರಾಶಿಯಲ್ಲಿ ಮಹಾವ್ಯಾಧನನ್ನು ಹಾಯಲು ಮಲೆತು ನಿಂತಿರುವ ಎತ್ತು ಉಂಟು. ಇದರ ಮುಖ ಪೂರ್ವಕ್ಕಿದೆ (ಅಂದರೆ ಮಹಾವ್ಯಾಧನೆಡೆಗೆ). ಮಹಾವ್ಯಾಧ ಪುಂಜದಲ್ಲಿ ಒಬ್ಬ ಧೀರ ಬೇಟೆಗಾರ ಎತ್ತನ್ನು ಎದುರಿಸಿ ನಿಂತಿದ್ದಾನೆ. ಅವನು ಕೈದು ಹಿರಿದು, ಹಾಯಲು ಬರುತ್ತಿರುವ ಎತ್ತನ್ನು ನಿವಾರಿಸಿ, ಅದನ್ನು ಹಿಂದೆ ಹಿಂದೆ (ಅಂದರೆ ಪಶ್ಚಿಮ ದಿಕ್ಕಿಗೆ) ಅಟ್ಟುತ್ತಿದ್ದಾನೆ. ಆಕಾಶದ ದೈನಂದಿನ ಆವರ್ತನೆಯಲ್ಲಿ ವೃಷಭರಾಶಿಯನ್ನು "ಅಟ್ಟುತ್ತ" ಮಹಾವ್ಯಾಧ ಪುಂಜ "ಸಾಗುತ್ತಿದೆ" ಎಂಬುದನ್ನು ನೆನಪಿನಲ್ಲಿಡಬೇಕು. ಹನುಮಂತ ಲಂಕೆಯನ್ನು ಅನ್ವೇಷಿಸುತ್ತಿದ್ದ ಮೊದಲ ಘಟ್ಟದಲ್ಲಿ ಮೇಲೆ ವಿವರಿಸಿದ ದೃಶ್ಯ ಆಕಾಶದಲ್ಲಿ ಕಾಣುತ್ತಿತ್ತು. (ನೋಡಿ—ಲಂ. ಸಂ.—೧, ೩೪೬-೩೪೪; ೩೨)

೩೨

ಕಿಡಿಕಿಡಿಯೆ
ಮೂಡು ಬಾನೊಳ್ ಮೂಡಿ ಹೆಡೆಯೆತ್ತಿದಾ ರಾಶಿ
ವೃಶ್ಚಿಕಂ

(ಲಂಕಾ ಸಂಪುಟಂ—೨, ೪-೭)

ಹನುಮಂತ ಕನಕಲಂಕಾನ್ವೇಷಣೆಯನ್ನು ಮಾಡುತ್ತಿರುವ ಸನ್ನಿವೇಶ. ಸಂಜೆ ಹೊತ್ತು "ನಗರದುತ್ತರ ಗಿರಿಯ ನೆತ್ತಿಯಲಿ ಬಿಳ್ದುದೊಂದುರಿವರಿಲ್"—ಈ ಉಲ್ಕೆಯೇ ಹನುಮಂತ. ಅಲ್ಲಿಂದ ಮುಂದೆ ಅಪರಾತ್ರಿಯಲ್ಲಿ (ನೋಡಿ—೩೧) ಅವನು ಲಂಕಾಪ್ರವೇಶ ಮಾಡಿದ್ದಾನೆ. ಆಗ ಮಹಾವ್ಯಾಧ ಪುಂಜ ಹೆಚ್ಚು ಕಡಿಮೆ ಮಧ್ಯಾಹ್ನರೇಖೆಯ ಸಮೀಪದಲ್ಲಿದೆ. ಅನ್ವೇಷಣೆ ಮುಂದುವರಿದಂತೆ ಕಾಲ ಕೂಡ ಮೀರುತ್ತದೆ. ಕುಂಭಕರ್ಣನಿವಾಸದಿಂದ ಹನುಮಂತ ಹೊರಡುವ ವೇಳೆಗೆ "ಮಿನುಗುತಿರ್ದತ್ತು ಮೃಗಶಿರಂ ಪಶ್ಚಿಮವರ್ತಿಯಾಗಿ." ಮುಂದೆ ವಿಭೀಷಣನ ಹಾಗೂ ರಾವಣನ ಮಂದಿರಗಳನ್ನು ಶೋಧಿಸಿ ಸೀತೆ

ಯನ್ನು ಕಾಣದೇ "ಅಶೋಕ ವನಮಿರ್ಪ ತಾಣವನರಸಿ ತೊಳತೊಳಲಿ ಚರಿಸಿ"ದಂತೆ ಮೂಡುಬಾನಿನಲ್ಲಿ ವೃಶ್ಚಿಕರಾಶಿಯ ಹೆಡೆ (ಚೇಳಿನ ತಲೆಯ ಭಾಗ) ಏಳುತ್ತಿರುವುದು ಕಾಣು ವುದು. ಆಕಾಶದ ಪೂರ್ವ-ದಕ್ಷಿಣ ಭಾಗದಲ್ಲಿ ಮೂಡುವ ಈ ಸುಮಾರು ೧೨-೧೩ ಸ್ಪಷ್ಟ ನಕ್ಷತ್ರಗಳ ಚಿತ್ರ ಚೇಳಿನ ತಲೆ ಮತ್ತು ಮೈಯ್ಯ ಅಂಕುಡೊಂಕುಗಳನ್ನು ಚೆನ್ನಾಗಿ ಹೋಲು ತ್ತದೆ. ಮಹಾವ್ಯಾಧ ಪುಂಜ (ಅಂದರೆ ಮೃಗಶಿರಾ ನಕ್ಷತ್ರವಿರುವ ಸಮೂಹ) ಆಕಾಶದಲ್ಲಿ ಇರುವಾಗ ವೃಶ್ಚಿಕರಾಶಿ ಇರುವುದಿಲ್ಲ ಮತ್ತು ವಿಲೋಮವಾಗಿ ಕೂಡ.

೩೩

ಚೇತನಾಕಾಂಕ್ಷಿ ಜಡದಂತರಂಗದ ತಪದ
ವಿದ್ಯುದಣುಗಳ ರಣದ ಜಯಗಾಥ ಪಲ್ಲವಿಯೊ ?

(ಲಂ. ಸಂ.—೨, ೨೮೭-೨೮೮)

ಹನುಮಂತ ಅಶೋಕವನವನ್ನು ಹೊಕ್ಕಿದ್ದಾನೆ. ಮುಂಜಾನೆಯ ಹೊಂಬಿಸಿಲಿನ ರಿಂಗಣ ಕುಣಿತದಿಂದ ಅಶೋಕವನದೊಳಗೆ ನವಚೈತನ್ಯ ಪ್ರವಹಿಸಿ ಎಲ್ಲೆಲ್ಲಿಯೂ ಉಲ್ಲಾಸ ಹೊಮ್ಮುತ್ತಿದೆ. ಅದೇ ವೇಳೆಯಲ್ಲಿ "ಮರುತಜ ಮನದ ಕೋರಿಕೆಯ ಮಾಧುರ್ಯಮದೆ [ಸೀತಾದರ್ಶನವಾಗಬೇಕೆಂಬುದೇ ಈ ಕೋರಿಕೆ] ಬಹಿರ್ ಲೋಕ ದೊಳ್ ಭವಿಸಿದುದೊ... ಎನಲ್, ತೇಲಿ ಬಂದುದು ಕಿವಿಗೆ ತಂತಿಯಿಂಚರದ್ಯೆಂಜ್ರ ಜಾಲಿಕಂ" ಈ ರಸ ಸನ್ನಿವೇಶವನ್ನು ವರ್ಣಿಸುತ್ತ ಕವಿ ಮೇಲೆ ಉದ್ಧರಿಸಿರುವ ಸಾಲುಗಳನ್ನು ಬರೆದಿದ್ದಾರೆ; ತಂತಿಗಳ ಮೂಲಕ ಹರಿವ ಎಲೆಕ್ಟ್ರಾನುಗಳು (ವಿದ್ಯುದಣುಗಳು) ಬಲ್ಬ್-ತಂತುವಿನ ಮೂಲಕ ಪ್ರವಹಿಸಿದಾಗ ಬೆಳಕನ್ನು ಬೀರುವ (ಜಯಗಾಥ ಪಲ್ಲವಿ) ವಿದ್ಯಮಾನ ವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

೩೪

ಹೈಮ ಶೈಲ ಶಿರ
ಗುಹೆಯ ಗರ್ಭದಿ, ಕಳ್ತಲಿಡಿದ ಕರ್ಗ್ಗವಿಯಲ್ಲಿ,
ಶೈತ್ಯ ದೈತ್ಯನ ಭಯಕೆ ಹೆಪ್ಪುಗಟ್ಟಿರ್ದ ನೀರ್
ಉತ್ತರಾಯಣ ರವಿಯ ಛವಿಯ ಚುಂಬನಕೆಂತು
ಮಂಜುಗಡ್ಡೆಯ ತನ್ನ ಘನನಿದ್ರೆಯಂ ದ್ರವಿಸಿ,
ಪೆಡೆನಿಮಿರ್ದೊಯ್ಯನೆ ಸುರುಳಿವಿಚ್ಚುರ್ವೊಲ್ ಸ್ರವಿಸಿ
ಪರಿವಂತೆ

(ಲಂ. ಸಂ.—೩, ೧೦-೧೬)

ಅಶೋಕವನದಲ್ಲಿಯ ಪರ್ಣಕುಟಿಯೊಳಗೆ ಸೀತೆ ತನ್ನ "ದೀರ್ಘತಾ ಕ್ಲೇಶ"ದಲ್ಲಿ ಇನ್ನೂ ಒಂದು ರಾತ್ರಿ ಕಳೆದಿದ್ದಾಳೆ. ಹೊಸ ಹಗಲಿನ ಉದಯ ಸಾರುವ ಮೊದಲ ಕಿರಣದ ಪ್ರವೇಶ ಆಕೆಯ ದೃಷ್ಟಿಯಲ್ಲಿ "ಇನ್ನೊಂದು ದೀರ್ಘತರ ಸಂಕಟದ ದೀರ್ಘ ದಿನದವ ತಾರ"ದ ಸೂಚಕ ಮಾತ್ರ. ಆದರೂ ಮುಂಜಾನೆಯ ಸೂರ್ಯನ ಸುಖೋಷ್ಣಲೇಪನದಿಂದ ಮೈಥಿಳಿ "ಮೈತಿಳಿದೆದ್ದು ಕಣ್ದೆರೆದು, ಸುಯ್ದು ಸುತ್ತುಂ ನೋಡಿ, ಕಯ್ಮುಗಿದಳಿಷ್ಟದೇವತೆಗೆ,

ಮನೋರಾಮಚಂದ್ರಂಗೆ." ಆಕೆ ಎದ್ದ ಈ ದೃಶ್ಯವನ್ನು ಕವಿ ನೈಸರ್ಗಿಕ ವಿದ್ಯಮಾನ ವೊಂದಕ್ಕೆ ಮೇಲಿನ ಸಾಲುಗಳಲ್ಲಿ ಹೋಲಿಸಿದ್ದಾರೆ. ಅದೇ ವೇಳೆ ಹನುಮಂತ ಸೀತಾ ದರ್ಶನತವಕಿತನಾಗಿ ಅಶೋಕವನದ "ಶಾಂತ ಮೇಣ್ ಕಾಂತ ಕುಂಜದೈಕಾಂತ"ದಲ್ಲಿ ಕಾದಿದ್ದಾನೆ. ಮುಂದೆ ಸೀತಾಹನುಮಂತರ ಭೇಟಿ ಆಗುತ್ತದೆ. ಅದರ ಪರಿಣಾಮವಾಗಿ ರಾವಣಭಯ ಸೀತೆಗೆ (ಮಾತ್ರವಲ್ಲ, ಸಮಸ್ತ ಸಜ್ಜನರಿಗೆ ಕೂಡ) ನಿರ್ನಾಮವಾಗುತ್ತದೆ ಎಂಬುದನ್ನು ಗ್ರಹಿಸುವಾಗ ಈ ಸಾಲುಗಳಿಗೆ ಅಪೂರ್ವವಾದ ಒಂದು ಧ್ವನ್ಯರ್ಥ ಸಹ ಪ್ರಾಪ್ತವಾಗುತ್ತದೆ.

೩೫

ವಿದ್ಯುತ್

ಕಶಾಘಾತಕೆಂತು ಲೋಹದ ಜಡತೆ ಚೇತನಕೆ
ಚಿಮ್ಮುವುದೊ

(ಲಂ. ಸಂ.—೫, ೨೩೮-೨೪೦)

ಸುಗ್ರೀವಾಜ್ಞೆಯನ್ನು ಹೊತ್ತು ಹೋದ ದೂತರ ಪೈಕಿ ದಕ್ಷಿಣ ದಿಕ್ಕಿನವರು ಇನ್ನೂ ಮರಳಿಲ್ಲ. ಅವಧಿ ಮೀರಿಹೋಗಿದೆ. ಹಿಂದೆ ಬಂದವರಿಂದ ಮೈಥಿಳಿಯ ಇರವಿನ ಬಗ್ಗೆ ಏನೂ ಸುದ್ದಿ ತಿಳಿದಿಲ್ಲ. ಹೀಗಾಗಿ ರಾಮಲಕ್ಷ್ಮಣರಿಗೂ ಅಂತೆಯೇ ಸುಗ್ರೀವಾದಿ ಕಪಿ ಸಮಸ್ತರಿಗೂ ಮಂಕು ನಿರುತ್ಸಾಹ ಕವಿದಿದ್ದುವು. ಧೃತಿನಿಮ್ನತೆಯ ಇಂಥ ಸಂದರ್ಭದಲ್ಲಿ ಹನುಮಂತಾದಿಗಳ ಆಗಮನದ ದೃಶ್ಯವೇ ಕಿಷ್ಕಿಂಧಾಸಮಸ್ತರಲ್ಲಿಯೂ ಹುಮ್ಮಸ್ಸನ್ನು ಬೀರಿತು. ಹೇಗೆಂದರೆ, ಕಬ್ಬಿಣದ ಮೂಲಕ ವಿದ್ಯುತ್ತನ್ನು ಹರಿಸಿದಾಗ ಆ ಜಡ ಕಬ್ಬಿಣ ಅಯಸ್ಕಾಂತವಾಗುವಂತೆ, ಕಬ್ಬಿಣದ ರೇಕು ತುಣುಕುಗಳನ್ನು ತನ್ನೆಡೆಗೆ ಆಕರ್ಷಿಸುವ ಬಲ ಪಡೆಯುವಂತೆ.

೩೬

ಅತೀಂದ್ರಿಯ ಭಾವ

ಪಂಜರಮೆ ತಾನಾಧಾರಮಲ್ತೆ ಸೇಂದ್ರಿಯ ಸೃಷ್ಟಿ
ರಚನೆಗೆ ?

(ಲಂ. ಸಂ.—೯, ೧೧೨-೧೧೪)

"ಮರಣಮಥವಾ ಶರಧಿ ತರಣಂ" ಪಣತೊಟ್ಟು ಸಮುದ್ರರಾಜನೆದುರು ಬಾಣ ಹೂಡಲು ಸನ್ನದ್ಧನಾದ ಶ್ರೀರಾಮನೆಡೆಗೆ ಸಮುದ್ರದೂತನಾಗಿ ವಿಶ್ವಕರ್ಮ ಬರುತ್ತಾನೆ; ನಿಸರ್ಗದ ಮರ್ಯಾದೆಯೂ ರಾಮನ ವ್ರತವೂ ಉಳಿಯುವಂಥ ಒಂದು ಉಪಾಯ ಸೂಚಿಸುತ್ತಾನೆ : ತನ್ನ ಮಗ ನಳನ ನೆರವಿನಿಂದ ಸಮುದ್ರಕ್ಕೆ ಸೇತುವೆ ಕಟ್ಟಿದರೆ ಅದು ನೀರಿನ ರಾಶಿಯ ಮೇಲೆ ತೇಲುವುದೆಂದು ದೇವಶಿಲ್ಪಿ ಆಶ್ವಾಸಿಸುತ್ತಾನೆ. ಈ ಸಂದರ್ಭದಲ್ಲಿ ವಿಶ್ವಕರ್ಮನ ಬಾಯಿಯಿಂದ ಬರುವ ಮಾತುಗಳಲ್ಲಿ ಮೇಲಿನ ಸಾಲುಗಳೂ ಇವೆ. ವಾಸ್ತವ ವಾಗಿ ಒಂದೊಂದು ವಿಜ್ಞಾನಾವಿಷ್ಕಾರದ ಹಿನ್ನೆಲೆಯಲ್ಲೂ ಕಾಣುವುದು ಇದೇ ಸೂತ್ರವನ್ನು

—ಅತೀಂದ್ರಿಯ ಭಾವ ಪಂಜರವನ್ನು ಆಧರಿಸಿ ರಚಿಸಿರುವ ಸೇಂದ್ರಿಯ ಸೃಷ್ಟಿ. (ನೋಡಿ—ಶ್ರೀ. ಸಂ. ೧೧, ೫೮೯)

**೩೭**

ಇರಲಿರಲ್,
ತೆರೆದೆಮೆಯನಿಕ್ಕದ ಕುತೂಹಲದೊಳೀಕ್ಷಿಸಿರೆ,
ದೈತ್ಯ ಭೀಮನ ಸುಪ್ತಿ ನೀಹಾರಿಕೆಯ ನಡುವೆ
ಮಬ್ಬುರ್ಮ ಮಬ್ಬಾರ್ವಿರ್ಭವಿಸಿತಿಬ್ಬನಿಯ ದಿನದ
ಪೊಳ್ತರೆಯಳೆಂತಂತೆ ವೃಕ್ಷ ರೂಕ್ಷಚ್ಛಾಯೆ !
ಚಾಚಿ ಹಬ್ಬಿರ್ದ ಹಲೆಗಳನೊಯ್ಯನೊಯ್ಯನೆಯೆ
ಬಾಚಿ ಜೋಡಿಸಿ, ತಿರುಗಿತು ಸರೀಸೃಪಾಕೃತಿಗೆ !
. . . . . . . . . . . . . . . . . . . . . . . . . .
. . . . . . . . . . . . . . . . . . . . . . . . . .
ಪುತ್ತು
ಕರಗಲ್ ತಪಂಗೆಯ್ವ ಕಿತ್ತಡಿಯ ಮೆಯ್ವರಿಜು
ಕಣ್ಬೊಲಕೆ ಬೀಳ್ವಂತೆ, ಕಂಡುದು ಮಹಾಶಯ್ಯೆ ತಾಂ
ಪೊತ್ತ ಪೇರೆರ್ದೆಯ ಪೊದೆದಲೆಯ ದಾನವ ಭವ್ಯ
ಕುಂಭಕರ್ಣನ ಮಹದ್ ವಿಗ್ರಹಂ !

(ಶ್ರೀ ಸಂಪುಟಂ—೧, ೨೧೦-೨೭೨)

"ಕುಂಭಕರ್ಣನನೆಬ್ಬಿಸಿಮ್" ಸಂಚಿಕೆಯಲ್ಲಿ ಬರುವ ಸಾಲುಗಳಿವು. ಅಕಾಲದಲ್ಲಿ ಕುಂಭಕರ್ಣನನ್ನು ಎಬ್ಬಿಸುತ್ತಿರುವ ಸಂದರ್ಭ :

ಕುಂಭಕರ್ಣನನೆಬ್ಬಿಸುವರೆ ! ಹಾ !
ಪ್ರಳಯಫಣಿಯಂ ನಿದ್ದೆಗೆಡಿಪರೆ ! ಅವೇಳೆಯೊಳ್
ಹಬ್ಬಗೆಯ್ವರೆ ಜಗವನಾಮಿಳ್ತು ಪೆಬ್ಬುಲಿಗೆ !
ಮುಂದೆ ಗತಿ ಏನೆಂತೊ ತಮಗೆಂದು, ಗುಜುಗುಜಿಸಿ
ನೆರೆದುದು ಜನಂ, ತಂಡತಂಡದಿ ಬೀದಿಬೀದಿಯಲಿ !

(ಶ್ರೀ ಸಂ.—೧, ೧೭೭-೧೮೧)

ಶಂಖ ಊದಿದರು, ಜಾಗಟೆ ಬಾರಿಸಿದರು, ಗಂಟೆ ಹೊಡೆದರು
ಕಿವಿನಿಮಿರೆ ದಿಗ್ಗಜಕೆ
ಜಗಭಯಂಕರವಾಯ್ತು ನಿರ್ಘೋಷ.

(ಶ್ರೀ ಸಂ.—೧, ೨೦೯-೨೧೦)

ಆಗ ಕುಂಭಕರ್ಣ ಏಳುತ್ತಾನೆ—ಹಂತ ಹಂತವಾಗಿ ಅವನಿಗೆ ಎಚ್ಚರ ಬರುತ್ತದೆ. ಮೊದಲಿನ ಹಂತದಲ್ಲಿ ಆ ಮಬ್ಬಿನಿಂದ ಒಂದು ಸರೀಸೃಪಾಕೃತಿ ತಲೆ ಎತ್ತುತ್ತದೆ—ಅದು "ಪಿಂಗಾಕ್ಷಿವೆಸರಭೂತಿನಿ." ಇದಕ್ಕೆ ಬಲಿ ಒಪ್ಪಿಸಿ ಶಾಂತಿ ಮಾಡುತ್ತಾರೆ. ಎರಡನೆಯ

ಹಂತದಲ್ಲಿ "ನಕ್ರಗಳ್ ಮಕರಗಳ್ ಮತ್ಸ್ಯಗಳ್ ಮೇಲೇಳುತ್ತವೆ." ಇವು "ಜಲಪಿಶಾಚೋತ್ಕರಂಗಳ್." ಇವುಗಳಿಗೂ ಬಲಿ ಒಡ್ಡಿ ಶಾಂತಿ ಮಾಡಿದರು. ಮೂರನೆಯ ಹಂತದಲ್ಲಿ "ಮೂಡಿದುವು ಭೀಕರದ ಪಕ್ಷಿರೂಪಗಳಂತೆ ಪ್ರಾಣಿಯಾಕಾರಗಳ್." ಇವು "ಮೃತ್ತಿಕಾ ದೇವತೆಗಳನುಚರರ್." ಸರಿ ಇವಕ್ಕೂ ಬಲಿ ನೀಡಿ ತೃಪ್ತಿ ಪಡಿಸುತ್ತಾರೆ. ನಾಲ್ಕನೆಯ ಹಂತದಲ್ಲಿ "ಮೂಡಿದುದು ಸೌಧೋನ್ನತಂ ಸೌಧಗಾತ್ರದೊಳೊಂದು ವಿಗ್ರಹಂ ಪುಂಗವ ಪ್ಲವಂಗದಾ." ಕಪಿರೂಪದಲ್ಲಿ ಹೀಗೆ ಮೈದಳೆದದ್ದು "ಕುಂಭಿಕಾ ಭೂತಂ." ಇದಕ್ಕೆ ಒದಗಿಸಿದ ಬಲಿ ಏನು ಸಾಮಾನ್ಯವೇ?—

> ಇಡಿಯಿಡಿಯ ಕಾಳ್ಬಂದಿಗಳನೆತ್ತಿ ತುಯ್ದೆಸೆಯೆ
> ಬೀಳಗೊಡದೆಯೆ ಪಿಡಿದುದಾಮಹಾಮರ್ಕಟಂ !
> ಪೀರ್ದುದು ಕೊರಳ್ಕುರಿದು ವನವರಾಹನ ರುಧಿರ
> ಮದಿರೆಯಂ; ಹಿಂಡಿಕೊಂಡುದು ತನ್ನ ಬಾಯ್ಬಿಲಕೆ,
> ತಿಲದಿಂದೆ ತೈಲಮಂ ಪಿಳಿವ ಗಾಣಿಗನಂತೆ,
> ನೆಣಮಜ್ಜೆಯಂ !

(ಶ್ರೀ ಸಂ.—೧, ೨೫೮-೨೬೩)

ಅಲ್ಲಿಂದ ಮುಂದಕ್ಕೆ "ಕುಂಭ ದ್ರೋಣಮನೆ ಕರೆದುದು ಮುಸಲಧಾರೆ." ಆಗ ಏಳುತ್ತಾನೆ ನಿದ್ರೆ ಮುಗಿದ ಸಾಕ್ಷಾತ್ ಕುಂಭಕರ್ಣಂ, ದೈತ್ಯಭಾಸ್ಕರಂ ! "ವಿರಿಂಚಿ ಶಾಪದ ವಿಚಿತ್ರ ಕೃತಿ"ಯಾದ ಕುಂಭಕರ್ಣನನ್ನು ಅವೇಳೆಯಲ್ಲಿ ನಿದ್ರೆಯಿಂದ ಎಬ್ಬಿಸುವಾಗ ಏನೆಲ್ಲ ಭಯಂಕರ ಘಟನೆಗಳು ಸಂಭವಿಸಬಹುದು ಎಂಬುದನ್ನು ಕವಿ ಮೇಲೆ ಉದ್ಧರಿಸಿರುವ ಅರುವತ್ತಮೂರು ಸಾಲುಗಳಲ್ಲಿ ವರ್ಣಿಸಿದ್ದಾರೆ. ಇಲ್ಲಿಯ ಕಲ್ಪನೆ ಮತ್ತು ನಿರೂಪಣೆ ಘನಘೋರವಾಗಿವೆ, ಓದುಗರಲ್ಲಿ ಸಂದರ್ಭದ ಗಭೀರತೆಯನ್ನು ಚೆನ್ನಾಗಿ ಮೂಡಿಸುತ್ತವೆ. ಇನ್ನೂ ಒಂದು ಹೆಜ್ಜೆ ಮುಂದುವರಿದು ಇದರಲ್ಲಿ ಹುದುಗಿರುವ ವೈಜ್ಞಾನಿಕಾಂಶವನ್ನು ಗಮನಿಸಿದರೆ ಇಲ್ಲಿ ಕವಿ ವಿಕಾಸ ಸಿದ್ಧಾಂತವನ್ನು (theory of evolution) ಸೂತ್ರರೂಪದಲ್ಲಿ ವ್ಯಕ್ತಪಡಿಸಿದ್ದಾರೆ ಎಂದು ತಿಳಿಯುವುದು. ಮೊದಲು ಮೊಬ್ಬುಮೊಬ್ಬಾಗಿದ್ದ ಜೀವಿರಹಿತ ಪ್ರಪಂಚ. ಕಾಲಾಂತರದಲ್ಲಿ ಸರೀಸೃಪಗಳು ಮೈದಳೆಯುತ್ತವೆ. ವಿಕಾಸವೃಕ್ಷ ಬೆಳೆದು ರೆಂಬೆ ಒಡೆಯುತ್ತದೆ. ನೆಗಳೆ ಮೊಸಳೆ ಮೀನು ಮುಂತಾದ ಜಲಚರಿಗಳು ಹುಟ್ಟಿ ಪ್ರಪಂಚವನ್ನು ಆಳುವುವು. ಮುಂದಕ್ಕೆ ಇವುಗಳಿಂದಲೇ ಪಕ್ಷಿಗಳ ವಿಕಾಸವಾಗುತ್ತದೆ. ಆಗ ಕಪಿದಾನವನ ಉದಯಕ್ಕೆ ಕಾಲ ಸನ್ನಿಹಿತವಾಗುವುದು. ವಿಕಾಸಕ್ರಿಯೆಯ ಮುಂದಿನ ಘಟ್ಟದಲ್ಲಿ ಮಾನವನ (ಇಲ್ಲಿ ಕುಂಭಕರ್ಣನ) ಆಗಮನವಾಗುತ್ತದೆ. ವಿಕಾಸ ಸಿದ್ಧಾಂತಕ್ಕೆ ಈ ವರ್ಣನೆ ಹೊಂದಿಕೊಳ್ಳುವುದು ಎಂಬ ಸ್ವಾರಸ್ಯಕರ ಅಂಶವನ್ನು ನನಗೆ ಮೊದಲು ಸೂಚಿಸಿದವರು ಟಿ. ವಿ. ವೆಂಕಟಾಚಲಶಾಸ್ತ್ರೀಯವರು. (ಅವರಿಗೆ ಅದರ ವಿವರಣೆಯನ್ನು ಇತ್ತವರು ಕುವೆಂಪುಅವರೇ ಎಂದು ಶಾಸ್ತ್ರೀ ಹೇಳಿದರು.)

೩೮

ಸತೋಯ ನೀಲಾಂಬುದಕೆ
ಸುರಧನುಸ್ ಶೋಭೆಯಂ ನೀಳ್ಪ ರವಿ ಕರದಂತೆ

(ಶ್ರೀ ಸಂ.—೧, ೪೦೭-೪೦೮)

ಯುದ್ಧಕಾಂಡದಲ್ಲಿ ಕುಂಭಕರ್ಣನನ್ನು ಎಬ್ಬಿಸಿದ್ದಾರೆ. ಪರಿಸ್ಥಿತಿಯ ಸೂಕ್ಷ್ಮವನ್ನು ಅರಿತ ಆತ "ನಾಳೆ ಪೊಳ್ತರೆಯ ರಣಕೀ ರಾತ್ರಿ ಸಿದ್ಧನಾಗುವೆನೇಳಿ, ನೆಮ್ಮದಿಯ ಬಗೆಯಿಂದೆ ನಡೆಯಿ ನೀಂ ಮನೆಗೆ" ಎಂದು ಅಗ್ರಜನಿಗೆ ಆಶ್ವಾಸಿಸುತ್ತಾನೆ. ಇದನ್ನು ಬಲುವಾಗಿ ಮೆಚ್ಚಿಕೊಂಡ ರಾವಣ ಕುಂಭಕರ್ಣನನ್ನು ಅಪ್ಪಿ ಹೊಗಳಿ "ಮಹಾ ಹಾರಮಂ ತೊಡಿಸಿದನು ಕಂಠಕೆ"—ಹೇಗೆಂದರೆ, ನೀರಿನ ಹನಿಗಳಿಂದ ಕೂಡಿರುವ ಮಹಾ ಕಾಳಮೇಘ ರಾಶಿಗೆ ಸೂರ್ಯಕಿರಣ ಕಾಮನಬಿಲ್ಲನ್ನು ತೊಡಿಸುವಂತೆ. ಕಾಮನಬಿಲ್ಲು ಕೇವಲ ಕ್ಷಣಿಕವಾದದ್ದು, ಅಂತೆಯೇ ಕಾಲಮೇಘರಾಶಿ ಸದೃಶ ಕುಂಭಕರ್ಣನಿಗೆ ದೊರೆತ ಈ ಬಹುಮಾನವೂ ಕ್ಷಣಿಕವಾದದ್ದು ಎಂಬ ಭಾವ ಇಲ್ಲಿ ಧ್ವನಿಸುತ್ತದೆ.

೩೯

ಮೈದೋರ್ದುದೊಂದು ಪಗಲರಿಲ್

(ಶ್ರೀ ಸಂ.—೨, ೪೮೩)

ಕುಂಭಕರ್ಣ ಪ್ರದರ್ಶಿಸಿದ ಘೋರಯುದ್ಧದ ಅಂತಿಮ ಘಟ್ಟ; ನೇರವಾಗಿ ರಾಮನೊಡನೆ ಕುಂಭಕರ್ಣನಿಗೆ ಸಂಘಟ್ಟನೆ ಎದುರಾಗಿದೆ. ರಾಮ ಭೀಕರ ಶಕ್ತ್ಯಸ್ತ್ರ ಪ್ರಯೋಗಿಸುತ್ತಾನೆ. ಆಗ ಸಾಕ್ಷಾತ್ ಶಿವನೂ ಕಾತರಿಸುತ್ತಾನೆ. ಇದೊಂದೇ ಆಯುಧದಿಂದ ರಾವಣಾನುಜ ಹತನಾಗಲಾರ ಎಂದು ಗೊತ್ತಿದ್ದ ಶಿವ ಇದಕ್ಕೆ ಬೆಂಬಲವಾಗಿ "ಬೀಸಿದನು ರುದ್ರ ತ್ರಿಶೂಲಮಂ." ಈ ತ್ರಿಣೇತ್ರಾಯುಧ ಹಗಲಿನಲ್ಲಿ ನಕ್ಷತ್ರ ಕಂಡಂತೆ ಬಂದಿತಂತೆ. ಇಂಥ ದೃಶ್ಯ ಕೇವಲ ಕವಿಕಲ್ಪನೆಯಲ್ಲ. ಒಂದು ನಕ್ಷತ್ರ ತನ್ನ ಕೊನೆ ದಿನಗಳಲ್ಲಿ ಅತಿಶಯವಾಗಿ ಕುಗ್ಗಿ ಕಾದು ಅಂತಃಸ್ಫೋಟಿಸುವುದೆಂದೂ ಆಗ ಅದರ ಬೆಳಕು ಹಲವಾರು ಸಾವಿರ ಪಟ್ಟು ಏರುವುದೆಂದೂ ತಿಳಿದಿದೆ. ಇಂಥ ನಕ್ಷತ್ರಗಳಿಗೆ ಸೂಪರ್ನೋವಾಗಳೆಂಬ ಹೆಸರುಂಟು. ಸೂಪರ್ನೋವಾ ನಕ್ಷತ್ರವನ್ನು ನಡುಹಗಲಲ್ಲೂ ಕಾಣುವುದು ಸಾಧ್ಯ. ಖಗೋಳವಿಜ್ಞಾನದ ಇತಿಹಾಸದಲ್ಲಿ ಇಂಥ ಘಟನೆಗಳ ಉಲ್ಲೇಖವಿದೆ.

೪೦

ಅಣುಘೋರಮಸ್ತ್ರಂ ಸಿಡಿಯಲಾ ಮಹಾಸ್ಫೋಟಕೆ
ಸುದೂರ ಪುಟ ಭೇದನಂ ಭಿತ್ತಿ ಭೂಕಂಪಿಪೋಲ್ !

(ಶ್ರೀ ಸಂ. ೪, ೭೪೮-೭೪೯)

ಇಂದ್ರಜಿತು ರಹಸ್ಯವಾಗಿ ನಿಕುಂಭಿಲಯಾಗ ಕೈಗೊಂಡಿದ್ದಾನೆ. "ಮೃತ್ಯುಗರ್ಭಂ ತರತರನೆ ನಡುಗೆ ಮಾರಣಮಹಾಶಕ್ತಿಗಳೊಡನೆ ಸೃಜಿಸು"ವುದೇ ಅವನ ಉದ್ದೇಶ. ಇದೇನಾದರೂ ಸಿದ್ಧಿಸಿತೋ ಬಳಿಕ ಆತನನ್ನು ತಡೆಯುವವರು ಮೂಲೋಗರಲ್ಲಿ ಯಾರೂ

ಇಲ್ಲ. ಆದ್ದರಿಂದ ಈ ಯಾಗ ಪೂರ್ತಿ ಆಗುವ ಮುನ್ನವೇ ಅವನನ್ನು ಸಂಹರಿಸಬೇಕು ಎಂದು ನಿರ್ಧರಿಸಿ ಲಕ್ಷ್ಮಣಸಮೇತ ವಿಭೀಷಣಾದಿಗಳು "ಇಂದ್ರಜಿತು ಮೇಘನಾದಂ ನಿಕುಂಭಿಲೆಯ ಯಾಗದೊಳಿರ್ದ ನ್ಯಗ್ರೋಧ ಮೂಲದ ಗುಹಾರಹಸ್ಯವನರಸಿ, ರಜನಿ ಮುಗಿಯುವ ಮುನ್ನಮಾಕ್ರತು ಪ್ರಯತ್ನಮಂ ಕಿಡಿಸಿ ಭಂಗಿಸೆ ಕೂಟಯೋಧಿಯಂ" ಧಾವಿಸಿದರು. ಅತಿ ಕಠಿಣವಾದ ತಂತ್ರನೈಪುಣ್ಯದಿಂದ ಲಕ್ಷ್ಮಣ ಇಂದ್ರಜಿತುವನ್ನು ಸಂಹರಿಸಿದಾಗ ಅಲ್ಲಿ ನಡೆದದ್ದು ಎರಡು ಪ್ರಳಯಶಕ್ತಿಗಳ ನಡುವಿನ ಮಹಾಸಂಘಟ್ಟನೆ. ಇದನ್ನು ಕವಿ ಪರಮಾಣು ಬಾಂಬಿನ ಆಸ್ಫೋಟನೆಗೆ ಹೋಲಿಸಿರುವರು. ತಾನು ಈ ಭಾಗವನ್ನು ಬರೆಯುತ್ತಿದ್ದಾಗ ಪ್ರಪಂಚದ ಪ್ರಥಮ ಪರಮಾಣು ಬಾಂಬನ್ನು ಆಸ್ಫೋಟಿಸಲಾಗಿತ್ತು, ಅದರ ಸ್ಥೂಲ ವಿವರಗಳನ್ನು ಅವರು ಗಮನಿಸಿದ್ದರೆಂದು ನನ್ನೊಡನೆ ಹೇಳಿದರು.

## ೪೧

**ರಾವಣೋಲ್ಕೆಯ ಮರಣಮಯ ಪಥಕೆ** (ಶ್ರೀ ಸಂ.—೮, ೧೫೮)

ರಾವಣ ತಾನು ಏಕಾಂಗಿಯಾಗಿ ರಾಮನ ವಿರುದ್ಧ ಯುದ್ಧಮಾಡುವೆನೆಂದು ನಿರ್ಧರಿಸಿ ರಣರಂಗಕ್ಕೆ ಹೋಗುತ್ತಾನೆ. ದಶರಥನ ಚಂಡಿಕಾಧ್ವಜಯುಕ್ತ ರಥವನ್ನು ಕಂಡ ಕಪಿದಳ ಮೊದಲು ಅಚ್ಚರಿಪಟ್ಟರೂ ಇದೇನೋ ಹೊಸ ವಂಚನೆ ಎಂದು ಬಗೆದು ಅವನೆಡೆಗೆ ಸಹಸ್ರ ಸಂಖ್ಯೆಯಲ್ಲಿ ಧಾವಿಸುತ್ತದೆ: "ವಾನರ ಮಹಾಚಮೂವ್ಯೂಹಮುಖದೊಳಗಿರ್ದ ದಳಪತಿ ದರೀಮುಖಂ ತನ್ನ ಪಡೆಗಾಜ್ಞೆಯಂ ಕೈಬೀಸಿ ಬೆಸಸಿ ನುಗ್ಗಿದನು ತಾನೆಯೆ ಮುಂದೆ ರಾವಣೋಲ್ಕೆಯ ಮರಣಯ ಪಥಕೆ." ಖಗೋಳವೈಜ್ಞಾನಿಕವಾಗಿ ಉಲ್ಕಾಪಾತ, ಭೂಮಿಗೆ ಸಂಬಂಧಿಸಿದಂತೆ, ಒಂದು ಸ್ಥಳೀಯ ವಿದ್ಯಮಾನ. ಸೌರವ್ಯೂಹದಲ್ಲಿ ಬೇರೆ ಬೇರೆ ಕಕ್ಷೆಗಳಲ್ಲಿಯೂ ತಳಗಳಲ್ಲಿಯೂ ಸಂಚರಿಸುತ್ತಿರುವ ಅಸಂಖ್ಯಾತ ಸೂಕ್ಷ್ಮ ವಸ್ತುಗಳ ಪೈಕಿ (ಕಲ್ಲುಬಂಡೆಗಳು, ಲೋಹದ ಗಟ್ಟಿಗಳು ಇತ್ಯಾದಿ) ಯಾವುದೇ ಒಂದು ಭೂಗುರುತ್ವಾಕರ್ಷಣ ವಲಯದ ಸಮೀಪ ಬಂದಾಗ ಭೂತಳದೆಡೆಗೆ ಸೆಳೆಯಲ್ಪಡುತ್ತದೆ. ಅದರ ಬೀಳುವ ವೇಗ ಕ್ಷಣ ಕ್ಷಣ ಏರುತ್ತ ಹೋಗುವುದು. ತತ್ಪರಿಣಾಮವಾಗಿ ವಾಯುಮಂಡಲದೊಡನೆ ಅತೀವ ಘರ್ಷಣೆ ಉಂಟಾಗಿ ಅದರಿಂದ ಉಷ್ಣ ಸಂಜನಿಸಿ ವಸ್ತು ಕಾದು ಕೆಂಪಗಾಗಿ ಉರಿದು ಬೂದಿಯಾಗಿ ನಶಿಸಿಹೋಗುತ್ತದೆ. ಇದೇ ಉಲ್ಕೆ. ಅದು ಉರಿಯುತ್ತ ಮುನ್ನುಗ್ಗುತ್ತಿರುವಾಗ ಬಾನಿನಲ್ಲಿ ಭಾರಿ ಒಂದು ಬೆಂಕಿಗೆರೆಯನ್ನು ಎಳೆದಂಥ ದೃಶ್ಯವನ್ನು ಪ್ರದರ್ಶಿಸುತ್ತದೆ. ಈ ವಿದ್ಯಮಾನವನ್ನು ಹೆಚ್ಚುಕಡಿಮೆ ಪ್ರತಿರಾತ್ರಿಯೂ ನಾವು ಕಾಣಬಹುದು. ಉಲ್ಕೆಗೆ ಎದುರಾದ ವಸ್ತು ನುಚ್ಚುನುರಿಯಾಗಿ ನಾಶವಾಗುವುದು ಸರಿಯಷ್ಟೆ. ರಾವಣರಥದ ಪಥ ಉಲ್ಕಾರೇಖೆಯಂತಿತ್ತು, ಎದುರಾದ ಸಮಸ್ತರನ್ನೂ ನಾಶಪಡಿಸುತ್ತಿತ್ತು ಎಂಬುದು ಈ ಸಾಲಿನ ಭಾವ. ಇದರೊಂದಿಗೆ ಇನ್ನೂ ಒಂದು ಭಾವ ಅಧ್ಯಾಹಾರವಾಗಿದೆ. ಉಲ್ಕೆ ತನ್ನನ್ನು ತಾನೇ ಉರಿಸಿಕೊಂಡು ಆತ್ಮನಾಶಮಾಡಿಕೊಳ್ಳುವ ಒಂದು ವಸ್ತು. ರಾವಣನಾದರೂ ಪ್ರಸಕ್ತ ಸಂದರ್ಭದಲ್ಲಿ ಮಾಡಿದ್ದು ಇದನ್ನೇ. (ನೋಡಿ—೧೩; ಅ. ಸಂ.—೬, ೭೭-೭೮; ಶ್ರೀ ಸಂ.—೮, ೩೦೫)

೪೨

ಬಲವಂದುದೀ ಮೇದಿನೀ ಗೋಲಮೊಂಬತ್ತು ಸೂಳ್
ತಪೋನಿಧಿಯನಾದಿತ್ಯನಂ

(ಶ್ರೀ ಸಂ.—೧೩, ೧೦-೧೧)

“ಶ್ರೀರಾಮಾಯಣದರ್ಶನಂ” ಮಹಾಕಾವ್ಯದ ಬರೆವಣಿಗೆ ಇನ್ನೇನು ಮುಗಿಯುತ್ತಿದೆ; “ಅಭಿಷೇಕ ವಿರಾಡ್ ದರ್ಶನಂ” ಬರೆಯುತ್ತಿದ್ದಾರೆ ಕವಿ; ತಾವು ಈ ರಚನೆಯಲ್ಲಿ ಗುರು ಕೃಪೆಯಿಂದ ಯಶಸ್ವಿ ಆದದ್ದನ್ನು ಕೃತಜ್ಞತೆಯಿಂದ ಸ್ಮರಿಸುತ್ತಿದ್ದಾರೆ. ಒಂಬತ್ತು ವರ್ಷ ಗಳೇ ಈ “ಅಲೌಕಿಕ ನಿತ್ಯಸತ್ಯಂಗಳಂ ಪ್ರತಿಮಿಸುವ ಸತ್ಯಸ್ಯಸತ್ಯ ಕಥನಂ”ಅನ್ನು ರಚಿಸು ವಾಗ ಸಂದು ಹೋದದ್ದನ್ನು ಮೇಲಿನ ಸಾಲುಗಳಲ್ಲಿ ಹೇಳಿರುವರು. ಭೂಮಿ ಸೂರ್ಯನ ಸುತ್ತ ಪರಿಭ್ರಮಿಸುತ್ತಿರುವುದೂ ಇದರ ಅವಧಿಗೆ ವರ್ಷವೆಂಬ ಹೆಸರಿರುವುದೂ ಈಗ (ಅಂದರೆ ನಿಕೊಲಾಸ್ ಕೊಪರ್ನಿಕಸನ ಅನಂತರ) ಎಲ್ಲರಿಗೂ ತಿಳಿದಿರುವ ಸಂಗತಿ.

## ಭಾಗ ಮೂರು

ಈ ಲೇಖನದ ಭಾಗ ಎರಡರಲ್ಲಿ ೨೨, ೩೭ ಮತ್ತು ೪೨ರ ಹೊರತಾಗಿ ಉಳಿದ ಎಲ್ಲ ವಿವರಣೆಗಳನ್ನೂ ಕವಿ ಕುವೆಂಪು ಅವರು ಸ್ವತಃ ಪರಿಶೀಲನೆ ಮಾಡಿ ನನಗೆ ಯುಕ್ತ ಸಲಹೆ ಗಳನ್ನಿತ್ತು ನನ್ನ ಸಂದೇಹಗಳನ್ನು ನಿವಾರಿಸಿ ಉಪಕಾರ ಮಾಡಿದ್ದಾರೆ. ಕಾವ್ಯವನ್ನು ಓದುತ್ತಿದ್ದಾಗ ನನಗೆ ಎದುರಾಗುತ್ತಿದ್ದ ಹಲವಾರು ಸಮಸ್ಯೆಗಳಿಗೆ ಎನ್. ಪ್ರಹ್ಲಾದ ರಾಯರೂ ಪ್ರಭುಶಂಕರರೂ ಯೋಗ್ಯ ಪರಿಹಾರಗಳನ್ನು ನೀಡಿದ್ದಾರೆ. ಕವಿವರೇಣ್ಯರ ಹಾಗೂ ಈ ಇಬ್ಬರು ಮಹನೀಯರ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

**ಸಹ್ಯಾದ್ರಿ** ಗ್ರಂಥದಿಂದ ಉದ್ಧೃತ
ಪ್ರಧಾನ ಸಂಪಾದಕರು: ಡಾ. ದೇ. ಜವರೇಗೌಡ
ಸಂಪಾದಕರು: ಡಾ. ಜೀ. ಶಂ. ಪರಮಶಿವಯ್ಯ
ಡಾ. ಸಿ.ಪಿ. ಕೃಷ್ಣಕುಮಾರ್
ಸುಧಾಕರ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ (೧೯೭೫)

# ‘ನೆನಪಿನ ದೋಣಿಯಲ್ಲಿ’ ರಸಯಾನ

## ದೋಣಿ ಏರುವ ಮೊದಲು

ಮಲೆನಾಡಿನ ಕೊಂಪೆ. ಜಡಿಮಳೆ ಸುಡುಬಿಸಿಲುಗಳ ಎಡೆಬಿಡದ ಹಿಡಿವಾಟ. ಮಲೇರಿಯ ವಿಷಮಶೀತಜ್ವರಗಳೊಡನೆ ಸಹಜೀವನ. ಜೀವನದ ಅವಿಭಾಜ್ಯ ಅಂಗವಾಗಿ ಬೆಂಬತ್ತಿದ್ದ ಅಂಧಶ್ರದ್ಧೆಯಿಂದ ಪೀಡನೆ. ಪೌಷ್ಟಿಕಾಹಾರ, ಶುಚಿ, ನೈರ್ಮಲ್ಯ, ಆರೋಗ್ಯ, ಯೋಗ್ಯ ಶಿಕ್ಷಣ ಮುಂತಾದವು ಪುಸ್ತಕಗಳಲ್ಲಿ ಕೂಡ ಕಾಣದಿದ್ದ ದಿನಗಳು. ಇಂಗ್ಲಿಷಿನ ದೂರ ನಕ್ಷತ್ರವಿರಲಿ, ಕನ್ನಡದ ಸಮೀಪ ಸೂರ್ಯ ಕೂಡ ಪ್ರವೇಶಿಸಿರದಿದ್ದ ದಂಡಕಾರಣ್ಯ. ಇಂಥ ಪರಿಸರದಲ್ಲಿ ಹುಟ್ಟಿದ ಶಿಶುವಿನ ಭವಿಷ್ಯವೇನು? ಆ ಬೃಹದಾರಣ್ಯಕ ಚೇತನ ಅನಂತ ದೇಶಕಾಲದಲ್ಲಿ ಅನಂತಾಲ್ಪಾಂಶ ಘಟನೆಯಾಗಿ ಮತ್ತು ಅಪತ್ರಿಕಾವಾರ್ತೆಯಾಗಿ ಬಾಳಿ ಅದರಲ್ಲಿ ಲೀನವಾಗಿಹೋಗುವುದು ಮಾತ್ರ. ಹೀಗಲ್ಲದೆ ಅದರ ದೈತ್ಯಸಾರವನ್ನು ಮೈಗೂಡಿಸಿಕೊಂಡು ಸಕಲ ಪ್ರಾಪಂಚಿಕ ಸಂಬಂಧ ಬಂಧನಗಳಿಂದ ಬಿಡುಗಡೆಗೊಂಡು ಹನುಮಂತಭವ್ಯವಾಗಿ ಪ್ರವರ್ಧಿಸಿದುದಾದರೆ ಅದು ವಿಶೇಷ ಲಕ್ಷ್ಯಕ್ಕೂ ಉಲ್ಲೇಖಕ್ಕೂ ಪಾತ್ರವಾಗುತ್ತದೆ. ಮಲೆನಾಡಿನ ಕೂಸು ಕುಪ್ಪಳಿ ವೆಂಕಟಪ್ಪಗೌಡ ಪುಟ್ಟಪ್ಪ (೧೯೦೪) ಸಾರಸ್ವತ ಪ್ರಪಂಚದ ಪರ್ವಪುರುಷ—ಪರ್ವತೋಪಮ ಪುರುಷ ಕೂಡ—ಕುವೆಂಪುವಾಗಿ ವಿಕಸಿಸಿದುದರ ವೈಜ್ಞಾನಿಕ ಮತ್ತು ಕಲಾತ್ಮಕ ಚಿತ್ರಣೌತಣವೇ ‘ನೆನಪಿನ ದೋಣಿಯಲ್ಲಿ’ ಹೆಸರಿನ ಬೃಹತ್ಕೃತಿ.

ಆತ್ಮವೃತ್ತವನ್ನು ಬರೆದುಕೊಡಲೇಬೇಕೆಂದು ಪಾಲ್ ಆರ್ಥರ್ ಶಿಲ್ಪ್ ಎಂಬವರು ಆಲ್ಬರ್ಟ್ ಐನ್‌ಸ್ಟೈನರನ್ನು ದುಂಬಾಲು ಬಿದ್ದು ಪೀಡಿಸಿದಾಗ ಇವರು ಬರೆದ ಆತ್ಮವೃತ್ತದ ಪೀಠಿಕಾಪರಿಚ್ಛೇದ ಇಲ್ಲಿ ಉಲ್ಲೇಖಾರ್ಹವಾಗಿದೆ. ಏಕೆಂದರೆ ಐನ್‌ಸ್ಟೈನ್ ಮತ್ತು ಕುವೆಂಪು ಇವರುಗಳ ಬಾಲ್ಯ, ವಿದ್ಯಾಭ್ಯಾಸ ಮತ್ತು ಜೀವನದೃಷ್ಟಿಗಳಲ್ಲಿ ಸಾಕಷ್ಟು ಸಾಮ್ಯ ಉಂಟು. ಅಧಿಕಾರದ ಅಟ್ಟಳಿಗೆಯ ಒತ್ತುಗಂಬಗಳ ನೆರವಿನಿಂದ ನಿಂತಿರುವ ಪಳೆಯುಳಿಕೆ ಸಂಪ್ರದಾಯಗಳ ವಿಷಮ ಒಕ್ಕೂಟಕ್ಕೆ ಎಸ್ಟಾಬ್ಲಿಷ್‌ಮೆಂಟ್ (ವ್ಯವಸ್ಥಾಪನೆ) ಎಂಬ ಹೆಸರಿದೆ. ಐನ್‌ಸ್ಟೈನ್ ಹೇಗೊ ಕುವೆಂಪು ಹಾಗೆ ಈ ಎಸ್ಟಾಬ್ಲಿಷ್‌ಮೆಂಟನ್ನು ಪೂರ್ಣವಾಗಿ ತಿರಸ್ಕರಿಸಿದರು. “ವಾಸ್ತವತೆಯ ಅಥವಾ ಅಸ್ತಿತ್ವದ (ಸೃಷ್ಟಿಯ) ಕ್ರಮಬದ್ಧ ಸುಸಾಂಗತ್ಯದಲ್ಲಿ ಪ್ರಕಾಶಿತನಾಗುತ್ತಿರುವ ಸ್ಪಿನೋಝನ ದೇವರನ್ನು ನಂಬುತ್ತೇನೆ; ಜನರ ಅದೃಷ್ಟದ ಬಗ್ಗೆ ಚಿಂತಿಸುವ ದೇವರನ್ನಲ್ಲ” ಎಂದು ಐನ್‌ಸ್ಟೈನ್ ಘೋಷಿಸಿದರೆ, ಕುವೆಂಪು ಹಾಡಿದರು :

> ಸುಂದರವಾಗಿರು : ಈ ಸೌಂದರ್ಯ,
> ನಿನಗದೆ ಬಾಳಿನ ಸರ್ವೋತ್ತಮ ಕಾರ್ಯ;
> ಸೌಂದರ್ಯವೆ ಶಿವ ಕರ್ತವ್ಯ;
> ಸೌಂದರ್ಯವೆ ಸರ್ವೋತ್ತಮ ಗಂತವ್ಯ;
> ಸೌಂದರ್ಯವೆ ಸತ್,
> ಸೌಂದರ್ಯವೆ ಚಿತ್,
> ಸೌಂದರ್ಯವೆ ಆನಂದ:

ಆ ಸಾಧನೆಗಾಗಿಯೆ ಈ ಸೃಷ್ಟಿಯ ಬಂಧ,
ಆ ಸಿದ್ಧಿಗೆ ಮೀಸಲು ಮುಕ್ತಿಯ ನಿತ್ಯಾನಂದ !

ಇಂಥವರು ಲೌಕಿಕ ಪ್ರಪಂಚದ ವ್ಯಾಪಾರಗಳನ್ನು ನಿರಾಕರಿಸಿ ಭಾವನಾಲೋಕಗಾಮಿಗಳಾದದ್ದು ನಿರೀಕ್ಷಿತವೇ. ಅವರು ನ್ಯೂಟನ್ನನನ್ನು ಪ್ರಶ್ನಿಸಿ ಹೊಸ ಜಾಡು ಕಡಿದರು. ಇವರು ಕೇಶಿರಾಜನನ್ನು ಎದುರಿಸಿ ಹೊಸ ಹಾಡು ಹಾಡಿದರು :

ಶಬ್ದಮಣಿದರ್ಪಣವ ನಿದ್ದೆಹೋಗುವ ಮುನ್ನ
ನಾನಿನ್ನು ಮುಂದೆಂದು ನೋಡುವುದೆ ಇಲ್ಲೆಂದು
ಭೀಮನಂದದಿ ಪೂಣ್ದೊದರಿ ಶಯನದಿಂದೆದ್ದೆ !

ಆತ್ಮವೃತ್ತದ ಪೀಠಿಕೆಯಲ್ಲಿ ಐನ್‌ಸ್ಟೈನ್ ಹೀಗೆ ಬರೆದಿದ್ದಾರೆ (೧೯೪೬), "ಇಲ್ಲಿ ನಾನು ನನ್ನ ಅರುವತ್ತೇಳನೆಯ ವಯಸ್ಸಿನಲ್ಲಿ ನನ್ನದೇ ಮರಣವಾರ್ತೆಯಂಥ ಒಂದು ಲೇಖನ ಬರೆಯಲು ಕುಳಿತಿದ್ದೇನೆ. ಡಾಕ್ಟರ್ ಶಿಲ್ಪ್ ನನ್ನನ್ನು ಹೀಗೆ ಮಾಡಲು ಒಪ್ಪಿಸಿದರೆಂಬ ಒಂದೇ ಕಾರಣಕ್ಕಾಗಿ ಇದನ್ನು ಮಾಡುತ್ತಿರುವುದಲ್ಲ; ಒಬ್ಬಾತನ ಕಾರ್ಯ ಮತ್ತು ಶೋಧನೆಗಳನ್ನು ಸಿಂಹಾವಲೋಕಿಸಿದಾಗ ಅವು ಆತನಿಗೆ ಹೇಗೆ ಕಾಣುತ್ತವೆಂಬುದನ್ನು ಆತನೊಡನೆ ದುಡಿಯುತ್ತಿದ್ದವರಿಗೆ ತೋರಿಸಿಕೊಡುವುದು ಒಳ್ಳೆಯದೆಂಬ ಕಾರಣಕ್ಕಾಗಿಯೂ ಈ ಕೆಲಸಕ್ಕೆ ಕೈ ಹಾಕಿದ್ದೇನೆ. ಇಂಥ ಯಾವುದೇ ಪ್ರಯತ್ನ ಎಷ್ಟು ಅಪರಿಪೂರ್ಣವೆಂಬುದನ್ನು ಸ್ವಲ್ಪ ಆತ್ಮಶೋಧನಾನಂತರ ಅರಿತೆ. ಏಕೆಂದರೆ ಒಬ್ಬನ ಪ್ರವೃತ್ತ ಜೀವನ ಎಷ್ಟೇ ಸಂಕ್ಷೇಪ ಮತ್ತು ಸೀಮಿತವಾಗಿದ್ದರೂ ಅದರಲ್ಲಿ ದೋಷಮಾರ್ಗಗಳು ಎಷ್ಟೇ ಎದ್ದು ತೋರುವಂತಿದ್ದರೂ ನಿರೂಪಣಾರ್ಹ ಅಂಶ ಮಾತ್ರ ಅಷ್ಟೇನೂ ಸಲೀಸಾಗಿ ಬರುವುದೇ ಇಲ್ಲ—ಇಂದು ಅರುವತ್ತೇಳರಲ್ಲಿರುವ ವ್ಯಕ್ತಿ ಐವತ್ತರಲ್ಲಿ, ಮೂವತ್ತರಲ್ಲಿ ಅಥವಾ ಇಪ್ಪತ್ತರಲ್ಲಿ ಇದ್ದವನ ಹಾಗೆ ಖಂಡಿತ ಇರುವುದಿಲ್ಲ. ಒಂದೊಂದು ಹಳೆಯ ನೆನಪೂ ಇಂದಿನ ಪರಿಸ್ಥಿತಿಯಿಂದ ಬಣ್ಣ ಪಡೆದಿರುತ್ತದೆ. ಎಂದೇ ಇದೊಂದು ಮಿಥ್ಯಾ ದೃಷ್ಟಿಕೋನ. ಈ ಒಂದು ಪರಿಗಣನೆಯೇ ನಮ್ಮನ್ನು ಕಾರ್ಯವಿಮುಖರನ್ನಾಗಿಸಬಹುದು. ಹೀಗಿದ್ದಾಗ್ಯೂ ಬೇರೆ ಒಂದು ಪ್ರಜ್ಞೆಗೆ ಗಮ್ಯವಾಗದ ಅನೇಕ ಸಂಗತಿಗಳನ್ನು ಸ್ವಂತಾನುಭವದ ಮೂಸೆಯಿಂದ ಹೊರತೆಗೆಯುವುದು ಸಾಧ್ಯವಿದೆ."

ಇಲ್ಲಿ ಗಮನಿಸಬೇಕಾದ ಅಂಶ "ಬೇರೆ ಒಂದು ಪ್ರಜ್ಞೆಗೆ ಗಮ್ಯವಾಗದ ಅನೇಕ ಸಂಗತಿಗಳನ್ನು ಸ್ವಂತಾನುಭವದ ಮೂಸೆಯಿಂದ ಹೊರತೆಗೆಯುವುದು ಸಾಧ್ಯವಿದೆ." ಈ ಮೂಸೆಯಿಂದ ಉದ್ಭವಿಸಿರುವ ಪುತ್ತಳಿಯೇ 'ನೆನಪಿನ ದೋಣಿಯಲ್ಲಿ' ಆತ್ಮಕಥನ.

ಪ್ರಸಕ್ತ ಗ್ರಂಥದಲ್ಲಿ ಈ "ಅನೇಕ ಸಂಗತಿಗಳನ್ನು" ಕೇವಲ ಅಧ್ಯಯನಸೌಕರ್ಯ ದೃಷ್ಟಿಯಿಂದ ಮೂರು ವಿಶಾಲ ವಿಭಾಗಗಳಲ್ಲಿ ಗುರುತಿಸಬಹುದು. ಲೌಕಿಕ ವ್ಯಕ್ತಿ ಕುವೆಂಪು, ಸಾಹಿತಿ ಕುವೆಂಪು, ಆಧ್ಯಾತ್ಮಿಕ ವ್ಯಕ್ತಿ ಕುವೆಂಪು.

**ಲೌಕಿಕ ವ್ಯಕ್ತಿ ಕುವೆಂಪು**

ಅವಿಭಕ್ತ ಕುಟುಂಬದಲ್ಲಿ ಹುಟ್ಟಿದ ಈ ತಾವರೆ ಚಿಕ್ಕಂದಿನಿಂದಲೇ ಸಾಂಸಾರಿಕ ವಿಚಾರಗಳ ಬಗ್ಗೆ ಪದ್ಮಪತ್ರವಿಮಾಂಭಸದೃಷ್ಟಿ ತಳೆದಿತ್ತು: ಎಳವೆಯಲ್ಲೇ ಗಂಡನನ್ನು ಕಳೆದು

ಕೊಂಡು ಒಬ್ಬನೇ ಒಬ್ಬ ಮಗನ ಬಗ್ಗೆ ಕೊನೆಯಿಲ್ಲದ ಹಂಬಲಗಳನ್ನು ಗರ್ಭಿಸಿಕೊಂಡಿದ್ದ ತಾಯಿ ಸೀತಮ್ಮನವರ ಮಾತೃವಾತ್ಸಲ್ಯ ಅಣುಗ ಪುಟ್ಟಪ್ಪನವರಿಗೆ ಭಾವಗಮ್ಯವಾಗಿದ್ದರೂ ತಮ್ಮ ಪ್ರತಿಕ್ರಿಯೆಯನ್ನು ಅಥವಾ ಪ್ರತಿಸ್ಪಂದನವನ್ನು ಆ ಮಹಾತಾಯಿಗೆ ಅರ್ಥವಾಗುವ ರೀತಿಯಲ್ಲಿ—ಅಂದರೆ ಲೌಕಿಕ ಪಾತಳಿಯಲ್ಲಿ—ಪ್ರಕಟಿಸಲಾರದವರಾಗಿದ್ದರು. ಅವರು ಬರೆಯುತ್ತಾರೆ (ಪುಟ ೬೪), "ಆದರೆ ಅವ್ವ ಮಾತ್ರ ಅಪ್ಪಯ್ಯನ ಸಾವಿನ ಘಾತದಿಂದ ತತ್ತರಿಸಿದವರು ಸಂಪೂರ್ಣವಾಗಿ ಚೇತರಿಸಿಕೊಳ್ಳಲೇ ಇಲ್ಲವೆಂದು ತೋರುತ್ತದೆ. ಹುಡುಗನಾಗಿದ್ದು, ಓದುವುದಕ್ಕೆಂದು ಮನೆಬಿಟ್ಟು, ವರ್ಷದ ಬಹುಪಾಲೆಲ್ಲಾ ಹೊರಗಿದ್ದು, ರಜೆಗೆ ಮಾತ್ರ ಮನೆಗೆ ಬಂದರೂ, ವಿಶೇಷವಾಗಿ ಇತರ ಮನೆ ಮಕ್ಕಳೊಡನೆ ತೋಟ ಗದ್ದೆ ಕಾಡು ಬೇಟೆ ನಂಟರ ಮನೆ ಮೊದಲಾದ ಹವ್ಯಾಸಗಳಲ್ಲಿಯೇ ಆಸಕ್ತನಾಗಿರುತ್ತಿದ್ದ ಅಲಕ್ಷ್ಯ ಮನೋಭಾವದ ನನಗೆ ಅವ್ವನ ಸಂಗಡ ವೈಯಕ್ತಿಕ ವಿಷಯಗಳನ್ನು ಕುರಿತು ಮಾತಾಡುವ ಅವಕಾಶವೂ ಇರುತ್ತಿರಲಿಲ್ಲ; ಆಸಕ್ತಿಯೂ ಇರಲಿಲ್ಲ. ಹೀಗಾಗಿ ಅವರ ಹೃದಯದ ಬೇಗೆಯಲ್ಲಿ ನಾನು ಸಹಾನುಭೂತಿಯಿಂದ ಪಾಲುಗೊಳ್ಳಲೇ ಇಲ್ಲ. ಅವರನ್ನು ದಹಿಸುತ್ತಿದ್ದ ಅಪ್ಪಯ್ಯನ ಮರಣದ ಬೇಗೆಯ ಜೊತೆಗೆ ಸಂಸಾರದ ಈರ್ಷ್ಯಾದ್ವೇಷ ಅಸೂಯೆ ಕಾರ್ಪಣ್ಯಗಳ ಬೇಗೆಯೂ ಇದ್ದ ಒಬ್ಬ ಮಗನ ಅಲಕ್ಷ್ಯದ ಬೇಗೆಯೂ ಸೇರಿ, ಅಪ್ಪಯ್ಯ ತೀರಿಕೊಂಡ ಎಂಟೇ ವರ್ಷಗಳಲ್ಲಿ ಅವರೂ ಸ್ವಾಮಿಯ ಪಾದಾರವಿಂದಕ್ಕೆ ಸೇರಿದರು."

ವೈಯಕ್ತಿಕ ಹಿತಾಸಕ್ತಿಗಳು ಎದುರಾದಾಗಲೆಲ್ಲ ಇದೇ "ಅಲಕ್ಷ್ಯ ಮನೋಭಾವ" ಮತ್ತೆ ಪ್ರಕಟವಾಗುವುದನ್ನು ಕಾಣುತ್ತೇವೆ. ಪ್ರೀತಿಯ ತಂಗಿಯಂದಿರ ಅಕಾಲ ಮರಣವೇ ಆಗಲಿ, ಕಜ್ಜಿ ಜ್ವರ ಕೊನೆಗೆ ಘೋರ ಸಿಡುಬಿನಿಂದ ನರಳುತ್ತಿದ್ದ ತನ್ನ ಒಡಲಿನ ಪರಿವೆಯೇ ಆಗಲಿ, ವಿಶ್ವವಿದ್ಯಾನಿಲಯದ ನೌಕರಿಗೆ ದಾಖಲಾಗುವ ಸಂದರ್ಭವೇ ಆಗಲಿ, ಬಾಳ ಸಂಗಾತಿಯನ್ನು ಆಯುವ ಸುಮುಹೂರ್ತವೇ ಆಗಲಿ ಕುವೆಂಪು ಜೀವನಶ್ರುತಿ ಅದೇ—ತೋರ್ಕೆಗೆ ಸ್ಥಾವರ ಪ್ರಕೃತಿ, ನಿಜಕ್ಕೂ ವಿಶ್ವಗಾನಕ್ಕೆ ಮಿಡಿಯುತ್ತಿದ್ದ ಶ್ರುತಿ, ಅಲ್ಲವಿದು ವಿಕೃತಿ.

ಜೀವನಯಾಪನೆ ಸುಲಭವಲ್ಲದ ದಿನಗಳವು. ಎಲ್ಲ ಅಭ್ಯರ್ಥಿಗಳೂ ಹುದ್ದೆಯರಸಿ ಬಿದ್ದೆನೋ ಎದ್ದೆನೋ ಪರಿವೆ ಇಲ್ಲದೆ ಓಡುತ್ತಿರಬೇಕಾಗಿತ್ತು. ಆದರೆ ಭಾವಲೋಕವಿಹಾರಿ ಕುವೆಂಪು ಅವರನ್ನು ತತ್ಪೂರ್ವ ಮೈಸೂರಿನ ಸಂತೆಪೇಟೆಯ 'ಆನಂದ ಮಂದಿರ'ದ ರೌರವನರಕದಿಂದ ಶ್ರೀ ರಾಮಕೃಷ್ಣಾಶ್ರಮದ ಪ್ರಶಾಂತ ಮಂದಿರದ ಆಧ್ಯಾತ್ಮಿಕ ನಾಕಕ್ಕೆ ಕೈಹಿಡಿದು ಮೇಲೆತ್ತಿದ್ದ ಪರಮ ಪೂಜ್ಯ ಸ್ವಾಮಿ ಸಿದ್ಧೇಶ್ವರಾನಂದರು ಮರ್ತ್ಯಲೋಕಕ್ಕೆ ಇಳಿಸಿದರು: ವಿಶ್ವವಿದ್ಯಾನಿಲಯದ ಕನ್ನಡ ಲೆಕ್ಚರರ್ ಹುದ್ದೆಗೆ ತಾವೇ ಅರ್ಜಿ ತರಿಸಿ ಪುಟ್ಟಪ್ಪನವರಿಂದ ಅದನ್ನು ಭರ್ತಿ ಮಾಡಿಸಿ ರವಾನಿಸಿದರು (ಪುಟ ೮೪೬): "ಆ ಸ್ಥಾನಕ್ಕೆ ಆ ವರ್ಷ ಕನ್ನಡ ಎಂಎ ಪಾಸು ಮಾಡಿದ್ದ ಯಾರು ಯಾರು ಅರ್ಜಿ ಸಲ್ಲಿಸಿದ್ದರೊ ನನಗೆ ತಿಳಿಯದು. ನಾನಂತೂ ಆ ವಿಚಾರವಾಗಿ ಯಾರ ಮನೆ ಮೆಟ್ಟಲನ್ನೂ ಹತ್ತಲಿಲ್ಲ; ಯಾರಿಂದಲೂ ಶಿಫಾರಸು ಮಾಡಿಸುವ ಗೋಜಿಗೆ ಹೋಗಲಿಲ್ಲ. ಫಲಿತಾಂಶದ ಕಡೆಗೂ ಇನಿತೂ ಗಮನವಿಲ್ಲದೆ 'ದಿವ್ಯ ನಿರ್ಲಕ್ಷ್ಯತೆ'ಯಿಂದಿದ್ದುಬಿಟ್ಟಿದ್ದೆ. ಆದರೂ ಇಂಟರ್‌ಮೀಡಿಯೇಟ್ ಕಾಲೇಜಿನ (ಈಗಿನ ಯುವರಾಜಾ ಕಾಲೇಜು) ಕನ್ನಡ ಲೆಕ್ಚರರ್ ಆಗಿ ಅಪಾಯಿಂಟ್‌ಮೆಂಟ್ ಆರ್ಡರ್ ನನ್ನ ಕೈ ಸೇರಿತು, ತಿಂಗಳಿಗೆ ೧೦೦ ರೂ ಸಂಬಳದ ಮೇಲೆ."

ಶ್ರೀ ದೇವಂಗಿ ರಾಮಣ್ಣಗೌಡರ ಮಗಳು ಕುಮಾರಿ ಹೇಮಾವತಿಯವರೊಡನೆ— ಪದಿನಾರು ವರ್ಷಗಳ ಹಿಂದೆ ಹುಟ್ಟಿದ್ದ ಈ ಶಿಶುವಿಗೆ ಆಗ ಹದಿನಾರರ ಹರೆಯದ ಕುವೆಂಪುವೇ ಈ ಹೆಸರನ್ನು ಸೂಚಿಸಿದವರು—ಕುವೆಂಪು ಅವರ ಮದುವೆ ನಿಶ್ಚಯವಾದು ದರ ಬಗ್ಗೆ ಹೀಗೆ ಬರೆದಿದ್ದಾರೆ (ಪುಟ ೧೦೨೦), "ನನ್ನ ಮತ್ತು ಹೇಮಾವತಿಯ ಮದುವೆ ಗಿಂತಲೂ ಅರಂಜಿತವೂ ನೀರಸವೂ ಸಂಪ್ರದಾಯಸಾಮಾನ್ಯವೂ ಆಗಿರುವ ಘಟನೆ ಮತ್ತೊಂದಿರಲಾರದು ಎಂದು ಹೇಳಿ, ಒಮ್ಮೆಗೇ ನಮ್ಮ ವಿಷಯಕವಾದ ರೊಮಾನ್ಸ್ ಭ್ರಾಂತಿಯನ್ನು ಸರ್ವರ ಮನಸ್ಸಿನಿಂದಲೂ ನಿರಸನಗೊಳಿಸಲು ಬಯಸುತ್ತೇನೆ."

**ಸಾಹಿತಿ ಕುವೆಂಪು**

ಸಾಹಿತಿ ಕುವೆಂಪು ಹೇಗೆ ಮಲೆನಾಡಿನ ಸರ್ವಬೃಹತ್ತುಗಳನ್ನೂ ಸ್ವಾಂಗೀಕರಿಸಿಕೊಂಡು ಶ್ರದ್ಧಾಪೂರ್ವಕ ದುಡಿಮೆ, ನಿಷ್ಠಾಪೂರ್ವಕ ತಪಸ್ಸು ಮತ್ತು ಸತತ ವಾಚನ ಚಿಂತನ ಮಂಥನಗಳಿಂದ ಅಂಬೆಗಾಲೂರಿ ತಿಪ್ಪ ತಿಪ್ಪ ನಡೆದು ಕೊನೆಗೆ 'ಶ್ರೀ ರಾಮಾಯಣ ದರ್ಶನಂ' ಮಹಾ ಕಾವ್ಯದ ಮೂಲಕ ಹನುಮಂತಲಂಘನ ಸಾಧಿಸಲು ಸಮರ್ಥರಾದರು ಎನ್ನುವ ಬಹುಜನ ಅವೇದ್ಯ ಆದರೆ ಸರ್ವಜನ ಕುತೂಹಲಕಾರಿ ಸಂಗತಿಗಳಿಗೆ 'ನೆನಪಿನ ದೋಣಿಯಲ್ಲಿ' ಒಂದು ಅಮೂಲ್ಯ ಆಕರ ಗ್ರಂಥ.

ಆಧುನಿಕ ಕನ್ನಡದ ಈ ಮಹಾಚೇತನ ಇಂಗ್ಲಿಷಿನ ಸಂಪದ್ಭರಿತ ರಂಗದಲ್ಲಿ ಕವನ ರಚನೆ ಮಾಡಿ ಹೆಸರು ಗಳಿಸುತ್ತಿದ್ದ ಉಚ್ಛ್ರಾಯ ಕಾಲದಲ್ಲೇ (?) ರಿಕ್ತ ಕನ್ನಡ ರಂಗವನ್ನು (?) ಪ್ರವೇಶಿಸಬೇಕಾದದ್ದು ಇತಿಹಾಸದ ಸಂಕಲ್ಪವೆಂದು ಈಗ ಸ್ಪಷ್ಟವಾಗುತ್ತದೆ. ಇಂಗ್ಲಿಷ್‌ಕವನ ರಚನೆಗೆ ಇವರು ಹೇಗೆ ಸೆಳೆಯಲ್ಪಟ್ಟರು ಎನ್ನುವುದು ಸ್ವಾರಸ್ಯಕರವಾಗಿದೆ (ಪುಟ ೧೪೩), "ನನಗೆ ನೆನಪಿರುವಂತೆ ನನ್ನ ಮೊದಲ ಇಂಗ್ಲಿಷ್ ಪದ್ಯ ಅತ್ಯಂತ ಅಕಾವ್ಯಕ ಪ್ರೇರಣೆಯಿಂದ ತಯಾರಾದದ್ದು; ನನ್ನಗೆಳೆಯನೊಬ್ಬ ಚರಿತ್ರೆಯ ವಿದ್ಯಾರ್ಥಿ... ಅಕ್ಬರನ ವಿಷಯವನ್ನೋ ಔರಂಗಜೇಬನ ವಿಷಯವನ್ನೋ ಪರೀಕ್ಷೆಗಾಗಿ ಬಾಯಿಪಾಠ ಮಾಡು ತ್ತಿದ್ದ. ಮತ್ತೆ ಮತ್ತೆ ಮರೆತು ಹೋಗುತ್ತಿತ್ತು. ನಾನು ಅವನಿಗೆ ಹೇಳಿದೆ : ಈ ಚರಿತ್ರೆಯ ಸಂಗತಿಗಳನ್ನು ನಾನು ಇಂಗ್ಲಿಷಿನಲ್ಲಿ ಪದ್ಯದಂತೆ ರಚಿಸಿಕೊಡುತ್ತೇನೆ, ಛಂದಸ್ಸು ಪ್ರಾಸ ಬದ್ಧವಾಗಿ. ಆಗ ಬಾಯಿ ಪಾಠ ಮಾಡಲು ಸುಲಭವಾಗುತ್ತದೆ. ಪರೀಕ್ಷೆಯಲ್ಲಿ ಆ ವಿಷಯ ಗಳನ್ನು ಬಾಯಿಪಾಠ ಮಾಡಿದ ಪದ್ಯವನ್ನು ಹೇಳಿಕೊಂಡು ತಿಳಿದರೆ, ಬರೆಯಲು ಸುಲಭ ವಾಗುತ್ತದೆ—ಎಂದು. ಅವನು ಸಂತಸದಿಂದ ಒಪ್ಪಿದ. ನಾನು 'ಅಕ್ಬರ್ಸ್ ಟೂಂಬ್' ಎಂದೋ 'ಔರಂಗಜೇಬ್ಸ್ ಟೂಂಬ್' ಎಂದೊ ಹೆಸರಿಟ್ಟುಕೊಂಡು ಒಂದಷ್ಟು ಪಂಕ್ತಿ ಪದ್ಯ ತಯಾರಿಸಿದೆ. ಆ ಪುಣ್ಯಾತ್ಮ ಅದನ್ನು ಸುಲಭದಲ್ಲಿ ಬಾಯಿಪಾಠ ಮಾಡಿ ಬೇರೆ ವಿಷಯಗಳ ಮೇಲೂ ಇನ್ನಷ್ಟು ಪದ್ಯ ಬರೆದುಕೊಡಲು ಅಂಗಲಾಚಿದ. ವರ ಅನುಗ್ರಹಿ ಸುವ ದೇವತೆಯಂತೆ ನಾನೂ ಹೆಮ್ಮೆಯಿಂದಲೇ ಇನ್ನಷ್ಟು ಪದ್ಯ ತಯಾರಿಸಿಕೊಟ್ಟೆ. ಆದ್ದರಿಂದ ಅವನ ಪರೀಕ್ಷೆಗೆ ತುಂಬ ಅನುಕೂಲವಾಯಿತಂತೆ! ಹೇಗೋ ಅಂತೂ ಇಂಗ್ಲಿಷಿನಲ್ಲಿ ಪದ್ಯ ರಚಿಸುವುದಕ್ಕೆ ಪ್ರಾರಂಭದ ಗುದ್ದಲಿ ಪೂಜೆಯಾಯಿತು ಆ ಘಟನೆ."

ಕನ್ನಡಕುವರ ಪುಟ್ಟಪ್ಪ ಬೆಳೆದು ಬಂದ ದೇಶ ಕಾಲ ಪರಿಸರದಲ್ಲಿ ಕನ್ನಡ ಬೆಳೆಯು

ವುದೂ ಬೆಳೆದು ವರ್ಧಿಸಿ "ಶ್ರೀ ಕುವೆಂಪುವ ಸೃಜಿ"ಸುವುದೂ ಕನಸಾಗಿತ್ತು (ಪುಟ ೧೪೧), "ಆಗ ಪಾಠಗಳೆಲ್ಲ ಇಂಗ್ಲಿಷ್ ಮಾಧ್ಯಮದಲ್ಲಿಯೇ ನಡೆಯುತ್ತಿದ್ದುವು. ಕನ್ನಡ ಮಾಧ್ಯಮ ದಲ್ಲಿ ಅವು ನಡೆಯಲು ಸಾಧ್ಯವೆಂಬ ಅತ್ಯಂತ ದೂರದ ಊಹೆಯೂ ಯಾರೊಬ್ಬರಿಗೂ ಇದ್ದಿಲ್ಲ... ಇಂಗ್ಲಿಷ್ ಅಧ್ಯಾಪಕರು ಇಂಗ್ಲಿಷ್ ಪಾಠ ಮಾಡುವಾಗ ಕನ್ನಡದ ಪ್ರಯೋಗ ನಿಷಿದ್ಧವಾಗಿತ್ತು. ಹಾಗೇನಾದರೂ ಮಾಡಿದರೆ ಬೋಧನೆಯ ಪವಿತ್ರತೆಗೇ ಭಂಗವೆಂದು ಭಾವಿಸಲಾಗುತ್ತಿತ್ತು. ಕನ್ನಡದಲ್ಲಿ ಮಾತಾಡುವುದು ಅವಮಾನಕರವೆಂದೂ ಸರ್ವರೂ ಒಪ್ಪಿಕೊಂಡ ವಿಷಯವಾಗಿತ್ತು." ಇಂದಾದರೂ (೧೯೮೦) ಪರಿಸ್ಥಿತಿ ಸುಧಾರಿಸಿರುವಂತೆ ತೋರುವುದಿಲ್ಲ.*

ಮುಂದೆ ಆಂಗ್ಲ ಕವಿ ಜೇಮ್ಸ್ ಎಚ್. ಕಸಿನ್ಸ್ ಮಹಾಶಯರಿಂದ ತರುಣ ಇಂಗ್ಲಿಷ್ ಕವಿ ಪುಟ್ಟಪ್ಪನವರ "ತೇಜೋವಧೆಯಿಂದಾಗಿ ನಿರಾಸೆ"ಯಾಗುವ ತನಕ ಇವರ ಕನ್ನಡ ಕೃಷಿ ಮುಖ್ಯತಃ 'ಅಮಲನ ಕಥೆ' ಮತ್ತು ಇತರ ಒಂದೆರಡು ಕವನ ಬರೆಯುವಷ್ಟಕ್ಕೆ ಮಾತ್ರ ಸೀಮಿತವಾಗಿತ್ತು (ಪುಟ ೩೬೪). ಇಂಗ್ಲಿಷಿನಲ್ಲಿ ಸಾಧ್ಯವಾಗುವಂತೆ ಉದಾತ್ತ ಭಾವನೆಗಳನ್ನೂ ಉನ್ನತ ಆಲೋಚನೆಗಳನ್ನೂ ಕನ್ನಡದಲ್ಲಿ ಹೇಳಲು ಸಾಧ್ಯವಾಗುವುದಿಲ್ಲ, ಈ ಭಾಷೆಯ (ಕನ್ನಡ) ಮಟ್ಟ ಬಹಳ ಕೀಳು, ಅಲ್ಲದೆ ಇದರಲ್ಲಿರುವ ಛಂದಸ್ಸು ಹಳೆಯ ಕಂದಾಚಾರದ ಛಂದಸ್ಸು, ವೃತ್ತ, ಕಂದ ಇತ್ಯಾದಿ, ಇಂಗ್ಲಿಷಿನಲ್ಲಿರುವ ಛಂದೋವೈವಿಧ್ಯ ಇಲ್ಲವೇ ಇಲ್ಲ. ಇದು ಕಾಲೇಜ್ ವಿದ್ಯಾರ್ಥಿ ಪುಟ್ಟಪ್ಪನವರ ಖಚಿತ ನಿಲವು. ಇಂಥ ಇಂಗ್ಲಿಷ್ ಮೋಹಾಂಧನಿಗೆ ಕಸಿನ್ಸ್ ನೀಡಿದ ಸಕಾಲಿಕ ಎಚ್ಚರಿಕೆಯ ನುಡಿ ಪ್ರವಾದಿವಾಣಿ ಸದೃಶವಾಯಿತು (ಪುಟ ೩೬೫), "ಈಗ ನೋಡಿ ಬಂಗಾಳಿ ಭಾಷೆ. ನೀವು ನಿಮ್ಮ ಭಾಷೆ ಯನ್ನು ಕುರಿತು ಹೇಳಿದಂತೆಯೆ ಅದೂ ಇತ್ತು. ರವೀಂದ್ರನಾಥ ಠಾಕೂರರು ಬಂದರು; ಹೊಸ ರೀತಿಯಲ್ಲಿ ಬರೆದರು. ಹೊಸ ಛಂದಸ್ಸುಗಳನ್ನು ಕಂಡುಹಿಡಿದರು. ಅವರಿಗೆ ನೊಬೆಲ್ ಬಹುಮಾನವೂ ಬಂದಿತು. ಹಾಗೆಯೇ ನೀವು ಹೊಸ ಛಂದಸ್ಸುಗಳನ್ನು ಕಂಡು ಹಿಡಿದು, ಹೊಸ ಹೊಸ ಪದಪ್ರಯೋಗಗಳನ್ನು ಸಾಧಿಸಿ ಹೊಸ ರೀತಿಯ ಸಾಹಿತ್ಯ ಸೃಷ್ಟಿ ಮಾಡಬೇಕು—ನೀವು ಇಂಗ್ಲಿಷಿನಲ್ಲಿ ಸೃಜನಸಾಹಿತ್ಯ ಸೃಷ್ಟಿ ಮಾಡಲಾರಿರಿ"—ಇದು ಕಸಿನ್ಸ್ ಉಪದೇಶ, ಕನ್ನಡ ಡಿಂಡಿಮ ಬಾರಿಸಲು ಆದೇಶ, ನವಯುಗಾವಾಹನೆಗೆ ಸಂದೇಶ.

ಸ್ವಕೀಯ ಪರಿಸರದಿಂದ ಹೀರಿಕೊಂಡ ಪೋಷಕಗಳನ್ನು ಪರಕೀಯ ಕಾವ್ಯಮಾಧ್ಯಮದ ಮೂಲಕ ವೈವಿಧ್ಯಪೂರ್ಣವಾಗಿಯೂ ಆಕರ್ಷಕವಾಗಿಯೂ ಆ ತನಕ ಅಭಿವ್ಯಕ್ತಿಸಿದ್ದ ಈ ದೇಶೀ ಚೇತನ ಪರಪುಟ್ಟ ಕನ್ನಡದಲ್ಲಿ ಬರೆದ ಮೊದಲ ಕವನ 'ಪೂವು'ವನ್ನು ಕುರಿತು ಅವರೇ ಮಾಡಿರುವ ಟೀಕೆ (ಪುಟ ೩೭೧). "ಈ ಮೊದಲ ತೊದಲ ಕವನವು ಉತ್ತಮ ಕವಿತೆಗೆ ಭಾಷಾಪ್ರಭುತ್ವ ಎಷ್ಟರ ಮಟ್ಟಿಗೆ ಆವಶ್ಯಕ ಎಂಬುದನ್ನು ತೋರಿಸುತ್ತದೆ." ಇಂಗ್ಲಿಷನ್ನು ಅರಗಿಸಿಕೊಂಡಿದ್ದ ಕುವೆಂಪು ಅವರಿಗೆ ಕನ್ನಡದಲ್ಲಿ ಪ್ರಾವೀಣ್ಯ ಗಳಿಸುವುದು ಏನೂ ಕಷ್ಟವಾಗಲಿಲ್ಲ. ಯಮಸಾಧನೆ ಮಾಡಿ ಅಭಿಜಾತ ಸಾಹಿತ್ಯ, ವ್ಯಾಕರಣ, ಶಬ್ದಮಣಿ

---

* ೨೦೦೪ರಲ್ಲಿ ಸೇರಿಸಿದುದು: ವರ್ತಮಾನ ಪರಿಸ್ಥಿತಿ ಏನೆಂಬುದು 'ಅವರವರ ದರುಶನಕೆ!' ಬಿಟ್ಟಿದೆ !

ದರ್ಪಣ ಎಲ್ಲವನ್ನೂ ತಳಸ್ಪರ್ಶಿಯಾಗಿ ಅಭ್ಯಸಿಸಿದರು. ಇವುಗಳ ಗಂಭೀರ ಅಧ್ಯಯನದ ಬಗ್ಗೆ ಶಿರೋಮುಖಿಗಳಾಗಬಯಸುವ ಇಂದಿನ ಬಹುಮಂದಿ ಸಾಹಿತ್ಯವನ್ನು ತಿಣುಕಿ ಹೊಸೆವ ಲೇಖಕರಿಗೆ—ಅವರು ಸಾಹಿತ್ಯ ಕೃಷಿಕರಾಗಿರಬಹುದು, ಮಾನವಿಕ ಕೃಷಿಕರಾಗಿರಬಹುದು, ವಿಜ್ಞಾನ ಕೃಷಿಕರಾಗಿರಬಹುದು—ಪುಟ್ಟಪ್ಪನವರ ಈ ಶಾಸ್ತ್ರ ಕವಾಯತಿ ನಿಜಕ್ಕೂ ಮಾರ್ಗದರ್ಶಕ. ಇವರ ಪದ ಪ್ರಯೋಗಗಳು, ಉಪಮೆಗಳು, ಕಿರಿದರಲ್ಲಿ ಹಿರಿದರ್ಥವನ್ನು ಹಿಡಿದಿಡುವ ಚಾಕಚಕ್ಯ, ಪದ್ಯದಲ್ಲಿ ಹೇಗೊ ಗದ್ಯದಲ್ಲಿ ಹಾಗೆ ಅನುರಣಿಸುವ ಲಯವಿನ್ಯಾಸ ಒಂದೊಂದೂ ಗಮನಾರ್ಹ. ಪ್ರತಿಭೆಯ ಜೀವಸ್ಪರ್ಶವಾಗದ ಶಾಸ್ತ್ರ ಬರಿದೆ ಲೊಳಲೊಟ್ಟೆ, ಶಾಸ್ತ್ರದ ಕಂಕಾಲವಿರದ ಪ್ರತಿಭೆ ಬರಿದೆ ಗೊಸಂಬಟ್ಟೆ. ಪ್ರತಿಭೆ ಶಾಸ್ತ್ರಗಳ ಮಧುರ ಸಂಗಮವೇ ಜ್ವಲಂತ ಸಾಹಿತ್ಯದ ಆಧಾರ. "ನೆನಪಿನ ದೋಣಿಯಲ್ಲಿ" ಇದಕ್ಕೊಂದು ಉಜ್ಜ್ವಲ ನಿದರ್ಶನ.

## ಆಧ್ಯಾತ್ಮಿಕ ವ್ಯಕ್ತಿ ಕುವೆಂಪು

ಪುಟ್ಟಪ್ಪನವರ ಬದುಕಿನಲ್ಲಿ ಅಧ್ಯಾತ್ಮ-ಕಾವ್ಯ ಸಂಬಂಧ ಸಯಾಮಿ ಅವಳಿಗಳಂಥ, ಉಸಿರು ಅಸುವಿನಂಥ, ನೇಸರು ಬೆಳಕಿನಂಥ ಅವಿನಾಬಂಧ. ಜೈನಪರಂಪರೆಯ ಛಾಯೆ, ಮನೆಯಲ್ಲಿ ಜರಗುತ್ತಿದ್ದ ಸಾಂಪ್ರದಾಯಿಕ ದೇವಗಣಾರಾಧನೆ, ಮುಂದೆ ಮೋಸಸ್ ಮೇಷ್ಟರು ಬೋಧಿಸಿದ ಮಾರ್ಕನ ಸುವಾರ್ತೆ ಇವೆಲ್ಲವೂ ಎರಕಗೊಂಡು ಬಾಲಕ ಪುಟ್ಟಪ್ಪ ಮಾಂಸಾಹಾರ ವರ್ಜಿಸಲು ಶಪಥ ಮಾಡಿದರು. ಅದೇನು ಸಾಧಾರಣವಾದದ್ದೇ ! "ಆ ನಿರ್ಧಾರ ಬುದ್ಧನ ಪತ್ನೀ ಪುತ್ರ ರಾಜ್ಯ ಪರಿತ್ಯಾಗಕ್ಕಿಂತೂ ಕಡಿಮೆಯಾಗಿ ಇರಲಿಲ್ಲವೆಂದು ಮಾಂಸಾಹಾರದ ರುಚಿಯರಿತ ನಾಲಗೆಗಳಿಗಲ್ಲದೆ ಉಳಿದವರಿಗೆ ಗೊತ್ತಾಗುವುದಿಲ್ಲ!" (ಪುಟ ೭೮) ಇದರಲ್ಲಿಯ ಲಘು ಪರಿಹಾಸ ಹಾಗಿರಲಿ. ಇವರ ಅಂತಃಪ್ರಜ್ಞೆ ಯಾವುದರತ್ತ ತುಡಿಯುತ್ತಿತ್ತೆಂಬುದನ್ನು ಇಲ್ಲಿ ಚೆನ್ನಾಗಿ ಗುರುತಿಸಬಹುದು. ಅವರೇ ಬರೆದಿರುವಂತೆ—

> ಮನ್ಮನೋ ಮಂದಿರಕೆ, ಓ
> ಲೋಕ ಗುರುಗಳೆಲ್ಲ ಬನ್ನಿ !
>   ಬನ್ನಿ, ಬನ್ನಿ, ಬನ್ನಿ !
>   ತುಳಿಯೆ ನಿಮ್ಮ ಪದತಲ
> ದಲ ದಲ ದಲ ಅರಳ್ವುದೆನ್ನ
> ಶಿರಃಕಮಲಕುಟ್ಮಲ !
>   ತಮೋತಿಮಿರವಳಿಯಲಲ್ಲಿ
>   ಪರಂಜ್ಯೋತಿ ಬೆಳಗಲಿ !
> ಋತದ ಶಿವದ ಆನಂದದ
> ಚಿದ್‌ವಿಭೂತಿ ತೊಳಗಲಿ

ಅದ್ವೈತ, ಭಗವದ್ಗೀತೆ, ಅನುಭಾವ ಮುಂತಾದ ಹಾದಿಗಳಿಂದ ಅಗಮ್ಯದೆಡೆಗೆ ಗಮಿಸುತ್ತಿದ್ದ ಇವರ ಚೇತನ ಅರ್ಥರಹಿತ ವಿಧಿಗಳನ್ನೂ ಅಂಧ ಧರ್ಮಾಚರಣೆಗಳನ್ನೂ ಪೂರ್ಣವಾಗಿ ತಿರಸ್ಕರಿಸಿತು. ಬಾಲಕೃಷ್ಣ ಇವರ ಸಂಗಾತಿಯಾಗಿ ಬೆಣ್ಣೆ ದೋಸೆ ತಿಂದ. ಸಿಡುಬಿ

ನಿಂದ ನರಳಿ ಕೊನೆ ಉಸಿರೆಳೆಯುವುದರಲ್ಲಿದ್ದ ಎಲುಬಿನ ಗೂಡಿಗೆ ಸ್ವಾಮಿ ವಿವೇಕಾನಂದರ ಶಕ್ತಿ ಆವಾಹಿತವಾಗಿ ಪುರ್ನಜನ್ಮ ಪಡೆದರು (ಪುಟ ೭೪೭), "ಬಹಿರಂಗದ ಈ ರೋಗ-ನಾಟಕದ ತೆರೆಯ ಹಿಂದೆ ಅಂತರಂಗದ ಒಂದು ಯೋಗನಾಟಕವೇ ನಡೆದು ಹೋಯಿತು."

ಮುಂದೆ ೧೯೨೯ ಅಕ್ಟೋಬರ್ ಎರಂದು ಕುವೆಂಪು ಶ್ರೀ ರಾಮಕೃಷ್ಣಾಶ್ರಮದ ಶ್ರೀಮತ್ ಸ್ವಾಮಿ ಶಿವಾನಂದಜಿಯವರಿಂದ ಮಂತ್ರದೀಕ್ಷೆ ಪಡೆದರು. ಅಂದ ಮೇಲೆ ಇವರೊಂದು ಜಪಮಾಲೆ ಇರಿಸಿಕೊಳ್ಳಬೇಕಷ್ಟೆ (ಪುಟ ೮೭೮). "ಸಾಮಾನ್ಯವಾಗಿ ಮಂತ್ರ ದೀಕ್ಷೆ ಪಡೆದವರೆಲ್ಲ ಜಪಮಾಲೆಯಿಡುವ ವಾಡಿಕೆ. ಆದರೆ ನನ್ನ ಕವಿಚೇತನಕ್ಕೆ ಅಂಥ ಸಂಪ್ರದಾಯದ ಸಂಕೋಲೆಯ ಶಿಸ್ತು ಹಿಡಿಸುವುದಿಲ್ಲವಾದ್ದರಿಂದ ಒಲ್ಲೆ ಎಂದುಬಿಟ್ಟೆ. ಕವಿಯ ಸಾಧನಮಾರ್ಗವೇ ಬೇರೆ. ಸಂನ್ಯಾಸಿಯ ಸಾಧನಮಾರ್ಗವೇ ಬೇರೆ." ಆಗ ಇವರು ಬರೆದ ಕವನದ ಒಂದು ನುಡಿ ಇವರ ಆಧ್ಯಾತ್ಮಿಕ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ:

ಜೀವನವನಿತುಂ ಜಪವೆನಗಾಗಿರೆ
ಜಪಗಿಪ ಮಣಿಗಿಣಿ ಮಾಲೆಯದೇಕೆ ?
ಸುಂದರ ಜಗ ಶಿವಮಂದಿರವಾಗಿರೆ
ಅಂಥತೆ ಕವಿದಿಹ ದೇಗುಲವೇಕೆ?

**ಯಾನ ವಿರಾಮ**

'ನೆನಪಿನ ದೋಣಿಯಲ್ಲಿ' ಗ್ರಂಥ ಪೂರ್ತಿ ಬರೆದು ಮುಗಿದಿಲ್ಲ. ನೂರ್ಕಾಲ ಮೀರಿ ಈ ರಸಋಷಿ ಬಾಳಿ ಜಗಕೆ ಹರ್ಷ ಬೀರಲಿ ! ಆದ್ದರಿಂದ ನನ್ನ ಲೇಖನದ ಈ ಪರಿಚ್ಛೇದಕ್ಕೆ 'ಯಾನ ವಿರಾಮ' ಎಂಬ ಶೀರ್ಷಿಕೆ ನೀಡಿದ್ದೇನೆ.

ಕುವೆಂಪು ಅವರ ಕಾವ್ಯಮಯ ಗದ್ಯದ ಸತ್ತ್ವ 'ನೆನಪಿನ ದೋಣಿಯಲ್ಲಿ' ಕೂಡ ಮತ್ತೆ ಮತ್ತೆ ಪ್ರಕಟಗೊಂಡು ವಿಶೇಷ ಅನುಭವವನ್ನು ಕೊಡುತ್ತದೆ. ಪುಸ್ತಕವನ್ನು ಓದಲು ಕೈಗೆತ್ತಿ ಕೊಂಡರೆ ಸಾಕು: ಘಟನೆಗಳ ಸಾಲೇ ಸಾಲು ತ್ವರಿತಗತಿಯಿಂದ ದೃಕ್ಪಟಲದ ಮುಂದೆ ಸರಿಯತೊಡಗುತ್ತದೆ. ಭಾಷೆಯ ಪಾತ್ರ ಓದುಗನ ಮನಸ್ಸಿಗೂ ಘಟನೆಗಳ ಸರಣಿಗೂ ನಡುವಿನ ಮಾಧ್ಯಮವಾಗಿ ಸಾರ್ಥಕಗೊಳ್ಳುವುದರಲ್ಲಿ ಮಾತ್ರ ಎಂಬುದರ ಅರಿವು ಮೂಡು ತ್ತದೆ. ಯಾವ ಶಾಸ್ತ್ರಗ್ರಂಥ ಅಥವಾ ನಿಘಂಟು ಓದಿದಾಗ ಲಭಿಸದ ಭಾಷಾಪ್ರಾವೀಣ್ಯ, ಪದಾರ್ಥಜ್ಞಾನ ಮತ್ತು ಪ್ರಕೃತಿ ಲೀಲೆ ಓದುಗನಿಗೆ ಅಪ್ರಯತ್ನಿತವಾಗಿ ಇಲ್ಲಿ ಸಿದ್ಧಿಸುತ್ತವೆ. ಆದ್ದರಿಂದಲೇ ಪ್ರಸಕ್ತ ಲೇಖನಕ್ಕೆ ರಸಯಾನ ಎಂಬ ಹೆಸರಿಟ್ಟಿರುವುದಾಗಿದೆ. ಕುವೆಂಪು ಜೊತೆ "ವಾಗ್ದೇವಿಯಮೃತ ರಸನೆಯ ಲಸನ್ ನಾವೆಯಂ" ಏರಿ ಅವರ ಸಹಪ್ರಯಾಣಿಕ ರಾಗಿ ಸಾಗುವ ಸಹೃದಯರಿಗೆ ಇದರಲ್ಲಿ ಅನೇಕ ಆಕರ್ಷಕ ರಸಪ್ರಸಂಗಗಳು ಬಹುಮಾನ ಗಳಾಗಿ ಲಭಿಸುತ್ತವೆ. ಅವುಗಳಲ್ಲಿ ಪ್ರಕಟವಾಗುವ ವರ್ಣನಾವೈಖರಿ, ಸೂಕ್ಷ್ಮ ಮತ್ತು ದೂರದೃಷ್ಟಿ, ಕೋಮಲ ಪರಿಹಾಸ, ರಸಾಭಿಜ್ಞತೆ, ವೈಜ್ಞಾನಿಕ ಮನೋಧರ್ಮ ಮತ್ತು ಎಲ್ಲಕ್ಕೂ ಮಿಗಿಲಾಗಿ ಜೀವನದ ಸಕಲ ವ್ಯಾಪಾರಗಳ ಬಗ್ಗೆ ಇರುವ ಆರೋಗ್ಯಕರ ಶ್ರದ್ಧೆ ಅನ್ಯಾದೃಶವಾದವು.

ಬಾಲ್ಯ ದಿನಗಳ ಸ್ಕೀ[ಸಿಹಿ]ಅಪ್ಪುವಿನ ಮಧುರಸ್ಮರಣೆ ಇಳಿಹರೆಯದಲ್ಲಿ ಇಂಗು ತಿಂದ

ಸಿಂಗಲೀಕತನಕ್ಕೆ ಎಡೆಮಾಡಿಕೊಟ್ಟುದರ ವರ್ಣನೆ, ಹೆಮ್ಮಿಂಗ್‌ವೇಯ 'ಓಲ್ಡ್ ಮ್ಯಾನ್ ಅಂಡ್ ಸೀ'ಯಲ್ಲಿಯ ಮುದುಕನಂತೆ ನೀರಿಗೆ ಗಾಳ ಹಾಕಿ ಎಳೆದೂ ಎಳೆದೂ ಕೊನೆಗೂ ಬಂದ ಆದಿ ಮತ್ಸ್ಯಾವತಾರದ ಪೂರ್ವಜ ಹೆಮ್ಮಲಗದ ಸುವಾಸನೆ, ಮಲೆನಾಡಿನ ಡರ್ಝುನ್ ಬಕಾಸುರ ರೊಟ್ಟಿಗಳ ಭೀಮಸಂಹಾರದ ಮಹಾ ನಿರ್ಯಾಣ, ಕದಿನಿ ಪ್ರಯೋಗದ ಮೂಕ ಶೋಕ, ಶಿವಮೊಗ್ಗಕ್ಕೆ ಗಾಡಿ ಪಯಣದ ಸರಸಯಾತ್ರೆ, ಕಿಲಸ್ತರ ಡಿಸೋಜ, ಶಂಕರ ಭಟ್ಟರ ಬ್ರಹ್ಮ ತೇಜಸ್ಸಿನೆದುರು ಬಿದರಳ್ಳಿ ಸುಬ್ಬೇಗೌಡರ ಮಗನಾಗಿ ಜನ್ಮಾಂತರಿಸಿದ್ದು, 'ಆನಂದ ಮಂದಿರ' ಹೊಟೇಲಿನ ಕೊಠಡಿಯಲ್ಲಿ ತಿಗಣೆ ಹನನ ಮತ್ತು ನಸ್ಯ ಚಿತ್ರಕಲೆ, ಪಂಚೆಯ ತ್ರಿವಿಕ್ರಮಾವತಾರ, ಸೈಫರಿನ ಸುತ್ತ ಎದ್ದ ರಾದ್ಧಾಂತ, ನಿಸರ್ಗ ವರ್ಣನೆಯ ವೈಖರಿ, ಮೃಗಯಾವಿಹಾರ ವಿನೋದಗಳ ಕೌಶಲ ಮತ್ತು ದಿಟ್ಟತನ ಇವು ಒಂದೊಂದು ಘಟನೆಯನ್ನೂ ಬಾಯಿ ಚಪ್ಪರಿಸಿಕೊಂಡು ಓದಬೇಕಾಗುತ್ತದೆ.

ಇವರ ನಿತ್ಯಹರಿದ್ವರ್ಣದ ಹಾಸ್ಯಪ್ರಜ್ಞೆ ವಿಶಿಷ್ಟವಾದದ್ದು. ಸನ್ನಿವೇಶ ಎಷ್ಟೆಷ್ಟು ಕ್ಷುಲ್ಲಕವಾಗುವುದೋ ಅದನ್ನು ಕುಂಚಿಸುವ ಇವರ ಭಾಷೆ ಅಷ್ಟಷ್ಟು ಶ್ರೀಮದ್ಗಂಭೀರವಾಗುವುದು. ಸರಿ, ಓದುಗ ಏನೋ ಮಹತ್ತು ಆಗಮಿಸಲಿದೆ ಎಂದು ಜಂಬೂ ಸವಾರಿಯ ಪ್ರತೀಕ್ಷೆಯಲ್ಲಿ ಬಟ್ಟೆ ತಯಾರಿಸುತ್ತಾನೆ ; ಕೆಂಬಟ್ಟೆಯನ್ನೂ ಹಾಸುತ್ತಾನೆ. ಅಷ್ಟರಲ್ಲೇ ಅಗೊ ಬಂತು ಬಂತು; ಏನು ಬಂತು ? ಒಂದು ಸುಂಡಿಲಿ! ಹಿಮಾಲಯದ ಮಹೋನ್ನತಾಗ್ರದಿಂದ ಶಾಂತ ಸಾಗರದ ಅತಿ ನಿಮ್ನ ತಳಕ್ಕೆ ಹಠಾತ್ತಾಗಿ ಕೆಡೆಯಲ್ಪಟ್ಟ ವಾಚಕನ ನಗುವಿನ ಹೊನಲಿಗೆ ಅದೇ ಶಾಂತ ಸಾಗರದ ಭೋರ್ಗರೆವ ತರಂಗಾಟ್ಟಹಾಸ ಮಾತ್ರ ಸಮತೂಕವಾಗಬಹುದೋ ಏನೊ! ಪುಟ ೪೭-೪೮ರಲ್ಲಿ ಬರುವ ಸಾಬೂನು ಆಖ್ಯಾನಕ, ಪುಟ ೭೩-೭೪ರಲ್ಲಿ ಬರುವ ಅರೆಕೊಪ್ಪನ ಹೆಮ್ಮಲಗ ಪ್ರಕರಣ, ಪುಟ ೧೬೬ರಲ್ಲಿ ಬರುವ ತೋಪಿಯಜ್ಞ ಮುಂತಾದ ರಸಪ್ರಸಂಗಗಳ ಸ್ವಾರಸ್ಯವನ್ನು ಮೂಲದಲ್ಲೇ ಓದಿ ಸವಿಯಬೇಕು.

ಅನೇಕ ಮಂದಿ ನಿಷ್ಕ್ರಿಯಾವಂತರು ಮತ್ತು ನಿಷ್ಪ್ರಾರಂಭಿಗಳು (ನಾನ್‌ಡೂಅರ್ಸ್ ಅಂಡ್ ನಾನ್‌ಸ್ಟಾರ್ಟರ್ಸ್) ಇಂದು ಒಂದು ತೆರನಾದ ಭ್ರಾಂತಿಜನ್ಯವಾದದಿಂದ ತಮ್ಮ ನಿಷ್ಕ್ರಿಯತೆಯನ್ನು ಸಮರ್ಥಿಸಿಕೊಳ್ಳುವುದು ಅಪರೂಪವಲ್ಲ (rationalizing the irrational—ಅವೈಚಾರಿಕತೆಗೆ ವೈಚಾರಿಕತಾರೋಪಣ). ಅವರ ವಾದಸರಣಿ ಹೀಗಿರುತ್ತದೆ, "ಪುಟ್ಟಪ್ಪನವರ ಪ್ರತಿಭೆ ಜನ್ಮತಃ ಪ್ರಾಪ್ತವಾದದ್ದು, ವಾಲ್ಮೀಕಿಯ ಹಾಗೆ. ಅವರು ಹಾಡಿದ್ದು ಪದ್ಯವಾಯಿತು, ಬರೆದದ್ದು ಗದ್ಯವಾಯಿತು. ಎರಡೂ ಮಾದರಿಗಳಾದುವು. ಆ ಪ್ರತಿಭೆ ಇರದ ನಾವು ಅವರಂತಾಗುವುದು ಸಾಧ್ಯವೇ?" ನಿಜ, ನಾವು ಕುವೆಂಪು ಎತ್ತರ ಏರಲಾರೆವು. ಆದರೆ ಅವರ ಪ್ರಯತ್ನ ? ಅವರು ಎತ್ತರ ಏರಿರುವುದರ ಹಿನ್ನೆಲೆಯ ಸಾಧನೆ ಯಾವ ಮಟ್ಟದ್ದು ಎನ್ನುವುದು 'ನೆನಪಿನ ದೋಣಿಯಲ್ಲಿ' ಓದಿ ಚೆನ್ನಾಗಿ ತಿಳಿಯಬಹುದು, ತಿಳಿದು ಭರವಸೆ ತಳೆಯಬಹುದು. ಹುಟ್ಟಿನಿಂದ ಇತರರಂತೆಯೇ ಸಾಮಾನ್ಯ ಬಾಲಕನಾಗಿದ್ದು, ಶಿಕ್ಷಣದ ಬಗ್ಗೆ ಆಗಲಿ ಭವಿಷ್ಯದ ಬಗ್ಗೆ ಆಗಲಿ ಯಾವ ನಿಶ್ಚಿತ ಧೋರಣೆಯೂ ಪ್ರಕಟಿತವಾಗಿ ಇರದೆ ಬಾಳ ಹೊನಲಿನಲ್ಲಿ ತೇಲುತ್ತ ಮುಳುಗುತ್ತ ಮುಂದುವರಿದ ಪುಟ್ಟಪ್ಪನವರು ಹೇಗೆ 'ವಸಂತ ಕಾಲೇ ಸಂಪ್ರಾಪ್ತೇ ಪಿಕಃ ಪಿಕಃ' ಆಗಿ ರೂಪಪರಿವರ್ತನೆ

ಗೊಂಡು (metamorphosis) ಕನ್ನಡದ ಕೋಗಿಲೆ ಆದರು ಎನ್ನುವುದನ್ನು ಇಲ್ಲಿ ಹಂತ ಹಂತವಾಗಿ ಕಾಣುತ್ತೇವೆ. ಕುವೆಂಪು ಕನ್ನಡದ ಮಹಾ ಚೇತನವಾದದ್ದು ಆಕಸ್ಮಿಕತೆಯ ಯಾದೃಚ್ಛಿಕ ಘಾತವಲ್ಲ, ಅನಿವಾರ್ಯತೆಯ ಪಕ್ವ ಫಲ.

'ನೆನಪಿನ ದೋಣಿಯಲ್ಲಿ' ಗ್ರಂಥವನ್ನು ಓದುತ್ತಿರುವಾಗ ಕ್ರಿಯಾಶೀಲ ಕರುಣಾರ್ದ್ರ ಹಾಗೂ ಧೀಮಂತ ವ್ಯಕ್ತಿತ್ವದ ಜೊತೆ ಒದಗುವ ಸಾಹಚರ್ಯದಿಂದ ಮನಸ್ಸು ಪ್ರಫುಲ್ಲ ವಾಗುತ್ತದೆ, ಉದಾತ್ತವಾಗುತ್ತದೆ, ಹೃದಯ ಅಧಿಕ ಸೂಕ್ಷ್ಮ ಸಂವೇದನಶೀಲವಾಗುತ್ತದೆ, ಮೃದುವಾಗುತ್ತದೆ, ಜೀವ ಉತ್ಕರ್ಷಿತವಾಗುತ್ತದೆ, ಉಲ್ಲಸಿತವಾಗುತ್ತದೆ.

ನೇರನಡೆ ನೇರಬಗೆ ನೇರನುಡಿ—ಬದುಕಿನಲಿ
ಏರಲಾಗದ ಶೃಂಗ ಇಳಿಯಲಾಗದ ಕಡಲು
ಹಾರಲಾಗದ ಬೀಸು ಎಲ್ಲಿಹವು ? ನೇಸರನ
ದಾರಿಯಲಿ ಕತ್ತಲೆಗೆ ನೆಲೆಯುಂಟೆ? ಅತ್ರಿಸೂನು

**ನೆನಪಿನ ದೋಣಿಯಲ್ಲಿ ಯಾತ್ರೆ** ಗ್ರಂಥದಿಂದ ಉದ್ಧೃತ
ಸಂಪಾದಕರು : ದೇ. ಜವರೇಗೌಡ
ಶ್ರೀಕುವೆಂಪು ವಿದ್ಯಾವರ್ಧಕ ಟ್ರಸ್ಟ್ (೧೯೮೦)

# ‘ಮಂಕುತಿಮ್ಮನ ಕಗ್ಗ’ದಲ್ಲಿ ವೈಜ್ಞಾನಿಕಾಂಶಗಳು

**ಪೀಠಿಕೆ**

ಕಾರ್ಕಳದ ಶ್ರೀ ಭುವನೇಂದ್ರ ಕಾಲೇಜಿನಲ್ಲಿ “ಕೆ. ದಾಮೋದರ ಕಿಣಿ ಸ್ಮಾರಕೋಪ ನ್ಯಾಸ” ನೀಡಲು ಆಹ್ವಾನಿತನಾಗಿದ್ದೆ (೧೫-೧೧-೧೯೯೪). ಈ ಕಾರ್ಯಕ್ರಮದ ಜೀವನಾಡಿ ಎಂ. ರಾಮಚಂದ್ರ ನನಗೆ ಸೂಚಿಸಿದ್ದ ಹಲವಾರು ಶೀರ್ಷಿಕೆಗಳ ಪೈಕಿ “ಋಷಿವಾಕ್ಯ ವಿಜ್ಞಾನಕಲೆ” ಎಂಬುದು, ಇದರ ಅರ್ಥನಾವೀನ್ಯದಿಂದಲೂ ಅಂಗಸೌಷ್ಠವದಿಂದಲೂ, ನನ್ನನ್ನು ಬಹಳವಾಗಿ ಆಕರ್ಷಿಸಿತು. ಈ ಸೂತ್ರವಾಕ್ಯದ ಪೂರ್ವೋತ್ತರ ಏನೆಂದು ನೇರ ಅವರನ್ನೇ ಕೇಳಬಹುದಿತ್ತು. ಆದರೆ ಪ್ರಯತ್ನಿಸಿ ವಿಫಲನಾದ ತರುವಾಯವೇ ಈ ಸುಲಭ ಮಾರ್ಗಾಶ್ರಯ ಸಾಧುವೆಂದು ಸ್ವಭಾವ ಎಚ್ಚರಿಸಿತು.

ಜ್ಞಾಪಕಶಕ್ತಿ ಎಂದೂ ನನ್ನ ಭದ್ರ ಆಸ್ತಿ ಆಗಿರಲಿಲ್ಲ. ಅದೂ ಪ್ರಾಯ ಅರುವತ್ತರ ಅನಂತರ (ನಾನು ಹುಟ್ಟಿದ್ದು ೧೯೩೬ರಲ್ಲಿ) ಆ ಶಕ್ತಿಯ ಪತನದರ ಅತಿ ತೀವ್ರವಾಗಿತ್ತು. ಚಿಂತನೆ, ಅನ್ವೇಷಣೆ ಸಾಗಿದ್ದುವು—ಇಲ್ಲ, ಅವುಗಳಿಂದ ಸಂಪೀಡಿತನೂ (obsessed ಆಂತರಂಗಿಕ ತುಡಿತ), ವಶೀಕೃತನೂ (possessed ಬಾಹಿರಂಗಿಕ ಹಿಡಿತ) ಆಗಿದ್ದೆ. ಒಂದು ಸವಿಮುಂಜಾನೆ ಹಕ್ಕಿಯ ಇನಿದನಿ ಎದುರಿನ ಚಿಗುರಿನಿಂದ ತೀರ ಆಕಸ್ಮಿಕವಾಗಿ ಹೊಮ್ಮಿದೆ, (ನಗರಗಳಲ್ಲಿ ಈಗೀಗ ಕಾಗೆಗಳೂ ನಷ್ಟವಂಶಿಗಳಾಗುತ್ತಿವೆ.) ಸಿಸೇಮೆ ತೆರೆದಿದೆ!

ಎಲ್ಲೆಲ್ಲು ಬೆಳಕು ಇರಲಾಕ ಅಳುತಿ ನೀಹಾಡಿ
ಒಡಲ ಮರಿ ಮಾಡಿ
ಒಳಹೊರಗು ಬೆಳಕು ನಾನಿರಲು ಯಾಕ ನಿನ ಹಣತಿs
ಬಾರ ನನ ಗೆಣತಿ
ತೆರೆತೆರೀ ನಿನ ಎದಿಕದಾ
ಬಂದಿತ ಹದಾ
ಕೇಳ ಈ ಪದಾ ಕೇಳ ಈ ಪದಾ

ತೆರೆಯಿತು ಬೇಂದ್ರೆಯವರ ಈ ಪದ “ನನ ಎದಿಕದಾ!” ಅಗೋ! ಮಿಂಚಿತು ಸುಪರಿಚಿತ ನಾದ :

ಹೊಸಚಿಗುರು ಹಳೆಬೇರು ಕೂಡಿರಲು ಮರಸೊಬಗು
ಹೊಸಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ
ಋಷಿವಾಕ್ಯದೊಡನೆ ವಿಜ್ಞಾನಕಲೆ ಮೇಳವಿಸೆ
ಜಸವು ಜನಜೀವನಕೆ ಮಂಕುತಿಮ್ಮ

ಆ ಸಾಕ್ಷಾತ್ಕಾರ ವಿದ್ಯುನ್ಮುಹೂರ್ತದಲ್ಲಿ ರಾಮಚಂದ್ರರ “ಹೊಸ ಯುಕ್ತಿ”ಗೆ ಹುಟ್ಟಿನ ಆಕಸ್ಮಿಕತೆಯಿಂದ “ಹಳೆತತ್ತ್ವ”ವಾಗಿರುವ ನಾನು ಮಣಿದೆ, ಬೇಂದ್ರೆಯವರ ಇನ್ನೊಂದು “ಋಷಿವಾಕ್ಯ” ತೀರ ಸಹಜವಾಗಿ ಹೊಳೆದು ಬಿತ್ತಿತು ಮಂದಹಾಸ:

ನಾದಬೇಕು ನಾದ ಬೇಕು
ನಾದಾನ ನಾದಬೇಕು
ನಾದಕ್ಕೆ ಪ್ರತಿನಾದ ಬೇಕು
ನಾದಾನ್ಯನ ಆದ ಮ್ಯಾಲೆ ಯಾಕ ವಾದ ಬೇಕು?

**ಋಷಿವಾಕ್ಯ**

ಋಷಿವಾಕ್ಯ ಎಂದರೆ ಪರಮೋನ್ನತ ಸಿದ್ಧಿ ಐದಿರುವ ಪ್ರತಿಭಾನ್ವಿತನಿಂದ ಸ್ಫುರಣ ಗೊಳ್ಳುವ ಸ್ಫೂರ್ತಿದೀಪ್ತ ಉದ್ಗಾರ, ಪರಂಪರೆಯ ಹೊಸ ಮಿನುಗಿನ ಹೊಳಹು, ಮಾರ್ಗ ದರ್ಶಕ ಸೂಚನೆ, ಅಥವಾ ಮೌಲ್ಯಯುಕ್ತ ನುಡಿ.

ಜೀವಂತ ಜನಾಂಗದ ದೈನಂದಿನ ಜೀವನದಲ್ಲಿ ಕೆನೆಗಟ್ಟುವ ದರ್ಶನಗಳೇ ಮೌಲ್ಯಗಳು:

- ಸತ್ಯಂವದ ಧರ್ಮಂಚರ
- ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
  ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ
  ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ
  ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ
  ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ
- ಸತ್ಯಮೇವ ಜಯತೇ ನಾನೃತಮ್
- ಎತ್ತಣ ಮಾಮರ ಎತ್ತಣ ಕೋಗಿಲೆ
  ಎತ್ತಣಿಂದೆತ್ತ ಸಂಬಂಧವಯ್ಯ ?

ಮೌಲ್ಯಗಳ ಮೊತ್ತ ಸಂಸ್ಕೃತಿ. ಸಭ್ಯರನ್ನು ಸುಸಂಸ್ಕೃತರು ಎನ್ನುತ್ತೇವೆ. ನಡೆ ನುಡಿ ಬಗೆಗಳಲ್ಲಿ ಇವರು ಮೌಲ್ಯಗಳನ್ನು ಬಿಂಬಿಸುತ್ತಾರೆ. ಸಂಸ್ಕೃತಿಯ ಪ್ರವಹನ ಪರಂಪರೆ. ಪರಂಪರೆಯ ವರ್ತಮಾನ ಮುಖ ಸಂಪ್ರದಾಯ ಅಥವಾ ಶಿಷ್ಟಾಚಾರ. ರಾಮಾಯಣ ಕಾಲದ ಭಾರತೀಯ ಸಂಸ್ಕೃತಿಗೆ ಇಂದಿನ ನಾವು ಉತ್ತರಾಧಿಕಾರಿಗಳಾಗಿರುವುದು ಪರಂ ಪರೆಯ ಕಾರಣವಾಗಿ. ಆದರೆ ಇಂದಿನ ಸಂಪ್ರದಾಯ ಬೇರೆ; ಅಂದಿನದು ಬೇರೆ. ಗಂಗೋತ್ರಿಯಲ್ಲಿಯೂ ಗಯಾದಲ್ಲಿಯೂ ಗಂಗಾನದಿ ಒಂದೇ, ಆದರೆ ಗಂಗಾಜಲ ಮಾತ್ರ ಬೇರೆ.

**ಮೌಲ್ಯಯುಕ್ತ ನುಡಿ ಅಥವಾ ಬಾಳ್ವೆಗೆ ನಿದರ್ಶನಗಳು**

- ಮೈಥುನಕ್ರಿಯೆಯಲ್ಲಿ ನಿರತವಾಗಿ ಹೊರಪರಿವೆ ಮರೆತಿದ್ದ ಹಕ್ಕಿ ಜೋಡಿಯ ಪೈಕಿ ಒಂದಕ್ಕೆ ಬೇಡನ ಕ್ರೂರ ಬಾಣ ಕುಟುಕಿ ತತ್ಪೂರ್ವದ ಮಧುರಾನಂದ ಕರುಣಾ ಕ್ರಂದನವಾಗಿ ಪ್ರವಹಿಸುತ್ತದೆ. ಈ ದೃಷ್ಟಿವಿಚ್ಛಿದ್ರಕ ಮತ್ತು ಹೃದಯವಿದ್ರಾವಕ ದೃಶ್ಯ ವೀಕ್ಷಿಸಿದ ಕಿರಾತನ ಅಂತಃಕರಣ ದುಃಖದಗ್ಧವಾಗಿ ವಿಷಾದ ಶ್ರುತಿಯಲ್ಲಿ ದ್ರವಿಸು ತ್ತದೆ ಆದಿಕಾವ್ಯದ ಪ್ರಥಮ ಪಂಕ್ತಿ :

ಮಾನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ
ಯತ್ಕ್ರೌಂಚ ಮಿಥುನಾದೇಕಮವಧೀಃ ಕಾಮಮೋಹಿತಂ
ವಾಲ್ಮೀಕಿ ರಾಮಾಯಣ

ಮೂಕಶೋಕ ಆ ಕಿರಾತನ ನಮ್ಮ ಮನವನ್ನು ನವ್ಯಕಾವ್ಯಸೃಷ್ಟಿಗೆ ಉತ್ತಾರಣೆಗೊಳಿಸಿದೆ, ಗೇಯ ಶ್ಲೋಕ ದ್ರವಿಸಿದೆ—"ಹರನ ಜಡೆಯಿಂದ ಇಳಿದು" ಬಂದಂತೆ ಗಂಗೆ. ಕಿರಾತಶಿಲೆ ಈಗ ವಾಲ್ಮೀಕಿ ಗೊಮ್ಮಟ. ಈ ಭಾವ ಕುವೆಂಪು ಪ್ರತಿಭಾಮೂಸೆಯಲ್ಲಿ ಮರುಪುಟ್ಟು ಪಡೆದಿರುವ ಪರಿ :

ಮಾಣ್, ನಿಷಾದನೆ ಮಾಣ್ ! ಕೊಲೆ ಸಾಲ್ಗುಮಯ್ಯೊ ಮಾಣ್ !
ನಲಿಯುತಿರೆ ಬಾನ್ ಬನದ ತೊರೆ ಮಲೆಯ ಭುವನ ಕವನಂ
ಸುಖದ ಸಂಗೀತಕೆ ವಿಷಾದಮಂ ಶ್ರುತಿಯೊಡ್ಡಿ
ಕೆಡಿಸುವಯ್?

ಶ್ರೀ ರಾಮಾಯಣ ದರ್ಶನಂ

- ಚಕ್ರವರ್ತಿಗೆ ಅಕ್ಕಸಾಲೆ ತಯಾರಿಸಿಕೊಟ್ಟಿದ್ದ ಸ್ವರ್ಣಕಿರೀಟ ತಾಜಾ ವಸ್ತುವೇ? ಖೋಟಾ ಮಾಲೇ? ಕಿರೀಟಕ್ಕೆ ಗಾಸಿ ಆಗದಂತೆ ಈ ಪ್ರಶ್ನೆಗೆ ಉತ್ತರ ಅರಸುವುದು ಹೇಗೆ? ಈ ಸಮಸ್ಯೆಯಿಂದ ಪೂರ್ಣ ವಶೀಕೃತನಾಗಿದ್ದ ವಿಜ್ಞಾನಿ ಆರ್ಕಿಮಿಡೀಸ್ (ಕ್ರಿ.ಪೂ. ೨೮೭-೨೧೨) ಮೀಯಲೆಂದು ನೀರು ತುಂಬಿದ್ದ ತೊಟ್ಟಿಗೆ ಇಳಿಯುತ್ತಾನೆ. ಆಶ್ಚರ್ಯ! ತಾನು ಹಗುರ ಆದ ಅನುಭವ. ಜೊತೆಗೆ ತೊಟ್ಟಿಯಿಂದ ನೀರು ಹೊರ ತುಳುಕಿದ ನೋಟ! ಆಗ ಮಿಂಚಿದೆ ಸಮಸ್ಯೆಗೆ ಪರಿಹಾರ—ಸಾಪೇಕ್ಷ ಸಾಂದ್ರತೆಯ ತತ್ತ್ವ. ಆ ಗಳಿಗೆ ಆತ ಆತನಲ್ಲ, ಆ ಪರಿಹಾರ ಆತನನ್ನು ಸರ್ವಾಪೋಶಿಸಿದೆ: "ಕಂಡೆನಾ! ಕಂಡೆನಾ!" ಎಂದು ಉದ್ಗರಿಸುತ್ತ ಸ್ನಾನದ ಉಡುಪಿನಲ್ಲಿ ಹೊರಧಾವಿಸಿದ್ದಾನೆ. ಪುರಂದರದಾಸರ ಭಕ್ತಿಪಾರಮ್ಯವಾಣಿ: "ಕಂಡೆನಾ ಕನಸಿನಲಿ ಗೋವಿಂದನ। ಕಂಡೆನಾ ಕನಸಿನಲಿ ಕನಕರತ್ನದ ಖಣಿಯ। ನಂದನ ಕಂದ ಮುಕುಂದನ ಚರಣವ." ಆರ್ಕಿಮಿಡೀಸ್ ಉದ್ಗಾರ ಭೌತವಿಶ್ವವನ್ನು ಆಧ್ಯಾತ್ಮಿಕ ಸ್ತರಕ್ಕೂ ಪುರಂದರವಾಣಿ ಆಧ್ಯಾತ್ಮಿಕಾನುಭವವನ್ನು ಭೌತವಿಶ್ವಕ್ಕೂ ಒಯ್ಯುವ ಸಮಾನಾರ್ಥಕಗಳು. ಎರಡೂ ಉದ್ಭವಿಸಿದುದು ಮಾನವಮತಿ ವಿಶ್ವದ ಜೊತೆ ಅನುವರ್ತಿಸಿದುದರಿಂದ ಎಂಬುದು ಸ್ಪಷ್ಟ.
- ಪಾಶ್ಚಾತ್ಯ ಅಭಿಜಾತ ಸಂಗೀತದಲ್ಲಿ ಲಡ್ವಿಗ್ ವಾನ್ ಬೇತೋವನ್ (೧೭೭೦-೧೮೨೭) ಹಿರಿಹೆಸರು—ಜೀನಿಯಸ್. ಈತನ ಸಾಧನೆ ಸಿದ್ಧಿಗಳು ಪರಮೋಚ್ಚಾಯ ಸ್ಥಿತಿಗೆ ಏರಿದುದು ಬದುಕಿನ ಕೊನೆಯ ಇಪ್ಪತ್ತೇಳು ವರ್ಷಗಳಲ್ಲಿ. ಅನಾರೋಗ್ಯ, ಕಿವುಡುತನ, ಒಂಟಿ ಬಾಳು ಎಲ್ಲ ಬವಣೆಗಳೂ ಅಪಸ್ವರಮೇಳದಂತೆ ಈತನನ್ನು ತೀವ್ರವಾಗಿ ಜರ್ಜರಿಸುತ್ತಿದ್ದಾಗ ಆ ಅನಾಥ ಪ್ರಜ್ಞೆಯಿಂದ, ಭೌತಬಧಿರತ್ವದಿಂದ, ದೈಹಿಕ ಅಸ್ವಾಸ್ಥ್ಯದಿಂದ ಮತ್ತು ಜೀವನವಿದೂರತ್ವದಿಂದ ಪಾರಾಗಲೆಂದೋ ಈತನ ಸೃಜನಶೀಲ ಸಾಮರ್ಥ್ಯ ಗರಿಗೆದರಿ, ವಿಶಾಲಾಕಾಶಗಾಮಿಯಾಗಿ, ಚಿರಂತನ ಮೌಲ್ಯಗಳನ್ನು ದರ್ಶಿಸಿ ಮಹಾಕೃತಿಗಳನ್ನು ರಚಿಸಿತು. ವಿಲಿಯಮ್ ಶೇಕ್ಸ್ಪಿಯರ್

(೧೫೬೪- ೧೬೧೬) ಹೇಗೆ ಮಾನವಮತಿಯ ಪ್ರತಿಯೊಂದು ರಾಗಭಾವವನ್ನೂ ತನ್ನ ನಾಟಕಗಳಲ್ಲಿ ಘನೀಭವಿಸಿ, ಅದರ ಚಿರಂತನ ಮೌಲ್ಯವನ್ನು ಉದಾತ್ತೀಕರಿಸಿರುವನೋ ಹಾಗೆ ಬೇತೋವನ್ ಮಾನವನ ಸಾಹಸಪ್ರಜ್ಞೆಯ ಹಾಗೂ ಕಲ್ಪನಾ ಸಾಮರ್ಥ್ಯದ ಹಿರಿಮೆಯನ್ನು ತನ್ನ ಕೃತಿಗಳಲ್ಲಿ ಸೆರೆಹಿಡಿದು ಅವುಗಳ ಉಜ್ಜ್ವಲ ಮುಖವನ್ನು ವೈಭವೀಕರಿಸಿದ್ದಾನೆ. ಅವನು ಕಾವ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೈ ಆಡಿಸಿ ಅವುಗಳಿಗೆ ಹಿರಿ ಅಂತಸ್ತು ನೀಡಿದರೆ ಇವನು ಸಂಗೀತದ ಎಲ್ಲ ಪ್ರಕಾರಗಳಲ್ಲಿಯೂ ಕೃತಿರಚಿಸಿ ಇವುಗಳಿಗೆ ಘನತೆ ತಂದುಕೊಟ್ಟಿರುವನು. ಇಬ್ಬರದೂ ಮೈದಾಸ್ ಅಥವಾ ಪರುಷ ಸ್ಪರ್ಶ—ಮುಟ್ಟಿದ್ದನ್ನು ಚಿನ್ನವಾಗಿಸುವ ಗುಣ.

- ಕೇಂಬ್ರಿಜ್ ವಿಶ್ವವಿದ್ಯಾಲಯದ ಗಣಿತ ಪ್ರಾಧ್ಯಾಪಕನೊಬ್ಬ ಮ್ಯಾಂಚೆಸ್ಟರಿನಲ್ಲಿದ್ದ ಗಣಿತ ಜೀನಿಯಸ್‌ನಲ್ಲಿಗೆ ಹೋದ. ವೃತ್ತಿಯಿಂದ ಈತ ಖಾಲಿ ಕಾರಕೂನ—ನಮ್ಮ ರಾಮಾನುಜನ್‌ರಂತೆ. ಈ ಪ್ರಾಧ್ಯಾಪಕ ಮಹೋದಯ ಆ ಗಣಿತಗುಮಾಸ್ತನಿಗೆ ಪುಂಖಾನುಪುಂಖವಾಗಿ ಪ್ರಶ್ನೆ ಎಸೆದ. ಜ್ಯಾಮಿತಿಯಿಂದ ಲಘುಗಣಕಗಳವರೆಗೆ, ಮುಂದೆ ಅವಕಲ-ಅನುಕಲ ಕಲನಶಾಸ್ತ್ರಕ್ಕೆ, ಇಲ್ಲಿಂದ ಆಚೆಗೆ ತೀರ ಅಪರಿಚಿತ ಮತ್ತು ಪ್ರಗಲ್ಭ ಪ್ರಶ್ನೆಗಳಿಗೆ ಸ್ವಿಚ್ ಒತ್ತಿದ ಕ್ಷಣವೇ ಬಲ್ಬ್ ಬೆಳಗುವಂತೆ ಉತ್ತರಗಳು ಉದುರಿದುವು. ಕೊನೆಗೆ ಆ ಬಡಪಾಯಿ ಗುಮಾಸ್ತನಿಗೆ ಬೇರೆಯೇ ಒಂದು ಅತಿ ಸಂಕೀರ್ಣ ಪ್ರಶ್ನೆ ಹಾಕಲಾಯಿತು. ಇದನ್ನು ಬಿಡಿಸಲು ವಾರಗಳೇ ಬೇಕಾಗಬಹುದಿತ್ತು. ಆದರೆ ನಮ್ಮ ಕಾರಕೂನ-ಜೀನಿಯಸ್ ಕಾಗದದ ತುಣುಕಿನಲ್ಲಿ ಆ ಗಳಿಗೆ ಉತ್ತರ ಗೀಚಿ ಸಮಸ್ಯೆಯನ್ನು ಫೈಸಲ್ ಮಾಡಿದ. ದಿಗ್ಭ್ರಾಂತ ಪ್ರಾಧ್ಯಾಪಕ ಆ ವಿನೀತ ಗುಮಾಸ್ತನನ್ನು ವಿಚಾರಿಸಿದ : "ನೀನಿದನ್ನು ಹೇಗೆ ಮಾಡಿದೆ? ಇದರ ವಿಧಾನವನ್ನು ನನಗೆ ತೋರಿಸುವೆಯಾ? ಉತ್ತರವೇನೋ ಸರಿ. ಆದರೆ ನಿನ್ನ ಮಾರ್ಗ ಮಾತ್ರ ಸಾಂಪ್ರದಾಯಿಕಕ್ಕಿಂತ ಪೂರ್ತಿ ವಿಭಿನ್ನ!" "ನನ್ನ ಮನದೊಳಗೆ ಇರುವ ಒಂದು ಕ್ರಮವಿಧಿ (programme) ಪ್ರಕಾರ ನಾನು ಈ ಸಮಸ್ಯೆಗೆ ಪರಿಹಾರ ಪಡೆದಿದ್ದೇನೆ. ಆದರೆ ಅದೇನೆಂಬುದನ್ನು ನಾನು ಹೇಳಲಾರೆ. ಏಕೆಂದರೆ ಖುದ್ದು ನಾನೇ ಅದನ್ನು ನೋಡಿಲ್ಲ!" "ಓಹೋ! ನಿನ್ನ ಮನದೊಳಗಿರುವ ಕ್ರಮವಿಧಿ? ಇದರ ಬಗ್ಗೆ ನೀನು ಪ್ರಸ್ತಾವಿಸಿದರೆ ನಾನು ಸೋಲುವುದೇ ಸೈ. ಅಲ್ಲಿ ನಾನು ನಿನ್ನನ್ನು ಅನುಸರಿಸಲಾರೆ."

ವಿಭಿನ್ನ ಕ್ಷೇತ್ರಗಳಿಂದ ಆಯ್ದಿರುವ ಈ ನಾಲ್ಕು ಉದಾಹರಣೆಗಳ ಸಾರವೇನು? ನಿಸರ್ಗದ ಅಸಂಖ್ಯ ಉದ್ದೀಪನೆಗಳಿಗೆ (stimuli) ವ್ಯಕ್ತಿಗಳು ಅಷ್ಟೇ ಬಗೆಗಳಲ್ಲಿ ಅನುಕ್ರಿಯೆಗಳನ್ನು (responses) ವ್ಯಕ್ತಪಡಿಸುತ್ತಾರೆ. ಇವುಗಳ ಪೈಕಿ ಹೆಚ್ಚಿನವು ಭೂಸ್ಥಿತಿಗಿಂತ ಎತ್ತರದ ಮಟ್ಟಕ್ಕೆ ಏರಿರುವುದಿಲ್ಲ—ವಾಸ್ತವ ಪ್ರಪಂಚದ ನಿರಂತರ, ಬಹುತೇಕ ನೀರಸ ಕೂಡ, ವಿದ್ಯಮಾನಗಳಿವು. ಆದರೆ ಇವೇ ಉದ್ದೀಪನೆಗಳು ಯಾರೋ ಒಬ್ಬನ "ಮನದೊಳಗೆ ಇರುವ ಕ್ರಮವಿಧಿ"ಯನ್ನು ಪ್ರಭಾವಿಸಿ ಆತನಿಂದ ಗುಣಾತ್ಮಕವಾಗಿ ಬೇರೆಯೇ ಆಗಿರುವ ಅನುಕ್ರಿಯೆಗಳನ್ನು ಹೊಮ್ಮಿಸುತ್ತವೆ. ಆ ಗಳಿಗೆ ಆತ ಸಾಧಾರಣತ್ವದಿಂದ ಋಷಿತ್ವಕ್ಕೆ ಉತ್ತಾರಣೆಗೊಂಡಿರುತ್ತಾನೆ—ಕಿರಾತ ವಾಲ್ಮೀಕಿ ಆದಂತೆ ಅಥವಾ ಕಾರಕೂನ

ಗಣಿತ ಸ್ಯಮಂತಕಮಣಿ ಆದಂತೆ. ಅಡಿಗರ ನುಡಿಗಳು "ಮಣ್ಣಿನ ಮನದಲಿ ಹೊನ್ನನೆ ಬೆಳೆಯುವ ಅಪೂರ್ವತೇಜದ ಮಾಂತ್ರಿಕರೇ!" ಇದೇ ಭಾವವನ್ನು ಸೂಚಿಸುತ್ತವೆ. ಈ ಮನೋಭೂಮಿಕೆಯಿಂದ ಭಗವದ್ಗೀತೆಯ ಸುಪರಿಚಿತ ಶ್ಲೋಕ ಓದೋಣ :

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್
ಯತ್ಕೃಪಾ ತಮಹಂ ವಂದೇ ಪರಮಾನಂದ ಮಾಧವಮ್

ಅದು ಕರುಣಿಸೆ ಮೂಗ ನುಡಿವನೊ ಕುಂಟ ಬೆಟ್ಟವ ನೆಗೆವನೋ
ಅಂಥ ಪರಮಾನಂದ ಮಾಧವಗೆನ್ನ ಕರಗಳ ಮುಗಿವೆನು

ಅನು—ಪುತಿನ

ಇಲ್ಲಿ "ಯತ್" ಅಥವಾ "ಅದು" ಎಂಬುದು ವ್ಯಕ್ತಿಮನಾಂತರ್ಗತ ವಿಶೇಷ ಪ್ರತಿಭೆಗೆ ಸಂಬಂಧಿಸಿದುದಾಗಿದೆ. ಎಂದೇ ಬಾಹ್ಯ ಉದ್ದೀಪನೆಗಳು ಒಂದೇ ಆಗಿದ್ದರೂ ಎಲ್ಲರೂ ರಸಋಷಿಗಳೋ ಮಹಾವಿಜ್ಞಾನಿಗಳೋ ಉತ್ಕೃಷ್ಟ ಕಲಾವಿದರೋ ಆಗುವುದಿಲ್ಲ.

ಸನ್ನಿವೇಶದ ಸಾರಭೂತಾಂಶವೇ ಋಷಿವಾಕ್ಯ. ಮಳೆಮೋಡದ ಅಡ್ಡ ಥಳುಕುವ ಕೋಲ್ಮಿಂಚಿನ ಬರೆಹದಂತೆ. ಕೆಲವು ಉದಾಹರಣೆಗಳು :

ದೇವಸ್ಯ ಪಶ್ಯ ಕಾವ್ಯಂ ನಮಮಾರ ನಜೀರ್ಯತಿ
ದೇವರ ಕಾವ್ಯ ಓದು, ಅದಕ್ಕೆ ಮರಣವಿಲ್ಲ ಜೀರ್ಣವಿಲ್ಲ

(ಆಕಾಶಚಿತ್ರ ಕುರಿತು ಋಗ್ಸೂಕ್ತಿ)

ನಹಿ ಜ್ಞಾನೇನ ಸದೃಶಂ
ಅರಿವೇ ಬೆಳಕು
ಮಸಿಯನೇಸುಕಾಲ ಬೆಳಗಿದರೆ ಬಿಳಿದಾಗ ಬಲ್ಲುದೇ?
$E = mc^2$, $GMM'/R^2$, $R_s = 2GM/c^2$

ಇವು ನೀತಿ ಉಕ್ತಿಗಳಾಗಿರಬಹುದು, ಗಾದೆ ಮಾತುಗಳಾಗಿರಬಹುದು, ವಿಜ್ಞಾನದ ಸೂತ್ರಗಳೂ ಆಗಿರಬಹುದು. ಸಾರ್ವತ್ರಿಕತೆ ಇವುಗಳ ವೈಶಿಷ್ಟ್ಯ. ಅಂದರೆ ಇವು ವಿವಿಕ್ತ ಸನ್ನಿವೇಶಗಳನ್ನು ಅಡಕ ನುಡಿಗಳಲ್ಲಿ ಹಿಡಿದಿಟ್ಟಿರುವ ರಸಘಟ್ಟಿಗಳೂ ಹೌದು, ಭವಿಷ್ಯ ಸೂಚಕಗಳೂ ಹೌದು. ವಾಸ್ತವತೆ (reality) ಮತ್ತು ಸಿದ್ಧಾಂತ (theory) ಇವನ್ನು ಬೆಸೆಯುವ ವಿಶಿಷ್ಟ ವಾಕ್ಯಗಳಿವು:

"ನಿಗಮನ (deduction) ಹೇಗೆ ಅಂತರ್ಬೋಧೆಯಿಂದ (intuition) ಪೋಷಿಸಲ್ಪಡ ತಕ್ಕದ್ದೋ ಹಾಗೆ ಉತ್ತರೋತ್ತರ ಸಾರ್ವತ್ರೀಕರಣ (progressive generalization) ಮಾಡಬೇಕೆನ್ನುವ ಅಭಿಪ್ರೇರಣೆ ವರ್ಣಮಯ ವಿವರ ಕುರಿತ ಗೌರವ ಪ್ರೀತಿಗಳಿಂದ ಪಾಕಗೊಂಡಿರತಕ್ಕದ್ದು ಮತ್ತು ಸಂತುಲಿತವಾಗಿರತಕ್ಕದ್ದು. ಬಿಡಿ ಸಮಸ್ಯೆಯನ್ನು ಘನ ಸಾರ್ವತ್ರಿಕ ಸಿದ್ಧಾಂತಗಳ ವಿಶೇಷ ನಿದರ್ಶನವೆಂಬ ಕೀಳುದರ್ಜೆಗೆ ಇಳಿಸುವುದು ಸಲ್ಲ. ವಾಸ್ತವವಾಗಿ, ವಿಶಿಷ್ಟವಾದುದರ ಪರಿಗಣನೆಯಿಂದ ಸಾರ್ವತ್ರಿಕ ಸಿದ್ಧಾಂತಗಳು ಉದ್ಭವಿಸುತ್ತವೆ. ಇವು ತಳದಲ್ಲಿರುವ ಇನ್ನಷ್ಟು ಪದಾರ್ಥಗಳನ್ನು ಹೆಕ್ಕಿ ನೇರ್ಪುಗೊಳಿಸಲು ನೆರವಾಗದಿದ್ದರೆ ಅರ್ಥಶೂನ್ಯವೆನಿಸುತ್ತವೆ. ಸಾರ್ವತ್ರಿಕತೆ ಮತ್ತು ವೈಯಕ್ತಿಕತೆ, ನಿಗಮನ

ಮತ್ತು ನಿರ್ಮಾಣ, ತರ್ಕ ಮತ್ತು ಕಲ್ಪನೆ ಇವುಗಳಲ್ಲಿಯ ಅನ್ಯೋನ್ಯ ಪ್ರಭಾವವೇ ಗಣಿತದ [ಓದಿ—ಋಷಿವಾಕ್ಯದ] ಗಹನಸತ್ತ್ವ. ನಿರ್ದಿಷ್ಟ ಸಾಧನೆಯೊಂದರ ತಿರುಳಿನಲ್ಲಿ ಗಣಿತದ ಈ ಮುಖಗಳ ಪೈಕಿ ಒಂದು ಅಥವಾ ಇನ್ನೊಂದು ಇರುವುದು ಸಾಧ್ಯ. ಸುದೀರ್ಘ ವ್ಯಾಪ್ತಿ ಇರುವ ಒಂದು ವಿಕಸನದಲ್ಲಿ ಇವೆಲ್ಲವೂ ಭಾಗಿಗಳಾಗಿರುತ್ತವೆ. ಸಾಮಾನ್ಯವಾಗಿ ಹೇಳುವುದಾದರೆ, ಇಂಥ ಒಂದು ಅಭಿವೃದ್ಧಿ ಅಥವಾ ವಿಕಸನ 'ಮೂರ್ತ' (concrete) ನೆಲದಲ್ಲಿ ಆರಂಭವಾಗಿ ಅಮೂರ್ತೀಕರಣದ (abstraction) ಮೂಲಕ ತಳಭಾರವನ್ನು ತೊಡೆದು ಹಾಕಿ ನೌಕಾಯನ (navigation) ಮತ್ತು ವೀಕ್ಷಣೆ (observation) ಸುಲಭವಾಗಿರುವ ಅಸಾಂದ್ರ ವಾಯುವಲಯದ ಉನ್ನತ ಸ್ತರಗಳಿಗೆ ಉತ್ತಾರಣೆಗೊಂಡಿರುವುದು. ಈ ಆರೋಹಣದ ಬಳಿಕ, ಹೊಸತಾಗಿ ಸರ್ವೇಕ್ಷಿಸಲಾದ ಬಿಡಿ 'ವಾಸ್ತವತೆ'ಯ ನಿಮ್ನ ತಳಗಳಲ್ಲಿಳಿದು, ನಿರ್ದಿಷ್ಟ ಗುರಿಗಳನ್ನು ತಲಪುವ ನಿರ್ಣಾಯಕ ಪರೀಕ್ಷೆ ಎದುರಾಗುವುದು. ಸಂಕ್ಷೇಪವಾಗಿ, ಅಮೂರ್ತ ಸಾರ್ವತ್ರಿಕತೆಯೆಡೆಗಿನ ಆರೋಹಣ ಮೂರ್ತ ಮತ್ತು ವಿಶಿಷ್ಟದಿಂದ ತೊಡಗಿ ಅಲ್ಲಿಗೇ ಮರಳತಕ್ಕದ್ದು" (ರಿಚರ್ಡ್ ಕೂರಂಟ್, ನೋಡಿ ಪುಟ—೧೦೦).

**ಋಷಿವಾಕ್ಯ—ರೂಢಿಯಲ್ಲಿ**

ರೂಢಿಯಲ್ಲಿ 'ಋಷಿವಾಕ್ಯ' ಎಂದರೆ ವೇದೋಪನಿಷತ್ತು, ಬೈಬಲ್, ಕೊರಾನ್ ಮುಂತಾದ ವಿವಿಧ ಜ್ಞಾನಾರ್ಣವಗಳಲ್ಲಿ ಘನಿಸಿರುವ ಜೀವನ ಧರ್ಮ ಅಥವಾ ಜೀವನ ಸತ್ತ್ವ ಎಂಬ ಅರ್ಥ ಉಂಟು.

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೇ
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ

ಈಶಾವಾಸ್ಯ

ಪೂರ್ಣಮದು; ಪೂರ್ಣಮಿದು; ಪೂರ್ಣದಿಂ ಬಂದುದೀ
ಪೂರ್ಣಮಾ ಪೂರ್ಣದಿಂ ಪೂರ್ಣಮಂ ಕಳೆದೊಡಂ
ಪೂರ್ಣಮೆಯೆ ತಾನುಳಿವುದಾ ಪ್ರಜ್ಞೆಗದುವಿದುಂ
ಸರ್ವಮುಂ ಸತ್ಯದಾವಿಷ್ಕಾರ ವಿನ್ಯಾಸಗಳ್

ಶ್ರೀರಾಮಾಯಣ ದರ್ಶನಂ

ಪ್ರಣಿತೆಯೂ ಇದೆ ಬತ್ತಿಯೂ ಇದೆ—
ಜ್ಯೋತಿಯ ಬೆಳಗುವಡೆ, ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ?

ಅಲ್ಲಮ

ಬಾನಾಚೆಯಿಂ ವಿಶ್ವ ಸತ್ತ್ವ ತಾನಿಳಿದಿಳೆಗೆ
ನಾನೆನುವ ಚೇತನದಿ ರೂಪಗೊಂಡಿಹುದೊ?
ನಾನೆನುವ ಕೇಂದ್ರದಿನೆ ಹೊರಟ ಸತ್ತ್ವದ ಪರಿಧಿ
ಬಾನಾಚೆ ಹಬ್ಬಿಹುದೊ? ಮಂಕುತಿಮ್ಮ

ಸಿರಿವಂತರು ಮತ್ತು ಬಡವರು ಎಂದರೆ ಬೀಗವಿಕ್ಕಿರುವ ಎರಡು
ಸಂದೂಕಗಳು, ಒಂದರ ಕೀಲಿ ಇನ್ನೊಂದರೊಳಗೆ

ಕಾರೆನ್ ಬ್ಲಿಕ್ಸನ್

ಅನಂತ ಅನಂತಗಳ ಸಂಕಲನ, ವ್ಯವಕಲನ, ಗುಣಾಕಾರ ಮತ್ತು
ಭಾಗಾಹಾರ ಫಲಗಳು ಪ್ರತಿಯೊಂದೂ ಅನಂತವೇ.

ಗಣಿತ

ಈ ಮೇಲಿನ ಆರು ವಿವಿಕ್ತ ನಿದರ್ಶನಗಳಲ್ಲಿ ವಿಶ್ವಕ್ಕೂ (ಅನಂತ, ಸಮಷ್ಟಿ) ವ್ಯಕ್ತಿಗೂ (ಸಾಂತ, ವ್ಯಷ್ಟಿ) ನಡುವಿನ ಸಂಬಂಧ ಕಾಣಬಹುದು. ಎಂದೇ ಈ ನಿರೂಪಣೆಗಳು ಋಷಿ ವಾಕ್ಯಗಳು. ಸಮಷ್ಟಿ ಎಂಬುದು ವ್ಯಷ್ಟಿಗಳ ಮೊತ್ತ ಮಾತ್ರವೇ ಅಲ್ಲ, ಗುಣಾತ್ಮಕವಾಗಿ ಬೇರೆಯದೂ ಹೌದು; ಅಂತೆಯೇ ವ್ಯಷ್ಟಿ ಎಂಬುದು ಸಮಷ್ಟಿಯ ವಿವಿಕ್ತ ಘಟಕ ಮಾತ್ರವೇ ಅಲ್ಲ, ಗುಣಾತ್ಮಕವಾಗಿ ಕೂಡ ಬೇರೆಯದೇ. ಪ್ರಭೆ ಸಮಷ್ಟಿ—ಅನಂತ; ಪ್ರಣತೆ, ಬತ್ತಿ, ತೈಲ—ವ್ಯಷ್ಟಿಗಳು ಇವು ಅನಂತದ ಘಟಕಗಳು. ಇನ್ನೂ ಒಂದು ನಿದರ್ಶನ: ನೀರಿನ ಘಟಕಗಳು ಹೈಡ್ರೊಜನ್ ಮತ್ತು ಆಕ್ಸಿಜನ್ ಎನ್ನುವ ಅನಿಲಗಳು. ಇವುಗಳಲ್ಲಿ ಪರಸ್ಪರ ಗುಣಾತ್ಮಕ ವ್ಯತ್ಯಾಸ ಎದ್ದು ಕಾಣುತ್ತದೆ.

ಇನ್ನೂ ಕೆಲವು ನಿದರ್ಶನಗಳನ್ನು ಗಮನಿಸಿ :

- ಕಠೋಪನಿಷತ್ತಿನಲ್ಲಿ

ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ
ನಾಶಾಂತ ಮಾನಸೋ ವಾಽಪಿ ಪ್ರಜ್ಞಾನೇನೈವಮಾಪ್ನುಯಾತ್

ದುರಾಚಾರದಿಂದ ಪಾರಾಗದೆ ಇರುವವನು, ಶಾಂತನಲ್ಲದವನು, ಸಮಾಜಹಿತನಲ್ಲದವನು, ಮನಃಶಾಂತಿ ಇಲ್ಲದೆ ಇರುವವನು, ಪ್ರಜ್ಞಾನದಿಂದ ಇವನನ್ನು ಪಡೆಯಲಾರನು (ಅನು-ಸೋಮನಾಥಾನಂದ)

ಇವನು-ಅಥವಾ ಅವನು ಎಂದರೆ 'ಅರಿವು' ಅಥವಾ 'ಜ್ಞಾನ.' ವಿಜ್ಞಾನದ ಪರಿಭಾಷೆಯಲ್ಲಿ ಇದು ಸಮಸ್ಯೆಗೆ 'ಪರಿಹಾರ.' ಇದೊಂದು ಸೂಕ್ತಿ. ಸಾರ್ವತ್ರಿಕ ಸತ್ಯ, ಎಂದೇ ಋಷಿವಾಕ್ಯ.

- ಸಂವಾದೀ ಭಾವವನ್ನು ಅಂಬಿಗರ ಚೌಡಯ್ಯನ ವಚನದಲ್ಲಿ ಗುರುತಿಸಬಹುದು:

ಬ್ರಹ್ಮದ ಮಾತನಾಡಿ ಕನ್ನೆಯ ಕಾಲದೆಸೆಯಲ್ಲಿ ಕುಳಿತಲ್ಲಿ
ಬ್ರಹ್ಮದ ಮಾತು ಅಲ್ಲಿ ನಿಂದಿತ್ತೆಂದ

- ಪುರಂದರದಾಸರು ಇನ್ನಷ್ಟು ಮನತಟ್ಟುವಂತೆ ಈ ಭಾವಕ್ಕೆ ನುಡಿಯೊಡಲು ನೀಡಿದ್ದಾರೆ :

ಕರದಲಿ ಜಪಮಣಿ ಬಾಯಲಿ ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ
ಪರಮ ವೈರಾಗ್ಯಶಾಲಿ ಎಂದೆನಿಸುವುದು
ಉದರ ವೈರಾಗ್ಯವಿದು

ರಾಮವಾತ್ಸಲ್ಯ, ಭರತಭ್ರಾತೃಭಕ್ತಿ, ಹರಿಶ್ಚಂದ್ರಸತ್ಯಸಂಧತೆ, ಅರ್ಜುನಲಕ್ಷ್ಯ, ಕರ್ಣ ಏಕಾಗ್ರತೆ, ಹನುಮಂತನಿಷ್ಠೆ, ಕೃಷ್ಣಕಾರುಣ್ಯ, ನಚಿಕೇತಪ್ರಯತ್ನ, ಭಗೀರಥಸಾಹಸ,

ದ್ರೌಪದೀಆರ್ಜವ ಮುಂತಾದ ಗುಣಗಳು ಬದುಕಿನ ಅವಿಭಾಜ್ಯ ಅಂಗಗಳಾದಾಗ ಪರಿಹಾರರಹಿತ ಸಮಸ್ಯೆಗಳೇ ಇರುವುದಿಲ್ಲ.

ಬುಡಕಟ್ಟು ಮಂದಿಯಲ್ಲಿ ಸ್ವಾರ್ಥ ಮತ್ತು ಇದರ ಪರಿಣಾಮವಾದ ಅರಾಜಕತೆ ತಾಂಡವವಾಡುತ್ತಿದ್ದಾಗ ಸ್ಫುರಿಸಿದ ಋಷಿವಾಕ್ಯ :

> ಕೊಲ್ಲತಕ್ಕದ್ದಲ್ಲ ಹಾದರಗೈಯತಕ್ಕದ್ದಲ್ಲ
> ನೆರೆಯವನ ವಿರುದ್ಧ ಸುಳ್ಳು ಸಾಕ್ಷಿ ಹೇಳತಕ್ಕದ್ದಲ್ಲ
>
> ಬೈಬಲ್

ಆದ್ದರಿಂದ, ಜೀವನಭಾಂಡದಲ್ಲಿ ಬೆಂದು ಪಾಕಗೊಂಡ ಮಹಾವ್ಯಕ್ತಿಗಳ ಪ್ರತಿಭಾ ಪ್ರಸ್ಫುರಣಗಳೇ ಋಷಿವಾಕ್ಯಗಳು, "ಬಾನಾಚೆಯಿಂ ವಿಶ್ವಸತ್ತ್ವ ತಾನಿಳಿದಿಳೆಗೆ ನಾನೆನುವ ಚೇತನದಿ" ಮೈವಡೆದ ಜೀವನ ಸೂತ್ರಗಳು. ದ್ರಷ್ಟಾರ ಮೂಲತಃ ಕವಿಯೂ ಆಗಿದ್ದರೆ ಈ ಚೇತನ ನುಡಿಗಬ್ಬವಾಗಿಯೂ ಕಲಾವಿದ ಆಗಿದ್ದರೆ ಕುಂಚ ಕಾವ್ಯವಾಗಿಯೂ ವಿಜ್ಞಾನಿ ಆಗಿದ್ದರೆ ಭೌತಸೂತ್ರವಾಗಿಯೂ, ಇತ್ಯಾದಿ, ಮೈದಳೆಯುವುದು. ಮಾಧ್ಯಮಗಳು ಬೇರೆ ಬೇರೆ, ಮೂಲದ್ರವ್ಯ ಒಂದೇ.

ಋಷಿಗಳನ್ನು ದೇವಾಂಶಸಂಭೂತರೆಂದೂ ಋಷಿವಾಕ್ಯಗಳನ್ನು ದೇವವಾಣಿಗಳೆಂದೂ ಪರಿಭಾವಿಸುವ ಜನರಿದ್ದಾರೆ. ಸೃಷ್ಟಿಕರ್ತ ಪರಮಾತ್ಮ ತನ್ನ ಸಂದೇಶಗಳನ್ನು ಲೋಕೋದ್ಧಾರಾರ್ಥ ಈ ಮಹಾಮಾನವರ ಮೂಲಕ ಬಿತ್ತರಿಸುವನೆಂಬುದು ಇವರ ಪ್ರಾಮಾಣಿಕ ನಂಬಿಕೆ ಮತ್ತು ಅಚಲ ವಿಶ್ವಾಸ. ಇಂಥವರ ಭಕ್ತಿಯನ್ನಾಗಲೀ ಆರ್ಜವವನ್ನಾಗಲೀ ಪ್ರಶ್ನಿಸದೆ ಇಲ್ಲಿ ಒಂದು ಸಂಗತಿ ಸ್ಪಷ್ಟಪಡಿಸಬೇಕು: ಸೃಷ್ಟಿಕರ್ತ ಬೇರೆ, ಸೃಷ್ಟಿ ಬೇರೆ ಎಂಬ ದ್ವೈತತತ್ತ್ವ ಈ ಜನರ ಚಿಂತನೆಯ ತಳರೂಪಿಕೆ. ಅಲ್ಲದೇ ಇದಕ್ಕೆ ಆನುಷಂಗಿಕವಾಗಿ ಸೃಷ್ಟಿಕರ್ತನ ಅಂತಸ್ತು ಸದಾ ಉಚ್ಚ, ಸೃಷ್ಟಿಯದು ಸದಾ ನೀಚ ಎಂಬ ಮಂದ್ರ ಅನುನಾದವೂ ಉಂಟು. ಎಂದೇ "ದೀನ ನಾನು ಸಮಸ್ತಲೋಕಕೆ ದಾನಿ ನೀನು," ಅಥವಾ "ನಾನು ಪಾಪಿ, ನೀನು ಪಾಪಹರ," "ನಾನು ಅನಾಥ, ನೀನು ರಕ್ಷಕ" ಮುಂತಾದ ಕೀಳರಿಮೆ ಉದ್ಗಾರಗಳು. ಫಲವಾಗಿ ವ್ಯಕ್ತಿಯ ಪ್ರವರ್ತನಶೀಲತೆ ಕುಂಠಿತವಾಗುತ್ತದೆ. "ನನ್ನ ರಕ್ಷಣೆಯ ಹೊಣೆ ದ್ರೌಪದೀ ಮಾನಸಂರಕ್ಷಕನಾಗಿರುವ ನಿನ್ನದಾಗಿರುವಾಗ ನನಗೇಕೆ ಚಿಂತೆ?" ಇಂಥ ನಿಲವುಗಳು ಮೇಲುನೋಟಕ್ಕೆ ಭಕ್ತಿ ಪಾರಮ್ಯಗಳೆಂದೆನ್ನಿಸಿದರೂ ವಸ್ತುತಃ ಉತ್ತರಕುಮಾರತ್ವದ ವಿವಿಧ ಛಾಯೆಗಳು, ಠಾಯಿಗಳು ಕೂಡ. ಈ ತೆರನಾದ ಮಾನಸಿಕ ಪರಿಸರದಲ್ಲಿ ಬೆಳೆಯುವವರಿಗೆ ಋಷಿವಾಕ್ಯ ಬೇರೆ ಅಲ್ಲ, ದೇವವಾಣಿ ಬೇರೆ ಅಲ್ಲ, ಅದೇನಿದ್ದರೂ ತಮಗೆ ಎಂದೂ ಏದಲಾಗದ ಹಿರಿ ಎತ್ತರ ಎಂದು ಅನ್ನಿಸುವುದು ಸಹಜ. ಈ ನೈಚ್ಯ ಭಾವ ಅವರ ಉತ್ಕರ್ಷೆಗೆ ಪ್ರತಿಬಂಧಕ : "ನೀನೇರಿರುವ ಎತ್ತರಕ್ಕೆ ನಾನೇರಬಲ್ಲೆನೇ? ನಿನಗೆ ಶರಣಾಗುವುದೇ ನನಗಿರುವ ಏಕೈಕ ಮಾರ್ಗ!" ಇಂಥ ಮನೋಭಾವದ ವ್ಯಕ್ತಿಗಳು ಅವರಿಗೆ ನಿಸರ್ಗದಿಂದ ದತ್ತವಾಗಿರುವ ಸಾಮರ್ಥ್ಯಕ್ಕೆ ಅನುಗುಣವಾಗಿ ವಿಕಸಿಸಲಾರರು.

ಹೀಗಲ್ಲದೇ ಋಷಿಗಳು ಕೂಡ ಮೂಲತಃ ಮನುಷ್ಯರು, ಸ್ವಪ್ರಯತ್ನದಿಂದ ಪೂರ್ಣ ಮಾನವತ್ವದತ್ತ ವಿಕಸಿಸುತ್ತಿರುವ ಮಹಾಸಾಧಕರು, ಅತಿಮಾನವರಲ್ಲ ಎಂಬ ವಸ್ತುಸ್ಥಿತಿ

ಯನ್ನು ಅರ್ಥವಿಸಿದ್ದಾದರೆ ದೇವವಾಣಿ ಎಂಬ ಪ್ರತ್ಯೇಕ ನುಡಿಯೊಂದಿಲ್ಲ, ಮನುಷ್ಯ ವಾಣಿಯೇ ಆ ಅಂತಸ್ತಿಗೆ ಏರಿ ಋಷಿವಾಕ್ಯ ಆಗುತ್ತದೆಂದು ತಿಳಿಯುತ್ತದೆ:

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ !
ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ!
ಆಚಾರವೇ ಸ್ವರ್ಗ ಅನಾಚಾರವೇ ನರಕ—
ಕೂಡಲ ಸಂಗಮ ದೇವಾ, ನೀವೇ ಪ್ರಮಾಣು
ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ
ಕೇವಲ ಶರಣನಾಗಲರಿಯೆ

ಸಾಧಕರ ಜೀವನದರ್ಶನ ಸಾರವೇ ಋಷಿವಾಕ್ಯ. ಆದ್ದರಿಂದ ವ್ಯಕ್ತಿಗೆ ಉತ್ತಮ ಧ್ಯೇಯ ಸಾಧನೆ ಪ್ರಧಾನ ಲಕ್ಷ್ಯ ಆಗಬೇಕು. ಹಾದಿ ನಡೆದಂತೆ ಕ್ರಮೇಣ ದರ್ಶನ ಸಿದ್ಧಿಸುತ್ತದೆ. ಆಗ ಋಷಿವಾಕ್ಯ ಉದ್ಭವಿಸುತ್ತದೆ. "ವಿಶ್ವಸತ್ಯವನ್ನು ದರ್ಶಿಸುವಾತ ಋಷಿ, ಋಷಿ ಕಂಡು ದನ್ನು ಬೋಧಿಸುವಾತ ಗುರು, ಗುರುಬೋಧನೆಯನ್ನು ಅರಿವಾತ ಶಿಷ್ಯ, ಶಿಷ್ಯ ಋಷಿತ್ವ ಕ್ಕೇರುವುದು ಋಜುವಿದ್ಯೆ" ಎಂಬ ಪ್ರಾಚೀನ ಹೇಳಿಕೆ ಉಂಟು. ಮಾನವ ಸ್ವಪ್ರಯತ್ನದಿಂದ ದೇವತ್ವಕ್ಕೆ ಉತ್ತಾರಣೆಗೊಳ್ಳುವ ಪ್ರಕ್ರಿಯೆ ಇದು. ರಾಮನಾಗಲೀ ಕೃಷ್ಣನಾಗಲೀ ಈ ತೆರನಾಗಿ—ದಿವ್ಯಾದರ್ಶದೀಪ್ತರೂ ಸ್ಫೂರ್ತಿಮಂತಸಾಧಕರೂ ಆಗಿ ಮಾನವತ್ವದಿಂದ ದೇವತ್ವಕ್ಕೆ ಆರೋಹಿಸಿದವರು ಎಂಬ ನೈಜ ಚಿಂತನೆ ಸಾಮಾನ್ಯರ ಜೀವನಕ್ಕೆ ಉಲ್ಲಾಸಪ್ರೇರಕವೂ ಮಾರ್ಗದರ್ಶಕವೂ ಆಗಿರುವುದು. ಬೇಂದ್ರೆ ನುಡಿಗಳಲ್ಲಿ :

ಜೋಲುವುದೇತಕೆ ನೇಣಿಗೆ ಗೆಳೆಯಾ ?
ಏಣಿಗೆ ಇದೆ, ಹಿಡಿ ಅದರೆಳೆಯಾ
ಹಂತಿಗೆ ಹಂತಿಗೆ ಬೇರೆ ಲೋಕವಿದೆ
ಅಲ್ಲಲ್ಲಿಗೆ ನವ ಪಾಕವಿದೆ
ನೂರಿಗೆ ಊರದೆ, ಸಾವಿರಕೇರದೆ
ಅಲಕ್ಷವಿರುವುದು ಯಾವ ಎದೆ?

**ವಿಜ್ಞಾನ ಕಲೆ**

ನವಜಾತ ಕಲೆಗೆ (modern art) ಮೀಸಲಾಗಿದ್ದ ಜರ್ಮನ್ ನಿಯತಕಾಲಿಕೆಯೊಂದರ ಸಂಪಾದಕ ೧೯೨೧ ಜನವರಿ ೨೧ರಂದು (ಆಗ ಬರ್ಲಿನ್‌ನಲ್ಲಿದ್ದ) ಐನ್‌ಸ್ಟೈನ್‌ರಿಗೆ ಪತ್ರ ಬರೆದು, ಯಾವುದೇ ದತ್ತಯುಗಕ್ಕೆ ಸೇರಿದ ಕಲಾಭಿವರ್ಧನೆಗಳಿಗೂ ವೈಜ್ಞಾನಿಕ ಫಲಿತಾಂಶ ಗಳಿಗೂ ನಡುವೆ ನಿಕಟ ಸಂಬಂಧ ಇದೆ ಎಂಬುದು ತನಗೆ ಖಚಿತವಾಗಿ ಮನವರಿಕೆ ಆಗಿದೆಯೆಂದು ತಿಳಿಸಿದ. ಈ ವಿಷಯ ಕುರಿತು ತನ್ನ ನಿಯತಕಾಲಿಕೆಯಲ್ಲಿ ಪ್ರಕಟಿಸ ಲೋಸ್ಕರ ಕೆಲವು ಪರಿಚ್ಛೇದಗಳನ್ನು ಬರೆದುಕೊಡಬೇಕೆಂದು ಅವರಿಗೆ ಪ್ರಾರ್ಥನೆ ಸಲ್ಲಿಸಿದ. ಐನ್‌ಸ್ಟೈನ್ (೧೯೨೧ ಜನವರಿ ೨೭ರಂದು) ಈ ಮುಂದಿನಂತೆ ಬರೆದರು :

"ನೀವು ಸೂಚಿಸಿರುವ ವಿಷಯ ಕುರಿತು ಬರೆಯಲು ಸ್ವಂತವಾದದ್ದು ನನ್ನಲ್ಲಿ ಏನೊಂದೂ ಇಲ್ಲ. ಇನ್ನು ಪ್ರಕಟಣಾರ್ಹವಾದದ್ದು ಯಾವುದೂ ಇಲ್ಲವೆಂಬುದು ಸ್ಪಷ್ಟ

ವಷ್ಟೆ. ಆದರೂ ನನ್ನ ಸದ್ಭಾವನೆಯ ದ್ಯೋತಕವಾಗಿ ಇದರೊಂದಿಗೆ ಲಗತ್ತಿಸಿರುವ ಸೂಕ್ತಿ ರೂಪದ ಹೇಳಿಕೆ ಕಳಿಸುತ್ತಿದ್ದೇನೆ. ನನ್ನ ಶಾಯಿ ಕುಂಚಿಸಬಲ್ಲುದಾಗಿದ್ದರೆ ನಿಮ್ಮ ಸ್ನೇಹ ಶೀಲ ಪತ್ರದಲ್ಲಿ ಅಪೇಕ್ಷಿಸಲಾಗಿರುವ ಇಚ್ಛೆಯನ್ನು ಇನ್ನಷ್ಟು ಸಮರ್ಥವಾಗಿ ಈಡೇರಿಸಿ ಪುಷ್ಕಳ ಕೃತಿಯನ್ನೇ ರವಾನಿಸಿರುತ್ತಿದ್ದೆ.

"ಕಲಾತ್ಮಕ ಮತ್ತು ವೈಜ್ಞಾನಿಕ ಅನುಭವಕ್ಕೆ ಸಾಮಾನ್ಯವಾಗಿರುವುದೇನು? ಎಲ್ಲಿ ಪ್ರಪಂಚ ನಮ್ಮ ವೈಯಕ್ತಿಕ ಆಸೆ ಆಕಾಂಕ್ಷೆಗಳ ರಂಗಭೂಮಿಯಾಗುವುದು ಕೈದಾಗು ವುದೋ ಎಲ್ಲಿ ಇದರೆದುರು ಮುಕ್ತ ಜೀವಿಗಳಾಗಿ ಇದನ್ನು ಮೆಚ್ಚುತ್ತ, ಪ್ರಶ್ನಿಸುತ್ತ ಮತ್ತು ವೀಕ್ಷಿಸುತ್ತ ನಿಲ್ಲುವೆವೋ ಅಲ್ಲಿ ಕಲೆಯ ಮತ್ತು ವಿಜ್ಞಾನದ ಪ್ರಪಂಚ ಪ್ರವೇಶಿಸಿರುತ್ತೇವೆ. ನೋಡಿದ್ದನ್ನೂ ಅನುಭವಿಸಿದ್ದನ್ನೂ ತರ್ಕಶಾಸ್ತ್ರದ ಪರಿಭಾಷೆಯಲ್ಲಿ ಚಿತ್ರಿಸಿದ್ದಾದರೆ ಆಗ ವಿಜ್ಞಾನದಲ್ಲಿ ಉದ್ಯುಕ್ತರಾಗಿರುತ್ತೇವೆ. ಜಾಗೃತ ಮನಸ್ಸಿಗೆ ಅಪ್ರವೇಶ್ಯವಾಗುವ ಅಂತ ರ್ಬೋಧೆಯಿಂದ ಅರ್ಥಪೂರ್ಣವಾದವೆಂಬುದಾಗಿ ಪರಿಗಣಿಸಲ್ಪಡುವ ರೂಪಗಳ ಮೂಲಕ ಅದನ್ನು ಸಂವಹನಿಸಿದ್ದಾದರೆ ಆಗ ಕಲೆಯಲ್ಲಿ ಮಗ್ನರಾಗಿರುತ್ತೇವೆ. ವೈಯಕ್ತಿಕ ಕಾಳಜಿ ಮತ್ತು ಸಂಕಲ್ಪಗಳಿಗೆ ಅತೀತವಾದ ಆ ಯಾವುದೋ ಒಂದರ ಬಗೆಗಿನ ಸಪ್ರೇಮ ನಿಷ್ಠೆಯೇ ಇವೆರಡಕ್ಕೂ ಸಾಮಾನ್ಯವಾದದ್ದು." (ನೋಡಿ—*ಐನ್‌ಸ್ಟೈನ್ ಮಾನವೀಯ ಮುಖ*)

ಆದ್ದರಿಂದ ವಿಜ್ಞಾನ ಮತ್ತು ಕಲೆ ಎರಡೂ ಮಾನವಮತಿಯ ಸೃಷ್ಟಿಗಳು: ಎರಡಕ್ಕೂ ಪ್ರೇರಣೆ ಒದಗುವುದು ಒಂದೇ ಮೂಲದಿಂದ—ಅದು ನಿಸರ್ಗ. ಇವುಗಳ ನಡುವಿನ ಸಾದೃಶ್ಯ ವೈದೃಶ್ಯಗಳನ್ನು ಕೂಲಂಕಷವಾಗಿ ಪರಿಶೀಲಿಸುವ ಮೊದಲು ಒಂದು ವಿವರಣೆ ಅಗತ್ಯ: ವಿಜ್ಞಾನ ಎಂದರೇನು?

## ವಿಜ್ಞಾನ, ವೈಜ್ಞಾನಿಕ ವಿಧಾನ

ಮನುಷ್ಯನ 'ಮಿದುಳು' (=ಬುದ್ಧಿ) ನಿಸರ್ಗದ ಜೊತೆ ಕ್ರಿಯೋದ್ಯುಕ್ತವಾಗಿರುವಾಗ ಕುತೂಹಲ, ವೀಕ್ಷಣೆ, ಪ್ರಯೋಗ, ತಾರ್ಕಿಕ ವಿವೇಚನೆ ಮುಂತಾದವು ಸಂಭವಿಸುತ್ತವೆ. ಯಾವುದೇ ನೈಸರ್ಗಿಕ ವಿದ್ಯಮಾನವನ್ನು ಕಾರ್ಯ-ಕಾರಣ ಪಾತಳಿಯಲ್ಲಿ ಅಭ್ಯಸಿಸಿ ತನ್ಮೂ ಲಕ ನಿಸರ್ಗ ಸಂಯಂತ್ರದ ಕ್ರಿಯಾತಂತ್ರ ಅರಿಯುವುದು ವಿಜ್ಞಾನದ ಉದ್ದೇಶ. ಗೋಚರ ವಿದ್ಯಮಾನ ಇಲ್ಲಿ 'ಕಾರ್ಯ.' ಇದರ ಹಿನ್ನೆಲೆಯಲ್ಲಿ ಇದ್ದೇ ತೀರಬೇಕೆಂದು ಭಾವಿಸಲಾಗಿ ರುವ 'ಕಾರಣ'ದ ಅನ್ವೇಷಣೆ ವಿಜ್ಞಾನಿಯ ಗೀಳು. ಏಕೆಂದರೆ ಕಾರಣರಹಿತ ಕಾರ್ಯವಿಲ್ಲ ಎಂಬುದು ಅವನ ದೃಢ ನಂಬಿಕೆ. ಇಂಥ ವ್ಯವಸ್ಥಿತ ಅನ್ವೇಷಣೆಯ ಫಲವಾಗಿ ನಿಸರ್ಗದ ಹಲವಾರು ಮೂಲಭೂತ ನಿಯಮಗಳು ಬೆಳಕಿಗೆ ಬರುತ್ತವೆ: ನ್ಯೂಟನ್ ಪ್ರತಿಪಾದಿಸಿದ ವಿಶ್ವ ಗುರುತ್ವಾಕರ್ಷಣ ನಿಯಮ, ಮೆಂಡಲ್ ಮಂಡಿಸಿದ ಆನುವಂಶಿಕತಾಸೂತ್ರ, ಐನ್‌ಸ್ಟೈನ್ ಸ್ಥಾಪಿಸಿದ ರಾಶಿ-ಶಕ್ತಿ ಸಮಾನತೆ (mass-energy equivalence) ಇತ್ಯಾದಿ. ಇವು ವಿಜ್ಞಾನದ ಪಕ್ವ ಫಲಗಳಿಗೆ ಕೆಲವು ನಿದರ್ಶನಗಳು.

ಗೋಚರ 'ಕಾರ್ಯ'ದಿಂದ ಅಗೋಚರ 'ಕಾರಣ' ಅರಸುವ ದಿಶೆಯಲ್ಲಿ ವಿಜ್ಞಾನ ಸಹಜ ವಾಗಿ ಕಂಡುಕೊಂಡು ತನಗೆ ತಾನೇ ವಿಧಿಸಿಕೊಳ್ಳುವ ಮಾರ್ಗಕ್ಕೆ 'ವೈಜ್ಞಾನಿಕ ವಿಧಾನ'

ಎಂದು ಹೆಸರು. ನಿಸರ್ಗವೇ ಇಲ್ಲಿಯ ವಿಧಾಯಕ : "ನನ್ನ ರಹಸ್ಯ ಅರಿಯುವುದು ನಿನ್ನ ಅಪೇಕ್ಷೆಯೇ? ಹಾಗಾದರೆ ತೊಡು ವೈಜ್ಞಾನಿಕ ವಿಧಾನ ದೀಕ್ಷೆಯನ್ನು" ಎಂದು ನಿಸರ್ಗವೇ ಮಾನವನಿಗೆ ಆದೇಶಿಸುವುದೋ ಎಂಬಂತೆ. ಸೂತ್ರ ರೂಪದಲ್ಲಿ ಹೇಳುವುದಾದರೆ ವೈಜ್ಞಾನಿಕ ವಿಧಾನ ನಾಲ್ಕು ಪಾವಟಿಗೆಗಳ ಒಂದು ಏಣಿ. ಇದರ ಒಂದು ಕೊನೆ ನಿಸರ್ಗದಲ್ಲಿ ನಿಂತಿದೆ, ಇನ್ನೊಂದು ಕೊನೆ ಸಿದ್ಧಾಂತಕ್ಕೆ ಆಂತಿದೆ. ಏಣಿ ಏರುವಾತ ವಿಜ್ಞಾನಿ. ನಿಸರ್ಗದ ಭಾಷ್ಯ ಸಿದ್ಧಾಂತ, ಸಿದ್ಧಾಂತದ ಪ್ರತ್ಯಕ್ಷ ರೂಪ ನಿಸರ್ಗ. ನಿಸರ್ಗವಿಲ್ಲದೇ (ಅಂದರೆ ಮಾನವಮತಿ ಇಲ್ಲದೇ) ಸಿದ್ಧಾಂತವಿಲ್ಲ; ಸಿದ್ಧಾಂತವಿಲ್ಲದಿದ್ದರೂ (ಆಗ ಮಾನವನೇ ಇರುವುದಿಲ್ಲ) ನಿಸರ್ಗವಿರುವುದು. ವೈಜ್ಞಾನಿಕ ವಿಧಾನದ ನಾಲ್ಕು ಪಾವಟಿಗೆಗಳಿವು :

**ಸಮಸ್ಯಾನಿರೂಪಣೆ** : ಇದು ವಿಜ್ಞಾನಿಯ ಅಧ್ಯಯನೋದ್ದೇಶವನ್ನು ಸ್ಪಷ್ಟಪಡಿಸುತ್ತದೆ ಮತ್ತು ಸೀಮಿತಗೊಳಿಸುತ್ತದೆ.

**ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ** : ಉದ್ದೇಶಗಾಮಿಯಾಗಿರಲು ಅವಶ್ಯವಾಗುವ ಪರಿಕರಗಳನ್ನು ಇದು ನಿರ್ಧರಿಸಿ, ಕಲೆಹಾಕಿ ನೇರ್ಪುಗೊಳಿಸುತ್ತದೆ.

**ಊಹಾರೂಪಣೆ ಮತ್ತು ತಪಾಸಣೆ** : ವಿಶ್ಲೇಷಿತ ಮಾಹಿತಿಗಳಿಂದ ಬಟ್ಟಿ ಇಳಿಸಿದ ಸಾರವೇ ಊಹೆ ಅಥವಾ ವಾದ. ಇದನ್ನು ಮೂಲ ಸಮಸ್ಯೆಗೆ ಅನ್ವಯಿಸಿ ಊಹೆಯ ಸಾಚಾತನವನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಹಂತವಿದು.

**ಸಿದ್ಧಾಂತ ಮಂಡನೆ** : ದತ್ತ ಸಮಸ್ಯೆಯ (ಅಥವಾ 'ಕಾರ್ಯ'ದ) ಹಿನ್ನೆಲೆಯಲ್ಲಿರುವ ಪರಿಹಾರ (ಅಥವಾ 'ಕಾರಣ') ಇದು ಎಂಬ ತೀರ್ಮಾನ.

ಸಮಸ್ಯೆಗೆ ಒದಗಿದ ವರ್ತಮಾನ ಪರಿಹಾರವೇ ಸಿದ್ಧಾಂತ. ಶಾಶ್ವತ ಪರಿಹಾರವೆಂಬುದು ಕಾಲ್ಪನಿಕ ಆದರ್ಶ ಮಾತ್ರ. ಏಕೆಂದರೆ ದೇಶ ಕಾಲಗಳಲ್ಲಿ ವಿಶ್ವದ ಅನಂತಾಲ್ಪಾಂಶವಾಗಿರುವ ಮಾನವ ಅದರ ಅಗಾಧತೆಯನ್ನು ಎಂದೂ ಗ್ರಹಿಸಲಾರ ಅಥವಾ ನಿರ್ವಹಿಸಲಾರ.

ಸಂದೇಹವೀಕ್ಷೃತಿಯೊಳಿನ್ನಿಲ್ಲವೆಂದಲ್ಲ
ಇಂದು ನಂಬಿಹುದೆ ಮುಂದೆಂದುಮೆಂದಲ್ಲ
ಕುಂದು ತೋರ್ದಂದದನು ತಿದ್ದಿಕೊಳೆ ಮನಸುಂಟು
ಇಂದಿಗೀ ಮತವುಚಿತ ಮಂಕುತಿಮ್ಮ

ವಿಜ್ಞಾನದ ಅನಿವಾರ್ಯ ಆವಶ್ಯಕತೆಯಾಗಿ ಈ ವಿಧಾನ ಮೈದಳೆದಿದೆ. ನಿಜ. ಇಂತಿದ್ದರೂ ಇದು ಬದುಕಿನ ಎಲ್ಲ ತೊಡಕುಗಳಿಗೂ ಅನ್ವಯಶೀಲವಾಗಬಲ್ಲ ಒಂದು ಸಮರ್ಥ ಉಪಕರಣ ಎಂಬುದು ಗಮನಾರ್ಹ. ಅಷ್ಟು ಮಾತ್ರ. ಇದೇ ವಿಜ್ಞಾನ ಅಥವಾ ಸಿದ್ಧಾಂತ ಅಲ್ಲ. ಇದು ನುರಿತ ಶಸ್ತ್ರ ವೈದ್ಯನ ಕುಶಲ ಕರಗಳಲ್ಲಿಯ ಬಾಳು ಆಗಿ ರೋಗಿಗೆ ನವಜೀವನ ದಾಯಕ ಸಂಜೀವಿನೀ ಆಗಬಹುದು, ಕ್ರೂರ ಕಟುಕನ ಕಠೋರ ಕರಗಳಲ್ಲಿಯ ಕರವಾಲವಾಗಿ ನಿರಪರಾಧಿಗಳ ಗೋಣುಕತ್ತರಿಸುವ ಅಂತಕದೂತವೂ ಆಗಬಹುದು. ಉಪಕರಣವಲ್ಲ, ಅದರ ಹಿನ್ನೆಲೆಯಲ್ಲಿರುವ ಮನಸ್ಸು, ಸಂಕಲ್ಪ ಅಥವಾ ಉದ್ದೇಶ ಮುಖ್ಯವೆಂಬುದು ಇಂಗಿತ.

ಸಮಸ್ಯೆ ಯಾವುದೇ ಇರಲಿ—ಕಲೆ, ವಿಜ್ಞಾನ ಅಥವಾ ಜೀವನ—ವ್ಯಕ್ತಿ ಅದರ ಪರಿಹಾರಾನ್ವೇಷಣೆಯಲ್ಲಿ ಪೂರ್ಣ ಮಗ್ನನಾಗಿರುವಾಗ ಆತನ ಮನಸ್ಸಿಗೆ ಒಂದು ಹದ, ಸ್ಥಿತಿ ಅಥವಾ

ಪಾಕ ಒದಗುತ್ತದೆ. ಆ ಸ್ಥಿತಿಯಲ್ಲಿ ನಾನುತನಕ್ಕೆ ಇನಿತೂ ಅವಕಾಶವಿಲ್ಲ, ನಾನು (ವ್ಯಕ್ತಿ) ನಿಮಿತ್ತ ಮಾತ್ರ, ನೀನೇ (ಸಮಸ್ಯೆ) ಸರ್ವಸ್ವ, ನಾನು ನಿನ್ನೊಳಗೆ ಐಕ್ಯ ಆದಂಥ ತುರೀಯಾವಸ್ಥೆ. ಮನಸ್ಸಿನ ಈ ಹದಕ್ಕೆ 'ವೈಜ್ಞಾನಿಕ ಮನೋಧರ್ಮ' ಎಂದು ಹೆಸರು. ತತ್ತ್ವಶಾಸ್ತ್ರಮಾರ್ಗವಾಗಿ ಗಮಿಸಿದರೆ ಈ ಸ್ಥಿತಿ 'ಸ್ಥಿತಪ್ರಜ್ಞತ್ವ.' ಸ್ಥಿತಪ್ರಜ್ಞನ ಲಕ್ಷಣಗಳನ್ನು ಶ್ರೀಮದ್ಭಗವದ್ಗೀತೆಯಲ್ಲಿ ವಿವರಿಸಿದೆ (ಸೋಮನಾಥಾನಂದರ 'ಗೀತಾಭಾವಧಾರೆ' ಯಿಂದ ಉದ್ಧೃತ):

ಸ್ಥಿತಪ್ರಜ್ಞಸ್ಯಕಾಭಾಷಾ ಸಮಾಧಿಸ್ಥಸ್ಯ ಕೇಶವ
ಸ್ಥಿತ ಧೀಃ ಕಿಂಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್

"ಕೇಶವ! ಸಮಾಧಿಯಲ್ಲಿರುವ ಸ್ಥಿತಪ್ರಜ್ಞನ ಲಕ್ಷಣಗಳೇನು? ಅವನು ಹೇಗೆ ಮಾತಾಡುತ್ತಾನೆ? ಹೇಗೆ ಕುಳಿತುಕೊಳ್ಳುತ್ತಾನೆ? ಹೇಗೆ ನಡೆದುಕೊಳ್ಳುತ್ತಾನೆ?"

ಪ್ರಜಹಾತಿಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್
ಆತ್ಮನ್ಯೇವಾತ್ಮನಾತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ
ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ
ವೀತರಾಗಭಯ ಕ್ರೋಧಃ ಸ್ಥಿತಧೀರ್ಮುನಿರುಚ್ಯತೇ
ಯಃ ಸರ್ವತ್ರಾ ನಭಿ ಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಮ್
ನಾಭಿ ನಂದತಿ ನದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ

"ಪಾರ್ಥ! ಮನಸ್ಸಿನಲ್ಲಿರುವ ಕಾಮನೆಗಳನ್ನು ಬಿಟ್ಟು, ಯಾವಾಗ ಆತ್ಮನಲ್ಲಿ ಆತ್ಮನಿಂದಲೇ ಸಂತುಷ್ಟನಾಗಿರುವನೋ ಆಗ ಸ್ಥಿತಪ್ರಜ್ಞ ಎನಿಸುತ್ತಾನೆ. ದುಃಖದಲ್ಲಿ ಉದ್ವೇಗಗೊಳ್ಳದವನು, ಸುಖದಲ್ಲಿ ಆಸೆ ಇಲ್ಲದವನು, ರಾಗಭಯಕ್ರೋಧಗಳನ್ನು ಗೆದ್ದವನಾದ ಮುನಿ ಸ್ಥಿತಪ್ರಜ್ಞ, ಯಾರು ಯಾವುದರಲ್ಲಿಯೂ ಆಸಕ್ತಿ ಇಲ್ಲದೆ ಪ್ರಿಯ ಅಪ್ರಿಯ ವಿಷಯಗಳನ್ನು ಪಡೆದಾಗ ಸಂತೋಷಿಸುವುದೂ ಇಲ್ಲವೋ ದ್ವೇಷಿಸುವುದೂ ಇಲ್ಲವೋ ಅವನ ಪ್ರಜ್ಞೆ ಸ್ಥಿರವಾಗಿರುವುದು."

ಪುರಂದರದಾಸರು ಸ್ಥಿತಪ್ರಜ್ಞನ (=ವೈಜ್ಞಾನಿಕ ಮನೋಧರ್ಮಯುತನ) ಲಕ್ಷಣ ವರ್ಣಿಸಿದ್ದಾರೆ:

ಇರಬೇಕು ಇರದಿರಬೇಕು ಸಂ
ಸಾರದಿ ಜನಕಾದಿ ಋಷಿಗಳಂತೆ
ಮಿಥಿಲಾ ಪಟ್ಟಣವು ದಹಿಸಿತೆಂಬುದ ಕೇಳಿ
ಮಿಥಿಲೇಶ "ಮಮ ಕಿಂಚಿನ್ನದಹ್ಯತೇ" ಎಂಬಂತೆ ಇರಬೇಕು
ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು
ಮಧುವೈರಿ ವೈಕುಂಠ ಪುರವಿತ್ತ ತೆರದಂತೆ ಇರಬೇಕು

ಅಲ್ಲಮನ ಈ ಮುಂದಿನ ವಚನ ಸ್ಥಿತಪ್ರಜ್ಞತ್ವದ ಬಗ್ಗೆ ಹಲವು ಹನ್ನೊಂದು ಸ್ತರಗಳಲ್ಲಿ ವಿವಿಧ ಅರ್ಥಗಳನ್ನು ಧ್ವನಿಸುತ್ತದೆ:

ಹುಲಿಯ ಬೆನ್ನಲ್ಲಿ ಒಂದು ಹುಲ್ಲೆಹೋಗಿ
ಮೇದು ಬಂದೆನೆಂದರೆ ಅದ ಕಂಡು ಬೆರಗಾದೆ !

ರಕ್ಕಸಿಯ ಮನೆಗೆ ಹೋಗಿ
ನಿದ್ದೆಗೆಯ್ದು ಬಂದೆನೆಂದರೆ ಅದ ಕಂಡು ಬೆರಗಾದೆ!
ಜವನ ಮನೆಗೆ ಹೋಗಿ
ಸಾಯದೆ ಬಂದೆನೆಂದರೆ ಅದ ಕಂಡು ಬೆರಗಾದೆ !

**ಅಂತರ್ಬೋಧೆ ಅಥವಾ ಪ್ರತಿಭಾನ**

ವಿಜ್ಞಾನ ಮತ್ತು ಕಲೆ ಎರಡರ ಮೂಲವೂ ನಿಸರ್ಗ. ಮಾನವನ ಪ್ರಖರ ಚಿಂತನ ಮತ್ತು ಸೃಜನಶೀಲ ಮತಿ ನಿಸರ್ಗದ ಜೊತೆ ವರ್ತಿಸಿದಾಗ, ಆಯಾ ಕ್ರಿಯೆಯ ಪರಿ ಅವಲಂಬಿಸಿ ವಿಜ್ಞಾನದ ಅಥವಾ ಕಲೆಯ ಧಮನಿ ಸೆಲೆಯೊಡೆಯುತ್ತದೆ. ಉಭಯ ಸನ್ನಿವೇಶಗಳಲ್ಲಿಯೂ ಅಂತರ್ಬೋಧೆಯ ಪಾತ್ರ ಮಹತ್ತ್ವಪೂರ್ಣವಾದದ್ದು. ಅಂತರ್ಬೋಧೆ ಅಥವಾ ಪ್ರತಿಭಾನ (intuition) ಎಂದರೆ, ಅಪ್ರಯತ್ನಿತವಾಗಿಯೋ ಎಂಬಂತೆ, ಹಠಾತ್ತನೆ ಸಂಭವಿಸುವ ಸತ್ಯದರ್ಶನ, ವಿದ್ಯುದಾಲಿಂಗನ. ಇದರಲ್ಲಿ ತರ್ಕಕ್ಕೆ ಎದ್ದು ಕಾಣುವಂಥ ಪಾತ್ರ ಏನೂ ಇಲ್ಲ. ವೈಜ್ಞಾನಿಕ ವಿಧಾನದಲ್ಲಿ ವಿಶ್ಲೇಷಿತ ಮಾಹಿತಿಯಿಂದ ಊಹೆ ಅಥವಾ ವಾದವನ್ನು ಆಸವಿಸುವಾಗ, ಶಿಲ್ಪದಲ್ಲಿ ಚಾಣದ ಒಂದು ವಿಶಿಷ್ಟ ಚಳಕದಿಂದ ವಿಗ್ರಹಕ್ಕೆ ಜೀವ ಆವಾಹಿಸುವಾಗ, ಅಥವಾ ಕಾವ್ಯದಲ್ಲಿ ನಿರ್ದಿಷ್ಟ ಪದ ಪ್ರಯೋಗದಿಂದ ಭವಿಷ್ಯವನ್ನೇ ಮಾರ್ಪಡಿಸುವಾಗ (ಅಶ್ವತ್ಥಾಮೋ ಹತಃ ಕುಂಜರಃ) ಅಂತರ್ಬೋಧೆ ಮುಂಚೂಣಿಯಲ್ಲಿರುತ್ತದೆ.

ಕುಂಚಕಲಾವಿದ ವಿ. ಎಂ. ಶೋಲಾಪುರ್ಕರರಿಗೆ ಅಭಿಮಾನಿಗಳು poet of the wood ಎಂಬ ಪ್ರೀತಿಯ ಬಿರುದು ನೀಡಿದ್ದಾರೆ : ವೃಕ್ಷಕವಿ ಅಥವಾ ದಾರುಕವಿ. ಅಷ್ಟಾವಕ್ರಾಕೃತಿಯ, ಹೆಚ್ಚಿನವರಿಂದ ಉಪೇಕ್ಷಿತವಾದ, ಮರದ ಚೌಬೀನೆ ಇವರ ಲಕ್ಷ್ಯ ಸೆಳೆಯುತ್ತದೆ: ಇದರ ಒಳಗೆ ಮಿಡಿಯುತ್ತಿರುವ ನಿಸರ್ಗಶಿಲ್ಪಿಯ "ಕಾವ್ಯ" ಇವರ ಕಿವಿಗಳಿಗೆ ಕೇಳಿಸುವುದೋ ಎಂಬಂತೆ, ಹೃದಯತಜ್ಞನಿಗೆ ನಾಡಿಮಿಡಿತ ರೋಗಿಯ ಆರೋಗ್ಯದರ್ಶನ ಮಾಡಿಸುವುದಿಲ್ಲವೇ, ಹಾಗೆ, ಶೋಲಾಪುರ್ಕರ್ ಪೂರ್ಣ ಭರವಸೆಯಿಂದ ನುಡಿಯುತ್ತಾರೆ: "ನೀವು ಮಾಡಬೇಕಾದ್ದಿಷ್ಟೆ—ಕಲೆಯನ್ನು ಕವಿದಿರುವ ಅ-ಕಲೆಯ ತೊಗಟೆಯನ್ನು ತರಿದೊಗೆದುಬಿಡಿ, ನಿಸರ್ಗದ ಇನ್ನೂ ಒಂದು ನವಸ್ವನಕ್ಕೆ ಕಿವಿಯನ್ನು ಶ್ರುತಿಗೊಳಿಸಿ!" ಶಿಲೆಯಲ್ಲಿ ಗೊಮ್ಮಟನನ್ನು ಗುರುತಿಸುವ, ಮರದಲ್ಲಿ ಕಸೂತಿಯನ್ನು ಕಾಣುವ, ಅಂತೆಯೇ ಮಾಹಿತಿಗಳ ಗೋಜಲಿನಲ್ಲಿ ನಿಸರ್ಗದ ಸೂತ್ರವನ್ನು ಹೆಕ್ಕುವ ದಿವ್ಯ ದೃಷ್ಟಿಯೇ ಅಂತರ್ಬೋಧೆ. ಇದರ ಹಠಾತ್ ಉತ್ಸರ್ಜನೆಗೆ ಕಾರಣವಾಗುವ ವ್ಯಾಧಾಸ್ತ್ರ ಪ್ರಯೋಗ ಯಾವುದು? ಅದು ನಿಸರ್ಗವೇ ಎಂಬುದು ಸಂದೇಹಾತೀತ ತಥ್ಯ. ಹಾಗಾದರೆ ಎಲ್ಲರೂ ಏಕೆ ವಾಲ್ಮೀಕಿ ಆಗುವುದಿಲ್ಲ? ಆರ್ಕಿಮಿಡೀಸ್ ಎತ್ತರ ಏರುವುದಿಲ್ಲ?

ವರ್ನರ್ ಹೈಸನ್‌ಬರ್ಗ್ (೧೯೦೧-೭೬) ಆಧುನಿಕ, ಅಂದರೆ ೨೦ನೆಯ ಶತಮಾನದ ಅಥವಾ ನ್ಯೂಟನ್-ಉತ್ತರಕಾಲೀನ, ಭೌತವಿಜ್ಞಾನದಲ್ಲಿ ಒಬ್ಬ ಶಕಪುರುಷ, ಅನಿಶ್ಚಿತ ತಾತತ್ತ್ವದ (Uncertainty principle) ಮಂಡನಕಾರ—ಆಧುನಿಕ ಭೌತವಿಜ್ಞಾನದಲ್ಲಿ ಅನಿಶ್ಚಿತತಾತತ್ತ್ವ ಒಂದು ಖಚಿತ ನಿರ್ಣಾಯಕ ಉಕ್ತಿ, ಕೆಪ್ಲರ್ ಆವಿಷ್ಕರಿಸಿದ ಗ್ರಹ ಚಲನ

ನಿಯಮಗಳಂತೆ—ಮತ್ತು ನೊಬೆಲ್ ಪ್ರಶಸ್ತಿಪುರಸ್ಕೃತ. ಇವರು ತಮಗೆ ಅನಿಶ್ಚಿತತಾ ತತ್ತ್ವದ ಹೊಳಹು ಹೇಗೆ ಮಿನುಗಿತು ಎಂಬುದಕ್ಕೆ ಒಂದು ವಿವರಣೆ ನೀಡಿದ್ದಾರೆ. ೧೯೨೫ ಮೇ ತಿಂಗಳ ಕೊನೆಯ ಪಾದ. ಪರಾಗಜ್ವರ (hay fever) ಪೀಡಿತ ಹೈಸನ್‌ಬರ್ಗ್ ಸ್ವಸ್ಥಳದಿಂದ—ಅಂದರೆ ಹೂ, ಹುಲ್ಲು, ಧೂಳು, ಪರಾಗ ಮುಂತಾದ ಜ್ವರಕಾರಕ ಕಲ್ಮಷಗಳಿದ್ದ ಪ್ರದೇಶದಿಂದ—ದೂರದ ಕಡಲ ಕಿನಾರೆಗೆ ವಿಶ್ರಾಂತಿ ಪಡೆಯುವ ಸಲುವಾಗಿ ತೆರಳಿದರು. ಅಲ್ಲಿ, ಕಲ್ಮಷವಿದೂರ ಕಡಲತಡಿಯಲ್ಲಿ, ನಿಸರ್ಗದ ಮಡಿಲಲ್ಲಿ ಚೇತರಿಸಿಕೊಳ್ಳುತ್ತಿದ್ದಾಗ ಅವರಿಗಾಯಿತೊಂದು ವಿನೂತನ ದರ್ಶನ. ಹೈಸನ್‌ಬರ್ಗ್ ಉವಾಚ :

"[ನಾನು ಸಾಗಿದ ಪಥದಲ್ಲಿ ದೊರೆತ] ಮೊದಲ ಪದಗಳು ಶಕ್ತಿತತ್ತ್ವದೊಂದಿಗೆ ಸಮರ್ಪಕವಾಗಿ ಹೊಂದಿಕೊಂಡಿರುವಂತೆ ಭಾಸವಾದುವು [ಅಂದರೆ ಗಣಿತಗಣನೆಗಳು ವಾಸ್ತವತೆಯನ್ನು ಯಥಾವತ್ತಾಗಿ ಪ್ರತಿಬಿಂಬಿಸುವುವೆಂಬ ಅನುಭವ.] ನಾನು ಉನ್ಮಾದಾವಸ್ಥೆ ತಲಪಿದೆ. ಫಲವಾಗಿ ಅಂಕೆ ಸಂಖ್ಯೆಗಳ ಬಿಡಿ ಎಣಿಕೆಗಳಲ್ಲಿ ಅಸಂಖ್ಯ ದೋಷಗಳು ನುಸುಳಿದುವು. ಇವನ್ನೆಲ್ಲ ಸಾವಧಾನವಾಗಿ ನಿವಾರಿಸಿ ಸ್ಫುಟಗಣನೆಗಳ ಕೊನೆ ತಲಪಿದಾಗ—ಅಥವಾ ಅದೇ ನನ್ನೆದುರು ಅನಾವರಣಗೊಂಡಾಗ—ಮುಂಜಾನೆ ಗಂಟೆ ೩ ಆಗಿತ್ತು. ಶಕ್ತಿತತ್ತ್ವವು ಸಕಲ ಪದಗಳಿಗೂ ಸಮರ್ಪಕವಾಗಿ ಎರಕಗೊಂಡಿತ್ತು. ಎಂದೇ ನನ್ನ ಗಣನೆಗಳು ಮುನ್ನಡೆಸಿದ ಆ ಶಕಲ ಬಲವಿಜ್ಞಾನಪ್ರಕಾರದಲ್ಲಿ ಕಂಡ ಗಣಿತೀಯ ಸುಸಾಂಗತ್ಯ ಮತ್ತು ಸುಸಂಬದ್ಧತೆಯಿಂದ ಗಾಬರಿಗೊಂಡೆ. ಪರಮಾಣವಿಕ ವಿದ್ಯಮಾನಗಳ ಮೂಲಕ ನಾನು ವಿಚಿತ್ರವೂ ಸುಂದರವೂ ಆದ ಆಂತರ್ಯವನ್ನು ಸಮೀಕ್ಷಿಸುತ್ತಿರುವೆನೆಂಬ ಭಾವನೆ ಸುಳಿಯಿತು. ನಿಸರ್ಗ ನನ್ನ ಎದುರು ಇಷ್ಟೊಂದು ಸಮೃದ್ಧವಾಗಿ ಬಿತ್ತರಿಸಿದ ಗಣಿತೀಯ ಸಂರಚನೆಯ ಸಂಪತ್ತನ್ನು ಶೋಧಿಸಬೇಕೆಂಬ ಯೋಚನೆಯೇ ನನಗೆ ಬವಳಿ ಬರುವಂತೆ ಮಾಡಿತು. ನಿದ್ರಿಸಲಾಗದಷ್ಟು ಉದ್ರಿಕ್ತನಾಗಿದ್ದೆ. ಅಲ್ಲಿ ಕಡಲಿನೆಡೆಗೆ ಚಾಚಿಕೊಂಡಿದ್ದ ಕಲ್ಲ ಬಂಡೆ ಏರಬೇಕೆಂಬುದು ನನ್ನ ಬಲುದಿನಗಳ ಬಯಕೆ. ಈಗ ಅದನ್ನು ಯಾವ ತೊಂದರೆಯೂ ಇಲ್ಲದೆ ಈಡೇರಿಸಿದೆ, ಮತ್ತು ಸೂರ್ಯೋದಯವನ್ನು ಪ್ರತೀಕ್ಷಿಸುತ್ತ ನಿಂತೆ."

ಬಂಡೆ ಮಂಡೆ ಏರಿದಾಗ ಅವರು ಕಂಡ ಬಾನಕೆಂಡವೇ ಅನಿಶ್ಚಿತತಾ ತತ್ತ್ವ. ಆ ಪರ್ವದಿನಗಳಂದು ಹೈಸನ್‌ಬರ್ಗ್ ತಮ್ಮ ಆಪ್ತರಿಗೆ ಬರೆದ ಕಾಗದ ಅವರ ಆ ಮುಹೂರ್ತದ ಮನಃಸ್ಥಿತಿಗೆ ಹಿಡಿದ ಕನ್ನಡಿ:

"ಸಂದ ಕೆಲವು ವಾರಗಳು ನಿಜಕ್ಕೂ ಪರಮ ಉದ್ದೀಪನಕಾರಿಗಳಾಗಿದ್ದುವು. ನಾನು ಏನನ್ನು ಅನುಭವಿಸಿರುವೆ ಎಂಬುದನ್ನು, ಪ್ರಾಯಶಃ, ಒಂದು ಸಾದೃಶ್ಯದ ಮೂಲಕ ಉತ್ಕೃಷ್ಟವಾಗಿ ಚಿತ್ರಿಸಬಲ್ಲೆ. ಕಳೆದ ಐದು ವರ್ಷಗಳಲ್ಲಿ ಸಾಕಷ್ಟು ಪ್ರಯತ್ನ ಪ್ರಯುಕ್ತಿಸಿ, ಪರಮಾಣವಿಕ ಸಿದ್ಧಾಂತದ ಮೂಲಭೂತ ಶೃಂಗವೊಂದಕ್ಕೆ, ಇನ್ನೂ ಅಜ್ಞಾತವಾಗಿರುವ ಆರೋಹಣವನ್ನು ಪ್ರಯತ್ನಿಸಿರುವೆನು. ಮತ್ತೆ ಈಗ ಆ ಶೃಂಗ ನೇರ ಕಣ್ಣ ಮುಂದೆ ನಿಂತಿದ್ದು ಪರಮಾಣವಿಕ ಸಿದ್ಧಾಂತದಲ್ಲಿಯ ಅಂತರಸಂಬಂಧಗಳ ಸಮಗ್ರ ಪ್ರಸ್ಥ ಭೂಮಿಯೇ ಹಠಾತ್ತನೆ ಎದುರಿಗೆ ಪ್ರತ್ಯಕ್ಷವಾಗಿದೆ. ಈ ಅಂತರಸಂಬಂಧಗಳು, ತಮ್ಮ ಸರ್ವಗಣಿತೀಯ ಅಮೂರ್ತೀಕರಣ ಸಹಿತ, ಊಹಾತೀತ ಸರಳತೆಯ ಮಾನಕವನ್ನು

ಪ್ರದರ್ಶಿಸುತ್ತಿರುವುದೊಂದು ಅನರ್ಘ್ಯ ವರ—ತೀರ ವಿನೀತರಾಗಿ ಇದನ್ನು ಸ್ವೀಕರಿಸುವು ದೊಂದೇ ನಾವು ಮಾಡಬೇಕಾದದ್ದು. ಪ್ಲಾಟೋ ಕೂಡ ಇವು ಇಷ್ಟು ಸುಂದರವಾಗಿವೆ ಎಂದು ನಂಬಿರಲಾರ. ಕಾರಣ: ಈ ಅಂತರಸಬಂಧಗಳನ್ನು ಉಪಜ್ಞಿಸಲಾರೆವು, ವಿಶ್ವದ ಆದಿ ದಿನಗಳಿಂದಲೂ ಇವು ಅಲ್ಲಿ ಇದ್ದುವು."

ಗ್ರೀಕ್ ತತ್ತ್ವಶಾಸ್ತ್ರಕೋವಿದ ಪ್ಲಾಟೋ (ಕ್ರಿಪೂ ೪೨೭?—೩೪೭) ಇಂಥ ಸಂದರ್ಭ ವನ್ನು—ಮಾನವಮತಿಯ ಕಾಲ್ಪನಿಕ ನಿರ್ಮಿತಿ ವಿಶ್ವದಲ್ಲಿ ಭೌತಸತ್ಯವಾಗಿ ಎದುರಾಗುವ ವಿರಳ ಸನ್ನಿವೇಶವನ್ನು—ಮುಂಗಂಡಿದ್ದಾನೆ : "ಸುಂದರತೆಯ ಆ ದೃಶ್ಯದಿಂದ ಜೀವ ಗಂಭೀರ ಭೀತಿಗ್ರಸ್ತವಾಗಿ ತಲ್ಲಣಿಸುತ್ತದೆ, ಭಯದಿಂದ ಕಂಪಿಸುತ್ತದೆ. ಏಕೆಂದರೆ, ಇಂದ್ರಿಯಗಳು ಬಹಿರ್ವಲಯದಿಂದ ತನಗೆ ಪ್ರದಾಯಿಸಿರದ, ಆದರೆ ಗಭೀರ ಅಪ್ರಜ್ಞಾ ಪ್ರದೇಶದಲ್ಲಿ ಪೂರ್ವಭಾವಿಯಾಗಿಯೇ ಪ್ರತಿಷ್ಠಾಪನೆಗೊಂಡಿದ್ದು ಸದಾ ಉಪಸ್ಥಿತ ವಿರುವ, ಏನೋ ಒಂದು ತನ್ನೊಳಗೆ ಉತ್ಥಾನಿಸಿದೆ ಎಂಬ ಭಾವ ಜೀವದೊಳಗೆ ಸುಳಿಯು ತ್ತದೆ."

ಕನಕದಾಸರು ಹಾಡಿರುವಂತೆ "ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ ಬಯಲು ಆಲಯವೆರಡು ನಯನದೊಳಗೊ!"

ತೀ. ನಂ. ಶ್ರೀಕಂಠಯ್ಯನವರು (೧೯೦೬-೬೬) "ಭಾರತೀಯ ಕಾವ್ಯ ಮೀಮಾಂಸೆ" ಯಲ್ಲಿ ಬರೆದಿರುವ ನುಡಿಗಳು ಸಾರ್ವಕಾಲಿಕ ಮತ್ತು ಸಾರ್ವದೈಶಿಕವಾಗಿವೆ:

"ಪ್ರತಿಭೆಯೇ ಕಾವ್ಯಜನನಿ. ಅದಿಲ್ಲದಿದ್ದರೆ ಕವಿಗೆ ಲೇಶ ಮಾತ್ರವೂ ವಸ್ತುವೇ ಇಲ್ಲ—'ತಸ್ಮಿಂಸ್ತು ಅಸತಿ ನ ಕಿಂಚಿದಪಿ ಕವೇಃ ವಸ್ತ್ವಸ್ತಿ.' ಪ್ರತಿಭೆಯ ಕಣ್ಣು ತೆರೆದಾಗಲೇ ಕವಿಗೆ 'ದರ್ಶನ' ಲಭಿಸುವುದು, ಸೃಷ್ಟಿ ನಡೆಯುವುದು, ವರ್ಣನ ಸಾಧ್ಯವಾಗುವುದು. ಆದರೆ ಈ ಪ್ರತಿಭಾವ್ಯಾಪಾರಕ್ಕೆ ಮೊದಲಿನಿಂದ ಕೊನೆಯ ತನಕವೂ ನಿಯಾಮಕವಾದ ಮತ್ತೊಂದು ತತ್ತ್ವ ಉಂಟು. ಅದೇ ರಸಾವೇಶ." [ಓದಿ : ಕಾವ್ಯ = ವಿಜ್ಞಾನ, ಕವಿ=ವಿಜ್ಞಾನಿ]

ಮೋಡಗಳ ಸಂಚಯನ (ಓದಿ : ತಪಸ್ಸು) ದೀರ್ಘಕಾಲಿಕ ಮತ್ತು ಅಸಂಖ್ಯ ಪ್ರಭಾವಾ ವಲಂಬಿ ಪ್ರಕ್ರಿಯೆ. ಮಿಂಚಿನ (ಓದಿ : ಪ್ರತಿಭೆ, ಪ್ರತಿಭಾನ) ಛಳುಕೋ? ಶಕ್ತಿಯ ಹಠಾತ್ ಉತ್ಸರ್ಜನೆ. ಅಂತರ್ಬೋಧೆ ಅಥವಾ ಪ್ರತಿಭಾನ ಕುರಿತಂತೆ ಖುದ್ದು ನನ್ನೊಳಗೆ ಮಿಂಚಿದ ಒಂದು ಹೊಳಹನ್ನು ಇಲ್ಲಿ ನಿರೂಪಿಸಿಬಹುದು.

೧೯೭೯ರಲ್ಲಿ ಐನ್‌ಸ್ಟೈನ್ ಜನ್ಮಶತಾಬ್ದಿ. ಆ ಹೊತ್ತಿಗೆ ಪ್ರಕಟಿಸುವ ಸಲುವಾಗಿ ಅವರ ವಿಜ್ಞಾನ ಜೀವನಚರಿತ್ರೆ ಬರೆಯಲು ತೊಡಗಿದೆ, ಕೊನೆಯ ಅಂಕವನ್ನೂ ತಲಪಿದೆ. ಅದು ಅವರ ಮರಣ, ಅಂದರೆ ಯುಗಪುರುಷನ ಅವಸಾನ. ಈ ಕೇವಲ ಭೌತಿಕ ಆದರೆ ಮಹಾ ಮೌಲಿಕ ಘಟನೆಯನ್ನು ನುಡಿಗಳಲ್ಲಿ ಕಡೆಯುವುದು ಹೇಗೆ? ಚಿಂತನೆ, ವಾಚನ, ಪ್ರಯತ್ನ, ವೈಫಲ್ಯ, ರಾಮಾಯಣಾದಿ ಮಹಾಕಾವ್ಯಗಳ ಅಧ್ಯಯನ ಹೀಗೆ ಈ ಚಕ್ರ ಉರುಳಿತು : "ದಾರಿ ಯಾವುದಯ್ಯಾ ವೈಕುಂಠಕೆ ದಾರಿ ತೋರಿಸಯ್ಯಾ!" ಆಗ ಸ್ಫುರಿಸಿತು ಒಂದು ತಂತ್ರ (ನೋಡಿ : "*ಐನ್‌ಸ್ಟೈನ್ ಬಾಳಿದರಿಲ್ಲಿ*" ಪುಸ್ತಕದಲ್ಲಿ 'ಸೂತ್ರಭೇದನೆ' ಅಧ್ಯಾಯ.) ಅಲ್ಲಿಯೂ ಚರಮಗೀತೆ ಏನು ಬರೆಯೋಣ ? ಏನನ್ನು ಉಲ್ಲೇಖಿಸೋಣ. ಆ ಚಡಪಡಿ ಕೆಯ ದಿನಗಳಂದು ಎಂದೋ ಒಂದು ಮುಂಜಾನೆಯ ಅರೆನಿದ್ದೆಯಲ್ಲಿ "ಭೃಂಗದ ಬೆನ್ನೇರಿ

ಬಂತು ಕಲ್ಪನಾ ವಿಲಾಸಾ!": ನನಗೆ ಚಿರಪರಿಚಿತವೂ ಬಲು ಪ್ರಿಯವೂ ಆಗಿದ್ದ "ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ!" ಮೃದುವಾಗಿ ಬೀರಿತು "ಮಂದಹಾಸಾ." ಇದು ಕವಿ ಗೋಪಾಲಕೃಷ್ಣ ಅಡಿಗರ (೧೯೧೮-೯೨) 'ಮೋಹನ ಮುರಲಿ' ಕವನದ ಒಂದು ಸಾಲು.

"ಚಂದ್ರಶೇಖರ್ ಪರಿಮಿತಿ" ಖ್ಯಾತಿಯ (ಬೃಹನ್ನಕ್ಷತ್ರಗಳ ವಿಕಾಸ ಪಥವನ್ನು ಈ ವಿಶ್ವಭೌತಸ್ಥಿರಾಂಕ ನಿರ್ಣಯಿಸುತ್ತದೆ) ಸುಬ್ರಹ್ಮಣ್ಯನ್ ಚಂದ್ರಶೇಖರ್ (೧೯೧೦-೯೫) ಇಂಥ ದಿವ್ಯಾನುಭವವನ್ನು ವರ್ಣಿಸಿರುವ ಪರಿ : "ಮಾನವಮತಿ ತನ್ನ ಗಭೀರತಮ ಮತ್ತು ಪರಮ ಪ್ರಗಲ್ಭ ನೆಲೆಯಲ್ಲಿ ಸುಂದರ ಎಂದು ಪರಿಭಾವಿಸುವ ವಸ್ತು ಬಾಹ್ಯ ನಿಸರ್ಗದಲ್ಲಿ ಪ್ರತ್ಯಕ್ಷವಾಗುವುದು ನಿಜಕ್ಕೂ ಕಲ್ಪನಾತೀತ ಸಂಗತಿಯೇ ಸರಿ. ಬುದ್ಧಿಗಮ್ಯವಾದದ್ದು ಸುಂದರವೂ ಹೌದು."

ಇನ್ನೊಮ್ಮೆ ಬರೆದರು : "ವಿಜ್ಞಾನದ ಅನುಶೀಲನೆಯನ್ನು ಬಹುತೇಕ ಪರ್ವತಾರೋಹಣಕ್ಕೆ ಹೋಲಿಸುವುದುಂಟು—ಸಾಕಷ್ಟು ಎತ್ತರದ ಬೆಟ್ಟಗಳನ್ನೂ ಅಷ್ಟೇನು ಎತ್ತರದವಲ್ಲದ ಗುಡ್ಡಗಳನ್ನೂ ಹತ್ತುವುದು. ಆದರೆ ಆಕಾಶ ನೀಲವಾಗಿದ್ದು ಮಾರುತ ನಿಸ್ಪಂದವಾಗಿರುವಾಗ ಹಿಮಾಲಯ ಏರಿ, ಶಿಖರ ತಲಪಿ, ಅನಂತಕ್ಕೆ ವ್ಯಾಪಿಸಿಕೊಂಡಿರುವ ಮಂಜಿನ ಜ್ವಲಂತ ಪರಿಶುಭ್ರತೆಯಲ್ಲಿ ಮತ್ತು ನಿಶ್ಚಲವಾಯುವಿನ ನೀರವತೆಯಲ್ಲಿ ಸಮಗ್ರ ಹಿಮಾಲಯ ಶ್ರೇಣಿಯನ್ನೇ ಸರ್ವೇಕ್ಷಿಸಲು ನಮ್ಮ ಪೈಕಿ ಯಾರು ತಾನೇ ಕಲ್ಪನೆಯಲ್ಲಾದರೂ ಹವಣಿಸಿಯಾನು? ನಿಸರ್ಗ ಕುರಿತಂತೆ ತತ್ಸದೃಶ ದರ್ಶನ ಲಭಿಸೀತೆಂದು ನಾವು ಯಾರೂ ಆಶಿಸಲಾರೆವು. ಆದರೆ ತಳದ ಕಣಿವೆಯಲ್ಲಿ ನಿಂತು ಸೂರ್ಯ ಕಾಂಚನಜುಂಗಾ ಶಿಖರ ಉತ್ಕ್ರಮಿಸುವುದನ್ನು ಪ್ರತೀಕ್ಷಿಸುವುದರಲ್ಲಿ ಹೀನವಾದುದಾಗಲೀ ದೀನವಾದುದಾಗಲೀ ಏನೂ ಇಲ್ಲ."

ಇದೇ ಭಾವನೆಯನ್ನು ಐನ್‌ಸ್ಟೈನ್ ಸ್ವತಂತ್ರವಾಗಿ ಅನುನಾದಿಸಿರುವ (resonate)ಪರಿ: "ಸೂಕ್ಷ್ಮ ಸಂವೇದನಶೀಲ ವ್ಯಕ್ತಿ, ಖಾಸಗಿ ಬದುಕಿನಿಂದ ಜ್ಞೇಯನಿಷ್ಠ (objective) ಅರಿವು ಮತ್ತು ಚಿಂತನೆಯ ಜಗತ್ತಿಗೆ ವಿಮೋಚಿತನಾಗಲು ತಹತಹಿಸುತ್ತಿರುವನು. ನಗರದ ಗಲಭೆಗೊಂದಲ ಇಕ್ಕಟ್ಟು ಪರಿಸರಗಳಿಂದ ಬಿಡುಗಡೆಗೊಂಡು, ಉನ್ನತ ಪರ್ವತಗಳ ಭವ್ಯ ನೀರವತೆಗೆ ನೆಗೆದು, ಅಲ್ಲಿಯ ನಿಶ್ಚಲ ಪರಿಶುಭ್ರ ವಾಯುವಿನ ನೇರ ದೃಷ್ಟಿ ಬಾಚಿ, ಮೇಲುನೋಟಕ್ಕೆ ಅನಂತ ಕಾಲದ ಸಲುವಾಗಿ ಕಡೆಯಲ್ಪಟ್ಟಿದೆಯೋ ಎಂದು ಭಾಸವಾಗುವ ಆ ಚಿರಶಾಂತ ವಿಸ್ತಾರಗಳನ್ನು ನಲ್ಮೆಯಿಂದ ಸರ್ವೇಕ್ಷಿಸಲು ಬಯಸುವ ನಗರ ನಿವಾಸಿಯ ಅದಮ್ಯ ಹಂಬಲದ ಜೊತೆ ಈ ತಹತಹವನ್ನು ಹೋಲಿಸಬಹುದು."

**ಕಲೆ**

ನೈಸರ್ಗಿಕ ವಿದ್ಯಮಾನವೊಂದರಿಂದ ಸ್ಫೂರ್ತಿದೀಪ್ತವಾಗುವ ಅಂತರ್ಬೋಧೆಯ (ಅಥವಾ ಪ್ರತಿಭಾನದ) ಪ್ರಸ್ಫುರಣವೇ ಕಲೆ. ವಾಲ್ಮೀಕಿಯ ಸಂದರ್ಭದಲ್ಲಿ ಕ್ರೌಂಚವಧೆ ಇಂಥ ಪ್ರಸ್ಫುರಣಕ್ಕೆ ಕಾರಣವಾಯಿತು. ಫಲವೇ **ಆದಿಕಾವ್ಯ** ಎಂಬ ಹೆಸರಿನಿಂದ ಅಜರಾಮರವಾಗಿರುವ **ರಾಮಾಯಣ**. ಇದು ಕಲೆ. ಆರ್ಕಿಮಿಡೀಸನ ಅಂತರ್ಬೋಧೆಯ

ಪ್ರಸ್ಫುರಣಪ್ರೇರಕವಾದರೂ ನೈಸರ್ಗಿಕ ಘಟನೆಯೇ. ಆದರೆ ಇದರ ಫಲ ಕಲೆ ಅಲ್ಲ, ಬದಲು ವಿಜ್ಞಾನ.

ಏನು ವ್ಯತ್ಯಾಸ? ಐನ್‌ಸ್ಟೈನ್ ನೀಡಿರುವ ವಿವರಣೆಯನ್ನು ಇನ್ನೊಮ್ಮೆ ಗಮನಿಸಬೇಕು: "ನೋಡಿದ್ದನ್ನೂ ಅನುಭವಿಸಿದ್ದನ್ನೂ ತರ್ಕಶಾಸ್ತ್ರದ ಪರಿಭಾಷೆಯಲ್ಲಿ ಚಿತ್ರಿಸಿದ್ದಾದರೆ ಆಗ ವಿಜ್ಞಾನದಲ್ಲಿ ಉದ್ಯುಕ್ತರಾಗಿರುತ್ತೇವೆ. ಜಾಗೃತ ಮನಸ್ಸಿಗೆ ಅಪ್ರವೇಶ್ಯವಾಗುವ ಅಂತರ್ಬೋಧೆಯಿಂದ, ಅರ್ಥಪೂರ್ಣವಾದವೆಂಬುದಾಗಿ ಪರಿಗಣಿಸಲ್ಪಡುವ ರೂಪಗಳ ಮೂಲಕ ಸಂವಹನಿಸಿದ್ದಾದರೆ ಆಗ ಕಲೆಯಲ್ಲಿ ಮಗ್ನರಾಗಿರುತ್ತೇವೆ."

ವಿಜ್ಞಾನದಲ್ಲಿ ಬಳಸುವ ಅರ್ಥದಲ್ಲಿ, ತರ್ಕ ಮತ್ತು ಪ್ರಯೋಗಗಳಿಗೆ ಕಲೆಯಲ್ಲಿ, ನೆಲೆ ಇಲ್ಲ. ಕಲಾಮಾಧ್ಯಮಕ್ಕೇ ವಿಶಿಷ್ಟವಾಗಿರುವ ತರ್ಕ, ಸಮರ್ಥನ, ಔಚಿತ್ಯ ಮುಂತಾದವು ಇವೆ. ಎಂ. ಹಿರಿಯಣ್ಣನವರು (೧೮೭೧-೧೯೫೦) ಈ ಸೂಕ್ಷ್ಮ ಗುರುತಿಸಿ ವಿವರಿಸಿದ್ದಾರೆ (ನೋಡಿ—*Art Experience*, ಕಾವ್ಯಾಲಯ ಪ್ರಕಾಶಕರು): "ಕಾವ್ಯದಲ್ಲಿಯ ಅಂತರಾರ್ಥ ಮೂರು ಮಡಿಕೆಯದು. ಇದರಲ್ಲಿ ಕವಿಯ ಉದ್ದೇಶ ಸಂಗತಿಯ ಸಂವಹನ (ವಸ್ತು) ಅಥವಾ ಕಾಲ್ಪನಿಕದ ಇಲ್ಲವೇ ಭಾವಲಹರಿಯ ವರ್ಗಾವಣೆ (ಅಲಂಕಾರ ಅಥವಾ ರಸ) ಆಗಿರಬಹುದು. ಮೊದಲನೆಯದರಲ್ಲಿ ಕಾವ್ಯಾಂಶ ಕನಿಷ್ಠ ಎಂಬುದು ಕಂಡಂತೆಯೇ ಇದೆ. ಇದರಲ್ಲೇನಾದರೂ ಕಲಾತ್ಮಕ ಲಕ್ಷಣವಿದ್ದರೆ ಅದು ಪೂರ್ತಿ ಸಂಸ್ಕರಣೆಗೆ (treatment) ಸೇರಿದ್ದೇ ಹೊರತು ವಿಷಯಕ್ಕೆ ಅಲ್ಲ. ಎಂದೇ ಪ್ರಕೃತ ಉಳಿದೆರಡನ್ನು ಮಾತ್ರ ಪರಿಗಣಿಸಿದರೆ ಸಾಕು. ಕಲ್ಪನೆ ಮತ್ತು ಸಂವೇದನೆಗಳಲ್ಲಿ ಇವುಗಳ ತಳ ನೆಲಸಿದೆ. ಸಂವೇದನೆ ಮತ್ತು ಕಲ್ಪನೆ ಎಂಬ ಗುಣಗಳ ಸಂಯುಕ್ತವೇ ಋಜುಕಲೆ ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಯಾವುದೇ ನಿರ್ದಿಷ್ಟ ಸನ್ನಿವೇಶದಲ್ಲಿ ಒಂದು ಅಥವಾ ಇನ್ನೊಂದು ಗುಣ ಪ್ರಧಾನವಾಗಿ ಪ್ರಕಟವಾಗಬಹುದು. ಮತ್ತು ಆಗ ಈ ದ್ವಿಸ್ತರ [ಎರಡು ಮಡಿಕೆ] ವರ್ಗೀಕರಣ ಆಯಾ ಪ್ರಧಾನ ಗುಣವನ್ನು ಉಲ್ಲೇಖಿಸುವುದೆಂದು ಭಾವಿಸಬೇಕು. ಪ್ರತಿಸ್ಪಂದನಶೀಲ ಮನವೊಂದು ಕಾಲ್ಪನಿಕ ಅಥವಾ ಭಾವಾತ್ಮಕ ಲಹರಿಯ ಮಾಂತ್ರಿಕತೆಗೆ ವಶವಾದಾಗ, ಬಹುತೇಕ ಅಪ್ರಯತ್ನಿತವಾಗಿ, ಹೊಮ್ಮುವ ಅಭಿವ್ಯಕ್ತಿಯನ್ನು ಕಲೆ ಪ್ರತಿನಿಧಿಸುವುದು ಎಂಬುದು ಇಲ್ಲಿಯ ದೃಷ್ಟಿ."

ತೀನಂಶ್ರೀಯವರು ಇದೇ ಪುಸ್ತಕದಿಂದ ಒಂದು ಪರಿಚ್ಛೇದವನ್ನು ಕನ್ನಡಿಸಿ *ಕಾವ್ಯ ಮೀಮಾಂಸೆಯ*ಲ್ಲಿ ಉಲ್ಲೇಖಿಸಿದ್ದಾರೆ (ಪುಟ ೨೧೦-೨೧೧): "ಸಾಂಖ್ಯದರ್ಶನದ ಮೇರೆಗೆ, ಪ್ರಕೃತಿ ಸಮಗ್ರವಾಗಿ ಸುಂದರವಲ್ಲ: ಅದರಲ್ಲಿ ಸುಂದರವಾದ ಅಂಶಗಳೂ ಉಂಟು, ವಿರೂಪವಾದ ಅಂಶಗಳೂ ಉಂಟು. ಪ್ರಕೃತಿಯಲ್ಲಿಯ ವಸ್ತುಗಳಿಂದ ಆಹ್ಲಾದವೇ ಒದಗುವುದಿಲ್ಲವೆಂದೇನೂ ಆ ದರ್ಶನ ಹೇಳುವುದಿಲ್ಲ. ಆದರೆ ಸರ್ವಕಾಲದಲ್ಲಿಯೂ ಸರ್ವರಿಗೂ ಆಹ್ಲಾದ ಕೊಡತಕ್ಕದ್ದು ಪ್ರಕೃತಿಯಲ್ಲಿ ಏನೂ ಇಲ್ಲವೆಂದು ಅದರ ಅಭಿಪ್ರಾಯ. ಅವಿಮಿಶ್ರಿತವಾದ ಕೇವಲ ಸುಖವನ್ನು ಪಡೆಯಲು ವ್ಯಾವಹಾರಿಕ ಜಗತ್ತನ್ನು ಬಿಟ್ಟು ಬೇರೆಯ ಕಡೆಗೇ ನಾವು ತಿರುಗಬೇಕು. ಇತ್ತ ವೇದಾಂತದರ್ಶನದ ಮೇರೆಗೆ, ಸರ್ವವೂ ಸುಂದರ; ವಿಶ್ವದ ಆಂತರಿಕ ಸೌಂದರ್ಯವನ್ನು ಭಂಗಗೊಳಿಸತಕ್ಕದ್ದು ಯಾವುದೂ ಅದರಲ್ಲಿಲ್ಲ.... ಯೋಗಿ ಶ್ರೇಷ್ಠತಮನಾದ ಕವಿ. ಏಕೆಂದರೆ ಎಲ್ಲದರಿಂದಲೂ

ಅವನಿಗೆ ಆನಂದ ಒದಗುತ್ತದೆ. 'ಸರ್ವವೂ ಆತ್ಮ' ಎಂಬ ಯೋಗಿಯ ಜ್ಞಾನವು ನಮಗೆ ಇಲ್ಲದಿದ್ದರೂ ನಾವು ಕೂಡ ಪ್ರಕೃತಿಯಿಂದ ಆಗಾಗ ರಸಾನುಭವ ಹೊಂದಬಹುದು. ಆದರೆ ವಿಶ್ವಸೌಂದರ್ಯವನ್ನು ಕಾಣಲು ನಮ್ಮ ಜಡತೆ ಸಾಮಾನ್ಯವಾಗಿ ಅಡ್ಡಿಯಾಗುತ್ತದೆ. ಸೌಂದರ್ಯಗ್ರಾಹಿಯಾದ ಕಣ್ಣುಳ್ಳ ಕವಿಯಾದರೆ ನಮಗೆ ಸಾಧ್ಯವಿಲ್ಲದ ಕಡೆಗಳಲ್ಲೂ ಪ್ರಕೃತಿಯ ಸೊಬಗನ್ನು ಸವಿಯುತ್ತಾನೆ; ತನ್ನ ಅನುಭವಕ್ಕೆ ಸ್ವರಸವಾದ [ಸ್ವಂತ ಅಪೇಕ್ಷೆಯ] ರೂಪವನ್ನು ಸಹಜವಾಗಿ ಕೊಟ್ಟು, ಆ ಮೂಲಕ ನಮ್ಮ ಕಣ್ಣನ್ನೂ ತೆರೆದು ನಾವು ಕಾಣದೇ ಬಿಟ್ಟದ್ದನ್ನು ತೋರಿಸುತ್ತಾನೆ. ಎಂದರೆ ನಮಗೆ ಹೃದ್ಯವಾಗುವಂತೆ ಅಭಿ ವ್ಯಕ್ತಿಗೊಳಿಸಿದ ಪ್ರಕೃತಿಯೇ ಕಲೆ.... ವೇದಾಂತದ ಪ್ರಕಾರ, ಕಲೆ ಪ್ರಕೃತಿಯ ಉತ್ತಮಾಂಶ ವನ್ನು ಪ್ರಕಾಶಪಡಿಸುತ್ತದೆ; ಸಾಂಖ್ಯದ ಪ್ರಕಾರ, ಪ್ರಕೃತಿಗಿಂತಲೂ ಉತ್ತಮವಾದ ಬೇರೊಂದು ಲೋಕವನ್ನು ನಿರ್ಮಿಸುತ್ತದೆ."

ಪ್ರತಿಭಾನದ ಮೂಸೆಯಲ್ಲಿ ಭಾವ ಮತ್ತು ಕಲ್ಪನೆ ಎಂಬ ಪರಿಕರಗಳು ಪ್ರತಿಭೆಯಿಂದ ಕ್ರಿಯಾಶೀಲವಾಗಿ ಮಿಂದು ಬೆಂದು ಒಂದಾಗುವ ರಸಸ್ಯಂದಿಯೇ ಕಲೆ. "ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ?" (ಕುವೆಂಪು). ಆ 'ಶಿಲೆ'ಯ ಇನ್ನೊಂದು ಹೆಸರು ಪ್ರಕೃತಿ, ನಿಸರ್ಗ ಅಥವಾ ವಿಶ್ವ.

ಕಲಾಪ್ರವೀಣ ರಸಿಕನನ್ನು ತರ್ಕಭಯಂಕರ ಶುಷ್ಕವಾದಿ ಕೆಣಕಿದ "ಕಲೆ ಎಂದರೇನು?"

"ತಿಳಿದವನಿಗೆ ವಿವರಣೆ ಅನಾವಶ್ಯಕ, ತಿಳಿಯದವನಿಗೆ ನಿಷ್ಪ್ರಯೋಜಕ." ಎಂದೇ ಡಿವಿಜಿ ವಾಣಿ :

ಕಲೆಗಳಲಿ ಪರಮಕಲೆ ಜೀವನದ ಲಲಿತ ಕಲೆ
ಕಲಿಸಲದನಳವಲ್ಲ ಬಾಹ್ಯಬೋಧನೆಯಿಂ
ಒಲಿದೊಲಿಸಿಕೊಳ್ಳುವ ಲೌಕಿಕ ನಯದ ಸೊಗಸ ನೀಂ
ತಿಳಿವುದೊಳಹದದಿಂದ ಮಂಕುತಿಮ್ಮ

ಸಂಗೀತ ಕಲೆಯೊಂದು ಸಾಹಿತ್ಯ ಕಲೆಯೊಂದು
ಅಂಗಾಂಗ ಭಾವರೂಪಣದ ಕಲೆಯೊಂದು
ಸಂಗಳಿಸಲೀ ಕಲೆಗಳನುನಯವು ಚರ್ಚೆಯಲಿ
ಮಂಗಳೋನ್ನತ ಕಲೆಯೊ ಮಂಕುತಿಮ್ಮ

## ಸತ್ಯ ಸೌಂದರ್ಯ

ಇದುವರೆಗಿನ ಮಂಥನದಿಂದ ಅನುಗತಿಸುವ ತೀರ್ಮಾನ : ವಿಜ್ಞಾನ ಮತ್ತು ಕಲೆ ಎಂಬವು ನಿಸರ್ಗ ನಾಣ್ಯದ (ಓದಿ : ಜೀವನ) ಎರಡು ಮಗ್ಗುಲುಗಳು. ವಿಜ್ಞಾನದಿಂದ ಕಲೆಯ ತ್ರಾಣ ವರ್ಧಿಸುತ್ತದೆ ಮತ್ತು ಅಸ್ತಿತ್ವ ದೃಢಪಡುತ್ತದೆ. ಏಕೆಂದರೆ ಯಾವುದೇ ಸುಂದರ ಕಲೆ ಭದ್ರತಂತ್ರ ಕೌಶಲಗಳ ಘನ ಅಸ್ತಿಭಾರದ ಮೇಲೆ ನಿಂತಿರುವ ಗೋಪುರ —ನೃತ್ತದ ಮೇಲೆ ನೃತ್ಯ ಶೋಭಿಸುವಂತೆ. ವಿಜ್ಞಾನದ ಒಂದು ಮುಖ ತಂತ್ರಕೌಶಲ ಸಮುಚ್ಚಯ ಎಂಬುದು ತಿಳಿದಿದೆ. ಇನ್ನು ವಿಜ್ಞಾನವಾದರೋ ಕಲಾಸಂಸ್ಪರ್ಶದಿಂದ ಅಧಿಕ ನಿಸರ್ಗ ಸಮೀಪಸ್ಥವಾಗುತ್ತದೆ ಮತ್ತು ಮಾರ್ದವತೆ ಗಳಿಸುತ್ತದೆ. ವಾಸ್ತವವಾಗಿ, ವಿಜ್ಞಾನ

ಎಂಬ ಚಿಂತನಪ್ರಕಾರ ಅನ್ವೇಷಕನ ಮನೋಮುಕುರದಲ್ಲಿ ಭೌತ ವಿಶ್ವದ ಪ್ರತಿಬಿಂಬ. ಈ ಕನ್ನಡಿ ದೋಷಯುಕ್ತವಾಗಿದ್ದರೆ ಪ್ರತಿಬಿಂಬ ವಿಕೃತವಾಗುತ್ತದೆ. ಅಂದ ಮಾತ್ರಕ್ಕೆ ಕನ್ನಡಿಯನ್ನು ಎಷ್ಟೇ ದೋಷರಹಿತವಾಗಿಸಿ ಸ್ಫುಟೀಕರಿಸಿದರೂ, ಪ್ರತಿಬಿಂಬ ಎಂದೂ ಬಿಂಬೈಕ್ಯವಾಗದು, ತದ್ರೂಪಿ ಕೂಡ ಆಗದು: "ಸರಿಯೇ ಸೂರ್ಯಗೆ ಕೋಟಿ ಮಿಂಚು ಬುಳುಗಳ್?" ಏಕೆ? ಒಂದು ವಿವರಣೆ :

ಉದ್ದ, ಅಗಲ, ದಪ್ಪ/ಆಳ/ಎತ್ತರ ಇವುಗಳಿಗೆ ಆಯಾಮಗಳೆಂದು ಹೆಸರು. "ಮೂರು ಆಯಾಮಗಳ 'ದೇಶ'ದಲ್ಲಿಯೂ ಒಂದು ಆಯಾಮದ 'ಕಾಲ'ದಲ್ಲಿಯೂ ನಾವು ಬಾಳುತ್ತಿದ್ದೇವೆ" ಎಂಬ ವಾಸ್ತವ ಸಂಗತಿಯ ಅರ್ಥ: ದೇಶದಲ್ಲಿ (=ಆಕಾಶ space) ಹಿಂದೆ-ಮುಂದೆ, ಎಡ-ಬಲ, ಮೇಲೆ-ಕೆಳಗೆ ಚಲಿಸಬಲ್ಲೆವು; ಕಾಲದಲ್ಲಿ (=ವೇಳೆ time) ಇದು ಸಾಧ್ಯವೇ? ಭೂತಕ್ಕೆ ಜಾರಲಾರೆವು, ಭವಿಷ್ಯಕ್ಕೆ ಏರಲಾರೆವು, ವರ್ತಮಾನದಲ್ಲಿ ಬಾಳುವುದೊಂದೇ ಶರಣು.

ಗಣಿತದಲ್ಲಿ ಬಿಂದುವಿನ ಆಯಾಮ ಸೊನ್ನೆ—ಉದ್ದವಿಲ್ಲ, ಅಗಲವಿಲ್ಲ, ದಪ್ಪವಿಲ್ಲ. ಆದರೂ ಬಿಂದು "ಇದೆ" ಎಂದು ನಮ್ಮ ಅಂತರ್ಬೋಧೆ ನುಡಿಯುತ್ತದೆ. ಎರಡು ಬಿಂದುಗಳನ್ನು ಜೋಡಿಸುವ ಕನಿಷ್ಠ ದೀರ್ಘತೆಯ ಗೆರೆ ಸರಳರೇಖೆ. ಇದರ ಆಯಾಮ ಒಂದು—ಉದ್ದವಿದೆ, ಅಗಲವಿಲ್ಲ, ದಪ್ಪವಿಲ್ಲ. ಪರಸ್ಪರ ಸಂಧಿಸುವ ಎರಡು ವಿಭಿನ್ನ ಸರಳರೇಖೆಗಳು ರಚಿಸುವ ಮೈಗೆ ಸಮತಲವೆಂದು ಹೆಸರು. ಇದಕ್ಕೆ ಉದ್ದವಿದೆ, ಅಗಲವಿದೆ, ಆದರೆ ದಪ್ಪ ಇಲ್ಲ. ಇದರ ಆಯಾಮ ಎರಡು. ಸಂಧಿಸುವ ನಾಲ್ಕು ವಿಭಿನ್ನ ಸಮತಲಗಳು ರಚಿಸುವ ಘನಾಕೃತಿಗೆ ಚತುಷ್ಫಲಕವೆಂದು ಹೆಸರು. ಇದರ ಆಯಾಮ ಮೂರು.

ಇವೆಲ್ಲ ಗಣಿತಸತ್ಯಗಳು. ನಿಷ್ಕೃಷ್ಟವಾಗಿ ಹೇಳುವುದಾದರೆ ಬಿಂದು, ಸರಳರೇಖೆ, ಸಮತಲ, ಘನಾಕೃತಿ ಯಾವುದಕ್ಕೂ ಭೌತ ಅಸ್ತಿತ್ವವಿಲ್ಲ! ಆದರೂ ಇವು "ಇವೆ" ಎಂಬುದು ನಮ್ಮ ಅನುಭವ. ಅರ್ಥ ಏನು ? ನಿಸರ್ಗದಲ್ಲಿ ಈ ಯಾವ ಗಣಿತಾಕೃತಿಗಳೂ ದೊರೆಯವು. ಇವು ನಮ್ಮ ದೈನಂದಿನ ಅನುಭವಗಳ ಆದರ್ಶೀಕರಣಗಳು ಮಾತ್ರ, ವ್ಯವಹಾರದಲ್ಲಿಯೂ ಗಣಿತಸಿದ್ಧಾಂತವಿಸ್ತರಣೆಯಲ್ಲಿಯೂ ಅತ್ಯಂತ ಉಪಯುಕ್ತ ಕೂಡ. ಎಂದೇ ಈ ಮುಂದಿನ ಐನ್‌ಸ್ಟೈನ್ ಸೂಕ್ತಿ : "ಗಣಿತ ಪ್ರಮೇಯಗಳು ವಾಸ್ತವತೆಯನ್ನು ಪ್ರತಿನಿಧಿಸುತ್ತಿರುವವರೆಗೆ ಖಚಿತವಲ್ಲ, ಖಚಿತವಾಗಿರುವವರೆಗೆ ವಾಸ್ತವತೆಯನ್ನು ಪ್ರತಿನಿಧಿಸುವುದಿಲ್ಲ." ಈ "ಲೋಪ"ದ ಮೂಲ ಇರುವುದು ಮಾನವ-ನಿಸರ್ಗ ಸಂಬಂಧದಲ್ಲಿ: ಭಾಗಕ್ಕೆಂದೂ ಪೂರ್ಣತೆಯ ಸಮಗ್ರ ದರ್ಶನ ಸಿದ್ಧಿಸದು.

ವಿಜ್ಞಾನಮಾರ್ಗ ಕಲೆಯಲ್ಲಿಯೂ ಕಲಾಮಾರ್ಗ ವಿಜ್ಞಾನದಲ್ಲಿಯೂ ಲಯಿಸುತ್ತವೆ. ಈ ಸಂಲಯನ (fusion) ಫಲವೇ ವಿಜ್ಞಾನಕಲೆ ಅಥವಾ ಕಲಾವಿಜ್ಞಾನ.

ಪ್ರಸ್ತುತ 'ಸುಂದರತೆ' (the beautiful), 'ಸೌಂದರ್ಯ' (beauty), 'ಋತ' (the true) ಮತ್ತು 'ಸತ್ಯ' (truth) ಎಂಬ ಪದಗಳ ನಡುವಿನ ಸೂಕ್ಷ್ಮ ಅರ್ಥವ್ಯತ್ಯಾಸ ಅರಿಯುವುದು ಮುಂದಿನ ಚರ್ಚೆಗೆ ಅಗತ್ಯ.

**೧. ಸುಂದರತೆ** : ಇದು ಇಂದ್ರಿಯಗಳಿಗೆ—ಪ್ರಧಾನವಾಗಿ ಕಣ್ಣುಗಳಿಗೆ—ಎದ್ದು ಕಾಣುವ ಚೆಲುವು ಅಥವಾ ಸೊಬಗು. ಮಸ್ಸೂರಿ ಶಿಖರದಿಂದ ಕಾಣುವ ಹಿಮಾಲಯದ

ಭವ್ಯ ದೃಶ್ಯ, ಕುದುರೆಮುಖದ ಕೊಡಿಯಿಂದ ಕೆಳಕ್ಕೆ ದೃಷ್ಟಿ ಬೀರಿದಾಗ ಎದುರಾಗುವ ಹಸುರು ಕಡಲಿನ ಸುಂದರ ಸ್ತಬ್ಧಚಿತ್ರ, ಶ್ರಾವಣಮಾಸದ ಸಮುದ್ರ ವೈಭವ ಎಲ್ಲವೂ ಸುಂದರತೆಗೆ ನಿದರ್ಶನಗಳು. "ಸುಂದರತೆಯ ತಳರೂಪಿಕೆ ಗಣಿತ" ಎಂದಿದ್ದಾನೆ ಸೌರವ್ಯೂಹದ ಗಣಿತಾಲೇಖ್ಯಮಂಡನಕಾರ ಯೋಹನ್ ಕೆಪ್ಲರ್(೧೫೭೧-೧೬೩೦). ಎಲ್ಲಿ ಸುಂದರತೆ ಇದೆಯೋ ಅಲ್ಲಿ ಗಣಿತವೂ ಎಲ್ಲಿ ಗಣಿತ ಇದೆಯೋ ಅಲ್ಲಿ ಸುಂದರತೆಯೂ ನಿಹಿತವಾಗಿರಲೇ ಬೇಕು ಎಂಬುದು ವಿಜ್ಞಾನಿಯ ನಂಬಿಕೆ. ಎಂದೇ ವಿಜ್ಞಾನದಲ್ಲಿ ಒಂದು ನೂತನ ಫಲಿತಾಂಶ ಅಥವಾ ವಾದ ಸಿದ್ಧಿಸಿದಾಗ ಆ ವಿಜ್ಞಾನಿಯ ಪ್ರಥಮಾಸಕ್ತಿ ಇರುವುದು ಅದು ಸುಂದರವಾಗಿದೆಯೇ ಇಲ್ಲವೇ ಎಂದು ಅರಿಯುವುದರಲ್ಲಿ, ಸರಿಯಾಗಿದೆಯೇ ಇಲ್ಲವೇ ಎಂದು ಪರೀಕ್ಷಿಸುವುದರಲ್ಲಿ ಅಲ್ಲ. ಇಲ್ಲಿಯ ನಿರ್ಣಾಯಕ ಅವನೇ—ಇದೊಂದು ಬಗೆಯ ಭಾವಸಂವೇದನೆ. ಅದು ಸದ್ಯದ ಸಮಸ್ಯೆಯನ್ನು ಯಶಸ್ವಿಯಾಗಿ ಪರಿಹರಿಸಿ ನವಮಾರ್ಗ ಪ್ರವರ್ತಕವಾಗಿದ್ದರೂ ಸುಂದರವಾಗಿಲ್ಲ ಎಂಬ ಭಾವ ಸ್ಫುರಿಸಿದರೆ ಅದರಲ್ಲೇನೋ ದೋಷ ಮರಸು ಕುಳಿತಿದೆ ಎಂಬುದು ಖಾತ್ರಿ. ಇಂಥ ನಿಲವಿನಿಂದ —ಅಂದರೆ ಗಣಿತವನ್ನು ಕೇವಲ ಬೌದ್ಧಿಕ ಕ್ರೀಡೆಯಾಗಿ ಅಭಿವರ್ಧಿಸಿ, ಲಭ್ಯ ಫಲಿತಾಂಶಗಳಿಗೆ ಸಂವಾದಿಯಾಗುವ ನೈಸರ್ಗಿಕ ವಿದ್ಯಮಾನಗಳನ್ನು ಶೋಧಿಸುವ ನಿಲವಿನಿಂದ—ಮುನ್ನಡೆದ ವಿಜ್ಞಾನಿ ಯಶಸ್ವಿ ಆಗಿರುವುದಕ್ಕೆ ವಿಜ್ಞಾನೇತಿಹಾಸದಲ್ಲಿ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಉದಾಹರಣೆಗೆ ವಸ್ತುವಿನ ಜಡರಾಶಿಯೂ ಗುರುತ್ವರಾಶಿಯೂ ಸಮ ಎಂಬ ಭೌತವಿಜ್ಞಾನ ತಥ್ಯವನ್ನು ನ್ಯೂಟನ್ ಕಾಲದಿಂದಲೂ ಪ್ರಶ್ನಾತೀತ ವಿಶ್ವ ಸತ್ಯ ಎಂದೇ ಅಂಗೀಕರಿಸಿ ವಿಜ್ಞಾನ ಬೆಳೆದು ನಳನಳಿಸಿದೆ, ಉಪಯುಕ್ತ ಪ್ರಾಯೋಗಿಕ ಫಲಗಳನ್ನೂ ನೀಡಿದೆ. ಆದರೆ ವಿದ್ಯಾರ್ಥಿ ಐನ್‌ಸ್ಟೈನ್ ಪ್ರಕಾರ "ಈ ಅಂಗೀಕಾರ ಅಸುಂದರ, ಎಂದೇ ಈ ಸಿದ್ಧಾಂತ ದೋಷಮುಕ್ತವಲ್ಲ." ಫಲ: ೧೯೧೫ರಲ್ಲಿ ಅವರೇ ಮಂಡಿಸಿದ ಯುಗ ಪ್ರವರ್ತಕ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತ, ದೇಶ ಕಾಲಗಳ ಸಂಲಗ್ನತೆ ಸಾಧಿಸಿದ ವಿಶ್ವ ಭಾಷ್ಯ. ಸೊನ್ನೆಯನ್ನು ಸೊನ್ನೆಯಿಂದ ಭಾಗಿಸಿದಾಗ ದೊರೆಯುವ ಲಬ್ಧ ಅನಿರ್ಧರಣೀಯ ಎಂದು ಅಂಗೀಕರಿಸಿ ಗಣಿತ ಮುನ್ನಡೆದಿತ್ತು. ಇಂಥ ವಿಚಿತ್ರ ಸನ್ನಿವೇಶದ ಸಾರ್ವತ್ರೀಕೃತ ಸಮಸ್ಯೆಯನ್ನು ಸಮಕಾಲೀನವಾಗಿ, ಆದರೆ ಪ್ರತ್ಯೇಕವಾಗಿ ಮತ್ತು ಸ್ವತಂತ್ರವಾಗಿ, ಅನ್ವೇಷಿಸಿದ ನ್ಯೂಟನ್ ಮತ್ತು ಲೈಬ್ನಿಟ್ಝ್ (ಉಭಯರೂ ೧೭-೧೮ನೆಯ ಶತಮಾನಗಳಲ್ಲಿ ಸಮಕಾಲೀನರು) ಕಲನಶಾಸ್ತ್ರವನ್ನು ಬೌದ್ಧಿಕ ಕ್ರೀಡೆಯಾಗಿ ಸೃಷ್ಟಿಸಿದರು. ವೇಗ, ವೇಗೋತ್ಕರ್ಷ ಮುಂತಾದ ದೈನಂದಿನ ಸಾಧಾರಣ ಅನುಭವಗಳನ್ನು ಸುಂದರ ಗಣಿತೋಕ್ತಿಗಳಲ್ಲಿ ಪೋಣಿಸಿ ಹೆಣೆದಿರುವ ಹಾರವಿದು. ಆಧುನಿಕ ಭೌತವಿಜ್ಞಾನದ ಭಾಷೆಯೇ ಕಲನಶಾಸ್ತ್ರ.

**೨. ಸೌಂದರ್ಯ** : ಇದು ಸುಂದರತೆಯ ತಳದಲ್ಲಿದ್ದು ಸುಂದರತೆಗೆ ಕಾರಣವಾಗುವ ದೃಢ ಆಧಾರ. ಮಾನವನಿಗೆ ಅಗೋಚರ, ಪ್ರಯೋಗಕ್ಕೆ ಅಲಭ್ಯ. ಆದರೆ ಇದ್ದೇ ಇದೆಯೆಂಬ ಭದ್ರ ವಿಶ್ವಾಸ ತಳೆಯಲು ಯಥೇಚ್ಛ ಪರೋಕ್ಷ ಪುರಾವೆಗಳು ಲಭ್ಯ. ಕಾವ್ಯಕಾವೇರಿಗೆ ಪ್ರತಿಭಾಬ್ರಹ್ಮಗಿರಿ ಹೇಗೋ ಹಾಗೆ ಸುಂದರತೆಗೆ ಸೌಂದರ್ಯ.

ಸುಂದರತೆಯೆನುವುದೇಂ ? ಜನಕೆ ಮೈಮಗೆಯಿಪಾ-
ನಂದದೊಳಮರುಮವೇಂ ? ವಿಶ್ವಚೇತನದಾ

ಸ್ಪಂದನವೆ ಸೌಂದರ್ಯಮದುವೆ ಜೀವನ ಮೂಲ
ಬಂಧುರತೆ ಬೊಮ್ಮನದು ಮಂಕುತಿಮ್ಮ

ಆಂತರಂಗಿಕ "ಸೌಂದರ್ಯ"ದ ಬಾಹಿರಂಗಿಕ ಪ್ರಕಾಶವೇ "ಸುಂದರತೆ." ವಿಜ್ಞಾನಿಯೂ ಕಲಾವಿದ ದಾರ್ಶನಿಕರಂತೆ ಸೌಂದರ್ಯಾರಾಧಕ, ಸೌಂದರ್ಯಾನ್ವೇಷಕ ಮತ್ತು ಸೌಂದರ್ಯಲೋಲ. ಇಂಥ ಉನ್ನತ ನೆಲೆಯಲ್ಲಿ, ಈ ಹಿಂದೆ ಹೇಳಿದಂತೆ, ವಿಜ್ಞಾನ-ಕಲೆ ಅಥವಾ ಕಲಾವಿಜ್ಞಾನ ಮಾತ್ರ ಇರುವುದು. ಹಾಗಾದರೆ ವಿಜ್ಞಾನಿಯ ದೃಷ್ಟಿಯಲ್ಲಿ ಸೌಂದರ್ಯ ಎಂದರೇನು? ಆನ್ರೀ ಪ್ವಾಂಕ್ವಾರೇ (೧೮೫೪-೧೯೧೨) ಎಂಬ ಪ್ರಸಿದ್ಧ ಗಣಿತ-ಭೌತವಿಜ್ಞಾನಿ ಬರೆದಿದ್ದಾರೆ :

"ನಿಸರ್ಗ ಪ್ರಯೋಜನಕಾರಿ ಎಂಬುದಕ್ಕಾಗಿ ವಿಜ್ಞಾನಿ ಅದನ್ನು ಅಧ್ಯಯನ ಗೈಯುವುದಿಲ್ಲ; ಅವನು ಅದನ್ನು ಅಧ್ಯಯನಗೈಯುವುದು ಅದರಲ್ಲಿ ಅವನಿಗೆ ಆನಂದ ಲಭಿಸುವುದರಿಂದ; ಅದರಲ್ಲಿ ಅವನಿಗೆ ಆನಂದ ಲಭಿಸುವುದು ಅದು ಸುಂದರವಾಗಿರುವುದರಿಂದ. ನಿಸರ್ಗ ಸುಂದರವಾಗಿರದಿದ್ದರೆ ಅದನ್ನು ತಿಳಿಯುವುದು ನಿಷ್ಪ್ರಯೋಜಕವಾಗಿರುತ್ತಿತ್ತು. ನಿಸರ್ಗವನ್ನು ತಿಳಿಯುವುದು ನಿಷ್ಪ್ರಯೋಜಕವಾಗಿದ್ದರೆ ಬದುಕು ಅರ್ಥಹೀನವಾಗಿರುತ್ತಿತ್ತು. ಇಂದ್ರಿಯಗಳಿಗೆ ಎದ್ದು ಕಾಣುವ ಸೌಂದರ್ಯವನ್ನು—ಅಂದರೆ ಗುಣಗಳ ಮತ್ತು ತೋರಿಕೆಗಳ ಸೌಂದರ್ಯವನ್ನು—ನಾನಿಲ್ಲಿ ಪ್ರಸ್ತಾವಿಸುತ್ತಿಲ್ಲ. ಆ ಸೌಂದರ್ಯವನ್ನು ಕಡೆಗಣಿಸುವೆನೆಂದಲ್ಲ. ಅದೆಂದೂ ನನ್ನ ಉದ್ದೇಶ ಅಲ್ಲ. ಆದರೆ ಅದಕ್ಕೆ ವಿಜ್ಞಾನದ ಜೊತೆ ಏನೂ ವ್ಯವಹಾರವಿಲ್ಲ. ಬದಲು, ನನ್ನ ಮನಸ್ಸಿನಲ್ಲಿರುವುದು ಭಾಗಗಳ ಸುಸಂಗತ ಮೇಳನದಿಂದ ಲಭಿಸುವ ಮತ್ತು ಶುದ್ಧ ಪ್ರತಿಭೆಗೆ ಗ್ರಾಹ್ಯವಾಗುವ ಆ ಗಭೀರ ಸೌಂದರ್ಯ."

ಆದ್ದರಿಂದ ಸೌಂದರ್ಯದ ಮೂಲ "ಭಾಗಗಳ ಸುಸಂಗತ ಮೇಳನ"ದಲ್ಲಿದೆ. ಈ ಗುಣದ ಇನ್ನೊಂದು ಹೆಸರು ಅಂಗಸೌಷ್ಠವ. ವ್ಯಕ್ತಿ ತನ್ನಲ್ಲಿ ಯೋಗ್ಯ ದೃಷ್ಟಿಯನ್ನೂ ಸದಭಿರುಚಿಯನ್ನೂ ಮೈಗೂಡಿಸಿಕೊಂಡರೆ—ಅಂದರೆ "ಶುದ್ಧ ಪ್ರತಿಭೆ" ಆತನಲ್ಲಿ ಲಕಲಕಿಸುತ್ತಿದ್ದರೆ—ಅಂಗಸೌಷ್ಠವ ಇರುವಲ್ಲೆಲ್ಲ ಆತನಿಗೆ ಸೌಂದರ್ಯದರ್ಶನವಾಗುತ್ತದೆ, ಮತ್ತು ವಿಲೋಮವಾಗಿ, ಸೌಂದರ್ಯದರ್ಶನವಾದಲ್ಲೆಲ್ಲ ಅಂಗಸೌಷ್ಠವ ಎದ್ದು ಕಾಣುತ್ತದೆ. ಅಂದರೆ, ನಿಜ ಸೌಂದರ್ಯದ ತಳ ಅಂಗಸೌಷ್ಠವ. ವಿಜ್ಞಾನಿಯ ಈ ಸೌಂದರ್ಯಾನ್ವೇಷಕ ದೃಷ್ಟಿಯನ್ನು ಸ್ಪಷ್ಟೀಕರಿಸುವ ಸಲುವಾಗಿ ಭೌತವಿಜ್ಞಾನಿ ರಿಚರ್ಡ್ ಪಿ. ಫೈನ್‌ಮಾನ್ (೧೯೧೮-೮೮) ಒಂದು ನಿದರ್ಶನ ಉಲ್ಲೇಖಿಸುತ್ತಾರೆ :

"ನನಗೊಬ್ಬ ಕಲಾವಿದ ಸ್ನೇಹಿತ ಇದ್ದಾನೆ. ಅನೇಕ ಸಂದರ್ಭಗಳಲ್ಲಿ ಈತ ತಳೆಯುವ ಒಂದು ನಿಲವನ್ನು ಮಾತ್ರ ನಾನು ಒಪ್ಪಲಾರೆ. ಸುಂದರ ಪುಷ್ಪವೊಂದನ್ನು ಈ ಕಲಾವಿದ ಮಿತ್ರ ಕೈಯಲ್ಲಿ ಹಿಡಿದುಕೊಂಡು 'ನೋಡು! ಇದು ಚೆಲುವಾಗಿದೆ' ಎನ್ನುತ್ತಾನೆ. ನಾನು ಒಪ್ಪುತ್ತೇನೆ. ಅಲ್ಲಿಗೇ ಮಾತು ನಿಲ್ಲಿಸದೆ ಆತ ಮುಂದುವರಿದು ನನ್ನನ್ನು ಕುಟುಕುತ್ತಾನೆ : 'ಒಬ್ಬ ಕಲಾವಿದನಾಗಿ ನಾನು ಇದರ ಸುಂದರತೆಯನ್ನು ಆಸ್ವಾದಿಸಿ ಆನಂದಿಸಬಲ್ಲೆ. ಆದರೆ ಒಬ್ಬ ವಿಜ್ಞಾನಿಯಾಗಿ ನೀನು ಮಾಡುವುದೇನು? ಇದರ ಅಂಗೋಪಾಂಗಗಳನ್ನು ಛಿದ್ರಿಸಿ, ಭೇದಿಸಿ ಸುಂದರತೆಯನ್ನು ಸಂಹರಿಸಿ, ಇಡೀ ಚೆಲುವನ್ನು ವಿರೂಪಗೊಳಿಸುವುದು!' ಕಲಾವಿದನ ಈ ಮಾತು ಕುತರ್ಕ ಎಂಬುದು ಸುಸ್ಪಷ್ಟ. ಏಕೆಂದರೆ ಆತ ಕಾಣುವ ಸುಂದರತೆ

[ಪ್ವಾಂಕ್ವಾರೇ ನುಡಿಗಳಲ್ಲಿ 'ಇಂದ್ರಿಯಗಳಿಗೆ ಎದ್ದು ಕಾಣುವ ಸೌಂದರ್ಯ'] ಇತರ ಎಲ್ಲ ವ್ಯಕ್ತಿಗಳಿಗೂ ಲಭ್ಯವಿದೆ. ನಾನು ಕೂಡ ಆತನಂತೆಯೇ ಆ ಹೂವನ್ನು ನೋಡಿ ಸಂತೋಷಿಸ ಬಲ್ಲೆ. ಆದರೆ ಅದೇ ವೇಳೆ ನಾನು ಹೂವಿನಲ್ಲಿ ಆತ ಕಾಣುವುದಕ್ಕಿಂತ ಅವೆಷ್ಟೋ ಅಧಿಕ ವಿವರಗಳನ್ನು ಗುರುತಿಸಿ ಹರ್ಷಿಸಲೂ ಬಲ್ಲೆ: ಹೂವಿನ ಎಸಳುಗಳನ್ನು ನೇಯ್ದಿರುವ ಕೋಶಗಳು, ವರ್ಣಕಗಳ ವಿನ್ಯಾಸ, ತಳದಲ್ಲಿರುವ ಅಣುಪರಮಾಣುಗಳ ಅಳವಡಿಕೆ, ಇತ್ಯಾದಿ. ['ಭಾಗಗಳ ಸುಸಂಗತ ಮೇಳನದಿಂದ ಲಭಿಸುವ ಮತ್ತು ಶುದ್ಧ ಪ್ರತಿಭೆಗೆ ಗ್ರಾಹ್ಯ ವಾಗುವ ಆ ಗಭೀರ ಸೌಂದರ್ಯ']. ನಿಸರ್ಗಶಿಲ್ಪಿಯ ಸುಂದರಕೃತಿ ಬಹಿರಂಗದಲ್ಲಿ ಮಾತ್ರವಲ್ಲ, ಅಂತರಂಗದ ಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿಯೂ ಸೌಂದರ್ಯಭರಿತ ವಾಗಿದೆ.''

ಖಭೌತವಿಜ್ಞಾನಿ ಎಸ್. ಚಂದ್ರಶೇಖರ್ ಬರೆದಿದ್ದಾರೆ : ''ಗಣಿತದಲ್ಲಿ ಸುಂದರತೆಯ ಶೋಧನೆಗಾಗಿ ಪ್ರವರ್ತಿತವಾದ ಒಂದು ಆವಿಷ್ಕಾರ ನಿಸರ್ಗದಲ್ಲಿ ತನ್ನ ಯಥಾ ಪ್ರತಿರೂಪ ವನ್ನು ದರ್ಶಿಸಬಹುದೆಂಬ ಊಹಾತೀತ ಸಂಗತಿ—ಸುಂದರತೆಯ ಸಾನ್ನಿಧ್ಯದಲ್ಲಿ ಒದಗುವ ವಿದ್ಯುದಾಲಿಂಗನಾನುಭವ—ಮಾನವಮತಿ ಇದರ ತೀರ ತಳದಲ್ಲಿ ಮತ್ತು ಅತ್ಯಂತ ಪ್ರಗಲ್ಭತೆಯಲ್ಲಿ, ಸೌಂದರ್ಯಕ್ಕೆ ಸಂವೇದನಶೀಲವಾಗಿದೆ ಎನ್ನಲು ನನ್ನನ್ನು ಪ್ರೇರಿಸು ತ್ತದೆ. ವಾಸ್ತವವಾಗಿ, ಇಲ್ಲಿ ನಾನು ಈ ವಿಚಾರ ಕುರಿತು ಏನು ಹೇಳಲು ಪ್ರಯತ್ನಿಸಿರು ವೆನೋ ಅಷ್ಟೂ ಈ ಮುಂದಿನ ಧ್ಯೇಯವಾಕ್ಯಗಳಲ್ಲಿ ಹೇಳಲ್ಪಟ್ಟಿದೆ :

ಋತದ ಪರಿಮುದ್ರೆ ಸರಳತೆ
ಸತ್ಯದ ಪರಿವೇಷ ಸೌಂದರ್ಯ''

**೩, ೪. ಋತ ಮತ್ತು ಸತ್ಯ** : ಸೌಂದರ್ಯದ ಪರ್ಯಾಯ ನಾಮ ಸತ್ಯ. ಇದು, ಈ ಹಿಂದೆ ಹೇಳಿದಂತೆ, ಇಂದ್ರಿಯಗಳಿಗೆ ಅಗೋಚರ. ಸತ್ಯದ ಬಾಹ್ಯ ಅಂದರೆ ಗೋಚರ ಮುಖವೇ ಋತ. ಈಶೋಪನಿಷತ್ತಿನಲ್ಲಿಯ ಶ್ಲೋಕ :

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್
ತತ್ತ್ವಂ ಪೂಷನ್ನ ಪಾವೃಣು ಸತ್ಯ ಧರ್ಮಾಯ ದೃಷ್ಟಯೇ

ಡಿವಿಜಿಯವರ ಅನುವಾದ :

ಹೊನ್ನತಟ್ಟೆಯ ಕವಿದು, ಪೋಷಕನೆ, ಓ ಸೂರ್ಯ
ನಿನ್ನೊಳಿಹ ಸತ್ಯದಾನನವ ಮರೆಯಿಸಿಹೆ
ನನ್ನಿಯಿಂ ತೆಗೆ ಅದನು ; ಸತ್ಯದೊಳ್ ಮನವೆನಗೆ
ಎನ್ನ ಕಣ್ಣದ ತೋರು ; ಧರ್ಮಬೀಜವದು

ಇದರ ಜೊತೆಗೆ ಡಿವಿಜಿಯವರದೇ ಇನ್ನೊಂದು 'ಕಗ್ಗ' ಗಮನಿಸಬೇಕು :

ತರಣಿ ದರ್ಶನಕಿಂತ ಕಿರಣಾನುಭವ ಸುಲಭ
ಪರಮಶಾಸ್ತ್ರಕ್ಕಿಂತ ಸರಿಯುದಾಹರಣೆ
ಪರಮತತ್ತ್ವವ ಕಂಡ ಗುರುವನರಸುವುದೆಲ್ಲಿ ?
ದೊರೆತಂದು ನೀಧನ್ಯ ಮಂಕುತಿಮ್ಮ

ಸಾರಾಂಶವಿಷ್ಟು. ಪರಾತ್ಪರವಸ್ತು ಇದೆಯೆಂಬ ನಂಬಿಕೆ, ಅಥವಾ ಅಂಥ ಒಂದು ಆದರ್ಶದ ಅನಿವಾರ್ಯತೆ—ಇದು ಸತ್ಯ (truth). ಇದು ಅಜರಾಮರ. ಇದರ ಗೋಚರ ಮುಖ ಋತ (the true). ಸೂರ್ಯನ ಗೋಚರ ಬಿಂಬ ಋತ, ಗರ್ಭಸ್ಥ ಬೈಜಿಕಾಗ್ನಿ ಸತ್ಯ. ಎಂದೇ

ಸತ್ಯದರ್ಶನವದಾದರ್ಶೋನ್ನತಿಯು ಅದರ
ಉತ್ಸವ ಪ್ರತಿಮೆಯೇ ಋತ ಕಣಾ ಮುನ್ನಡೆಗೆ,
ಪಥಸೂಚಿ, ನಚಿಕೇತ ಧ್ರುವ ಭಗೀರಥರಂತೆ
ಸತತ ಪ್ರಯತ್ನಿಸೈ ಜಸಗಳಿಸೆ ಅತ್ರಿಸೂನು

ಮೇಲೆ ಉಲ್ಲೇಖಿಸಿರುವ ಉಪನಿಷತ್ ಶ್ಲೋಕದಲ್ಲಿ "ಸತ್ಯ" ಮತ್ತು "ಹೊನ್ನ ತಟ್ಟೆ" ಅದೇ ಹಿಂದಿನ ವಿವರಣೆಯಲ್ಲಿಯ "ಸೌಂದರ್ಯ" ಮತ್ತು "ಸುಂದರತೆ" ಪರಿಕಲ್ಪನೆಗಳನ್ನು ಅನುಕ್ರಮವಾಗಿ ಪ್ರತೀಕಿಸುತ್ತವೆ. ಶಾಶ್ವತವೂ ಶಾಂತವೂ ಅಂತರ್ಗತವೂ ಅಗೋಚರವೂ ಆದ ಪದಾರ್ಥವೇ "ಶಿವ." ಇದರ ಪರ್ಯಾಯ ಪದಗಳು "ಸತ್ಯ" ಮತ್ತು "ಸೌಂದರ್ಯ." ವ್ಯತ್ಯಯಶೀಲವೂ ರುದ್ರವೂ ಬಹಿರ್ಗತವೂ ಗೋಚರವೂ ಆದ ಮುಖವೇ "ವಿಶ್ವ." ಇದರ ಪರ್ಯಾಯ ಪದಗಳು "ಋತ" ಮತ್ತು "ಸುಂದರತೆ." "ಸತ್ಯ"ವನ್ನು ಆಯಸ್ಕಾಂತ ಎಂದು ಭಾವಿಸಿದರೆ ಕಾಂತತ್ವ "ಋತ" ಆಗುತ್ತದೆ. ಹಿಮಾಲಯವನ್ನು "ಶಿವ"ನಿಗೆ ಸಮೀಕರಿಸಿದರೆ ಮಂಜು ಕವಿದಿರುವ ಆ ಜ್ವಲಂತ ದೃಶ್ಯ "ವಿಶ್ವ" ಆಗುತ್ತದೆ. ಶ್ರಾವಣದಲ್ಲಿ ಸಾಗರದ ರುದ್ರರಮಣೀಯ ದೃಶ್ಯ "ಋತ," ಅದರ ಆಂತರಿಕ ತ್ರಾಣ "ಸತ್ಯ." ಬೇಂದ್ರೆಯವರ ಕವನ ಹಾಡುವುದೂ ಇದೇ ಭಾವನೆಯನ್ನು :

ಸೂಜಿಗಲ್ಲು ತಿರುಗತಿತ್ತೋ ಹೊಳಿಮ್ಯಾಗ
ಸೂಜಿಯೊಂದು ತೇಲತಿತ್ತೋ ಹೊಳಿಯಾಗ

**ಋಷಿವಾಕ್ಯ ವಿಜ್ಞಾನಕಲೆ**

ಹಿಂದೆ ವಿವರಿಸಿದ ವೈಜ್ಞಾನಿಕ ವಿಧಾನದಲ್ಲಿಯ ಮೊದಲ ಮೂರು ಹಂತಗಳನ್ನು ಸೂತ್ರರೂಪದಲ್ಲಿ ಅನುಕ್ರಮವಾಗಿ ಮೂರ್ತ, ತಾರ್ಕಿಕ ಮತ್ತು ತಾತ್ತ್ವಿಕ ಎಂದು ನಿರ್ದೇಶಿಸಬಹುದು. ಮೂರ್ತ ಹಂತದಲ್ಲಿ ಎದುರಿರುವ ಸಮಸ್ಯೆ ಅಥವಾ ವಿದ್ಯಮಾನ ಕುರಿತ ಮಾಹಿತಿಗಳನ್ನು ಇಂದ್ರಿಯಗಳ ನೆರವಿನಿಂದ ಸಂಗ್ರಹಿಸಿ ಇವುಗಳಿಗೆ ಒಂದು ರೂಪ ಕೊಡುತ್ತೇವೆ. ಹೀಗೆ ಸಂಗ್ರಹಿಸಿದ ಮಾಹಿತಿಗಳಿಂದ ಸಾರ ಆಸವಿಸಲು ಮಾನವಮತಿ ಪ್ರತಿಭಾನ್ವಿತ ಊಹೆಯನ್ನು ಅಂತರ್ಬೋಧಾತ್ಮಕವಾಗಿ ಮಂಡಿಸುತ್ತದೆ. ಈ ಸಾರಕ್ಕೆ ವಾದವೆಂದು ಹೆಸರು. ಇದು ತಾರ್ಕಿಕ ಹಂತ. ವಾದದ ಜಿಗಿಹಲಗೆ ಮೇಲೆ ನಿಂತು ಅಜ್ಞಾತದ ಅಮೂರ್ತತೆಯತ್ತ ನೆಗೆತ ಮೂರನೆಯದು—ತಾತ್ತ್ವಿಕ ಅಥವಾ ಅಮೂರ್ತ ಹಂತ. ಕುವೆಂಪುವಾಣಿಯಲ್ಲಿ "ಏರುವೆನು ವಾಗ್ದೇವಿಯಮೃತರಸನೆಯಲಸನ್ನಾವೆಯಂ... ಸೇರುವೆನು ಋತಚಿದ್ರಸಾಬ್ಧಿಯಂ."

ವಿಜ್ಞಾನಿಯಾಗಲೀ ಕಲಾವಿದನಾಗಲೀ ಈ ಮೂರು ಹಂತಗಳನ್ನು ಏದಲೇಬೇಕು. ಜ್ಞಾನವಿಜ್ಞಾನಮೇರುವಿನೆಡೆಗಿನ ಋಜು ಅಭಿಯಾನ ಇಲ್ಲಿಂದ ಆರಂಭ. ಮುಂದಿನ

ಆರೋಹೀಸ್ತರಗಳಲ್ಲಿ ವಿಜ್ಞಾನ, ಕಲೆ ಎಂಬ ದ್ವೈತತ್ವ ಮಸಳಿ ವಿಜ್ಞಾನಕಲೆ ಎಂಬ ಅದ್ವೈತ ತತ್ತ್ವ ಮಾತ್ರ ಮಸಗುತ್ತದೆ: ಋತ ಚಿದ್ರಸಾಬ್ಧಿಯಲ್ಲಿ ಲೀನವಾಗುವ ನದಿಗಳ ಅನೇಕತೆ ಏಕತೆಯಾಗುವಂತೆ, ಅದು ಪೂರ್ಣತೆ :

> ಪೂರ್ಣತಾಭಿಮುಖಯಾನಂ ಮನುಜ ಶಕ್ತಿ ಮಿತಿ
> ಪೂರ್ಣತೆಯನೈದುವುದಸಾಧ್ಯಮಾತಂಗೆ ತಿಳಿ
> ವರ್ಣಕವದಾಗದೆಂದೂ ವರ್ಣ, ಸಮವಲ್ಲ-
> ವರ್ಣವಕೆ ಪ್ರಕೃತಿಯೊಳು ನೀರಪನಿ ಅತ್ರಿಸೂನು

ವೈಜ್ಞಾನಿಕ ವಿಧಾನ ನಮಗೆ ಪ್ರದಾನಿಸಿರುವ ಮೂರು ಆರೋಹೀಹಂತಗಳಿಂದ (ಮೂರ್ತ, ತಾರ್ಕಿಕ, ತಾತ್ತ್ವಿಕ) ಸಜ್ಜಾಗಿ ಮಂಕುತಿಮ್ಮನ ನುಡಿಚಿತ್ರವನ್ನು—"ಹೊಸ ಚಿಗುರು ಹಳೆಬೇರು... ಜೀವನಕೆ ಮಂಕುತಿಮ್ಮ" (ಪುಟ ೫೦)—ಈಗ ಹಂತ ಹಂತವಾಗಿ ಪರಾಂಬರಿಸೋಣ. ಇಲ್ಲಿ ಡಿವಿಜಿಯವರು ಈ ಮೇಲೆ ವಿವರಿಸಿರುವ ಮೂರು ಉತ್ತರೋತ್ತರ ಸ್ಥಿತಿಗಳಲ್ಲಿ ಜೀವನಕ್ಕೆ ಭಾಷ್ಯ ಬರೆದಿದ್ದಾರೆ :

೧. "ಹೊಸ ಚಿಗುರು ಹಳೆ ಬೇರು ಕೂಡಿರಲು ಮರಸೊಬಗು." ಸಸ್ಯ ಕುರಿತಂತೆ ಇದು ನೈಸರ್ಗಿಕ ವಾಸ್ತವತೆ. ರೂಪಕಾರ್ಥದಲ್ಲಿ "ಚಿಗುರು" ಯುವ ಜನತೆಯನ್ನೂ "ಬೇರು" ವೃದ್ಧ ಮಂದಿಯನ್ನೂ "ಮರ" ಸಾಕ್ಷಾತ್ ಜೀವನವನ್ನೂ ಪ್ರತೀಕಿಸುತ್ತವೆ. ವೈಜ್ಞಾನಿಕ ವಿಧಾನದಲ್ಲಿಯ ಮೂರ್ತಸ್ಥಿತಿಗೆ ಇದು ಸಂವಾದಿ ಆಗಿದೆ.

೨. "ಹೊಸಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ." ವ್ಯಕ್ತಿಯ ಸರ್ವತೋಮುಖ ಉತ್ಕರ್ಷ ಸಾಧಿಸಲು ಆತ ಅನುಸರಿಸಬೇಕಾದ ವ್ಯಾವಹಾರಿಕ ನೀತಿ ಇದರಲ್ಲಿ ನಿಹಿತವಾಗಿದೆ. ಇದು ಪುರೋಗಮನ-ನಿಯಂತ್ರಣವೆಂಬ ಪರಸ್ಪರ ನಿಯಂತ್ರಕ ಬಲಗಳ ಗತ್ಯಾತ್ಮಕ ವ್ಯವಸ್ಥೆಯೇ ಬದುಕು ಎನ್ನುತ್ತದೆ: 'ಪುರೋಗಮನ' ಜೀವನವನ್ನು ಮುನ್ನಡೆಸುತ್ತದೆ, 'ನಿಯಂತ್ರಣ' ಈ ಮುನ್ನಡೆಗೆ ದಿಗ್ದರ್ಶನವೀಯುತ್ತದೆ. ನಿಯಂತ್ರಣರಹಿತ ಪುರೋಗಮನ ಅಪಘಾತಹೇತು, ಪುರೋಗಮನರಹಿತ ನಿಯಂತ್ರಣ ಮರಣದ ಪರ್ಯಾಯ. ಪುರೋಗಮನ-ನಿಯಂತ್ರಣ ಸಂಲಯನವೇ ಋಜುಜೀವನ : "ರಸವೆ ಜನನ ವಿರಸ ಮರಣ ಸಮರಸವೆ ಜೀವನ" ಎಂಬಂತೆ. ಪುರೋಗಮನವನ್ನು "ಪ್ರೀತಿ" ಎಂದೂ ನಿಯಂತ್ರಣವನ್ನು "ನೀತಿ" ಎಂದೂ ಭಾವಿಸೋಣ. ಪ್ರೀತಿ-ನೀತಿ ಸಮನ್ವಯವೇ ಪ್ರಾಮಾಣಿಕ ಜೀವನ, ಇದೇ ಧರ್ಮ. ವ್ಯಕ್ತಿ-ವ್ಯಕ್ತಿ ನಡುವಿನ ಅಂತರವರ್ತನೆ ಪ್ರೀತಿಸೇಚಿತವಾಗಿರಬೇಕು ಮತ್ತು ನೀತಿನಿಯಂತ್ರಿತವಾಗಿರಬೇಕು. ಪ್ರೀತಿರಹಿತ ನೀತಿ ಗೌತಮ ಋಷಿಯಂತೆ ಜೀವನವಿಮುಖ, ನೀತಿರಹಿತ ಪ್ರೀತಿ ಧೃತರಾಷ್ಟ್ರನಂತೆ ಜೀವನ ಮಾರಕ. ಪ್ರೀತಿ-ನೀತಿ ಸಂತುಲನೆ ಎಂದರೆ : ಸಂಚಿತಾನುಭವದಿಂದ ಪಾಠ ಕಲಿತು ವರ್ತಮಾನದಲ್ಲಿ ಮೌಲ್ಯಬದ್ಧವೂ ಕ್ರಿಯಾಶೀಲವೂ ಆಗಿ ನಡೆಸುವ ಜೀವನ.

ಪ್ರಸಕ್ತ ಪಂಕ್ತಿಯಲ್ಲಿ ("ಹೊಸಯುಕ್ತಿ...") ಹಿಂದಿನದರಲ್ಲಿಯ "ಹೊಸ ಚಿಗುರು" ಪದಯುಗ್ಮ "ಹೊಸಯುಕ್ತಿ" ಆಗಿಯೂ "ಹಳೆಬೇರು" ಪದಯುಗ್ಮ "ಹಳೆತತ್ತ್ವ" ಆಗಿಯೂ ದ್ರವ್ಯಾಂತರಣಗೊಂಡಿವೆ (transmuted)—ಮಹಾ ಕಲಾವಿದನ ಕುಂಚದ ಬಿಡಿ

ಗೆರೆಗಳು ಸಂಘನಿಸಿ ಅಮೂರ್ತ ಭಾವ ಹೊಮ್ಮುವಂತೆ. ವೈಜ್ಞಾನಿಕ ವಿಧಾನದಲ್ಲಿಯ ತಾರ್ಕಿಕ ಸ್ಥಿತಿಗೆ ಇದು ಸಂವಾದಿ ಆಗಿದೆ.

೩. "ಋಷಿವಾಕ್ಯದೊಡನೆ ವಿಜ್ಞಾನಕಲೆ ಮೇಳವಿಸೆ ಜಸವು ಜನಜೀವನಕೆ." ಇಲ್ಲಿ ವಿಜ್ಞಾನ-ಕಲಾಸಂಪನ್ನ ಡಿವಿಜಿಯವರ ಚಿಂತನೆ ಮೂರ್ತ ಮತ್ತು ತಾರ್ಕಿಕ ಸ್ಥಿತಿಗಳೆರಡನ್ನೂ ಉತ್ತರಿಸಿ ಮೌಲ್ಯಗಳ ಹಾಗೂ ಅಮೂರ್ತತೆಯ "ಋತಚಿದ್ರಸಾಬ್ಧಿ"ಯಲ್ಲಿ ಲೀನವಾಗಿರುವುದನ್ನು ಕಾಣುತ್ತೇವೆ. "ಋಷಿವಾಕ್ಯ" ಎಂದರೆ ಸಿದ್ಧಾಂತ, "ವಿಜ್ಞಾನಕಲೆ" ಎಂದರೆ ಪ್ರಯೋಗ. ಪ್ರಯೋಗದಿಂದ ಸಿದ್ಧಾಂತವೋ ಸಿದ್ಧಾಂತದಿಂದ ಪ್ರಯೋಗವೋ—ಹಿಂದೆ ಉಲ್ಲೇಖಿಸಿರುವ ಕೂರಂಟ್ ಅವರ ವಿವರಣೆಯಲ್ಲಿ ಇಲ್ಲಿಯ "ಪ್ರಯೋಗ" "ವಾಸ್ತವತೆ" ಆಗಿದೆ ಎಂದು ಗಮನಿಸಬೇಕು—ಈ ದ್ವಂದ್ವವನ್ನು ಬೇರ್ಪಡಿಸಲಾರೆವು. ಸತ್ಯ-ಋತ ಸಂಬಂಧಕ್ಕೆ ಸದೃಶವಾದದ್ದು ಋಷಿವಾಕ್ಯ-ವಿಜ್ಞಾನಕಲೆ ಅಥವಾ ಸಿದ್ಧಾಂತ-ಪ್ರಯೋಗ (ವಾಸ್ತವತೆ) ಸಂಬಂಧ. ತತ್ತ್ವಶಾಸ್ತ್ರದಲ್ಲಿಯ ಒಂದು ಸೂಕ್ತಿ : "ಸಿರಿವಂತರು ಮತ್ತು ಬಡವರು ಬೀಗವಿಕ್ಕಿರುವ ಎರಡು ಸಂದೂಕಗಳು—ಒಂದರ ಕೀಲಿ ಇನ್ನೊಂದರೊಳಗೆ" (ಪುಟ ೫೫). ಜೀವನನಾಣ್ಯದ ಎರಡು ಮಗ್ಗಲುಗಳು ಋಷಿವಾಕ್ಯ ಮತ್ತು ವಿಜ್ಞಾನಕಲೆ (ಸಿದ್ಧಾಂತ ಮತ್ತು ವಾಸ್ತವತೆ). ರಾಷ್ಟ್ರಲಾಂಛನಕ್ಕೆ ಸಂವಾದಿ ಆದದ್ದು ಋಷಿವಾಕ್ಯ, ಅಂಕಿತಮೌಲ್ಯಕ್ಕೆ ಸಂವಾದಿ ಆದದ್ದು ವಿಜ್ಞಾನಕಲೆ. ಇವೆರಡೂ ಮೇಳವಿಸಿದಾಗ ನಾಣ್ಯ ಸುಭದ್ರವಾಗಿ ಚಲಾವಣೆಯಲ್ಲಿದ್ದು ರಾಷ್ಟ್ರೀಯ ಸಂಪದ್ವರ್ಧನೆಗೆ ಕಾರಣವಾಗುತ್ತವೆ. "ಜನಜೀವನದ ಜಸ" ಅಥವಾ ಯಶಸ್ಸು ಇದೇ. ವೈಜ್ಞಾನಿಕ ವಿಧಾನದಲ್ಲಿಯ ತಾತ್ತ್ವಿಕ ಸ್ಥಿತಿಗೆ ಇದು ಸಂವಾದಿ ಆಗಿದೆ.

ಸಿದ್ಧಾಂತ-ಪ್ರಯೋಗ ಅಥವಾ ಋಷಿವಾಕ್ಯ-ವಿಜ್ಞಾನಕಲೆ ಸಾಮರಸ್ಯ ಏರ್ಪಡದಾಗ ಏನಾಗುತ್ತದೆ? ಮಂಕುತಿಮ್ಮನ ಕ್ಷಮೆ ಕೋರಿ—

> ಹೊಸ ಚಿಗುರು ಹಳೆಬೇರು ಕೂಡದಿರೆ ಮರಸೊರಗು
> ಹೊಸ ಯುಕ್ತಿ ಹಳೆ ತತ್ತ್ವ ಸೆಣಸುತಿರೆ ಅಪಧರ್ಮ
> ಋಷಿವಾಕ್ಯ ವಿಜ್ಞಾನಕಲೆ ಸೇರದಿರಲು ಕ-
> ಲ್ಮಷವು ಜನಜೀವನಕೆ ಅತ್ರಿಸೂನು

ಅಂತೋಣಿ ಡಿ ಮೆಲ್ಲೋ ಎಂಬ ಪಾದ್ರಿ ಬರೆದಿರುವ "ದಿ ಸಾಂಗ್ ಆಫ್ ದಿ ಬರ್ಡ್" ನಲ್ಲಿಯ ಎರಡು ಆಖ್ಯಾನಕಗಳು ಈ ಸಂದರ್ಭದಲ್ಲಿ ಮನನೀಯವಾಗಿವೆ :

- ಒಬ್ಬ ಪಂಡಿತ ಬುದ್ಧನಿಗೆ ಹೇಳಿದ : "ಗುರುವೇ ! ನೀನು ಬೋಧಿಸುತ್ತಿರುವ ಸೂಕ್ತಿಗಳು ಧರ್ಮಗ್ರಂಥಗಳಲ್ಲಿಲ್ಲ."

ಬುದ್ಧ ನುಡಿದ : "ಹಾಗಾದರೆ ಅವನ್ನು ಅಲ್ಲಿ ಅಳವಡಿಸು."

ಪಂಡಿತನಿಗೆ ತುಂಬ ಮುಜಗರವಾಯಿತು. ತುಸುಕಾಲ ತಡೆದು ಅಳುಕಿನಿಂದ ಪಿಸು ನುಡಿದ : "ಗುರುವೇ! ನಾನೊಂದು ಅರಿಕೆ ಸಲ್ಲಿಸಲೇ? ನೀನು ಬೋಧಿಸುತ್ತಿರುವ ಕೆಲವೊಂದು ಸೂಕ್ತಿಗಳು ಧರ್ಮಗ್ರಂಥಗಳಲ್ಲಿ ಉಕ್ತವಾಗಿರುವವನ್ನು ವಿರೋಧಿಸುತ್ತವೆ."

ಬುದ್ಧ ಸಮಾರೋಪಿಸಿದ : "ಹಾಗಾದರೆ ಧರ್ಮಗ್ರಂಥಗಳಿಗೆ ತಿದ್ದುಪಡಿ ಅಗತ್ಯ."

- ಪ್ರಪಂಚದ ಸಕಲ ಮತಧರ್ಮಗಳ ಸಮಸ್ತ ಧರ್ಮಗ್ರಂಥಗಳನ್ನೂ ಪುನಾರೂಪಿಸ

ಬೇಕೆಂಬ ಸಲಹೆಯನ್ನು ವಿಶ್ವಸಂಸ್ಥೆಯಲ್ಲಿ ಮಂಡಿಸಲಾಯಿತು: ಪರಧರ್ಮ ಅಸಹಿಷ್ಣುತೆಗೆ ಅಥವಾ ಕ್ರೌರ್ಯಕ್ಕೆ ಇಂಬುಗೊಡುವ ಎಲ್ಲವನ್ನೂ ಅವುಗಳಿಂದ ನಿವಾರಿಸಬೇಕು; ವ್ಯಕ್ತಿಯ ಘನತೆಗೆ ಮಾರಕವಾಗುವ ಸರ್ವವನ್ನೂ ನಾಶಗೊಳಿಸಬೇಕು. ಈ ಸಲಹೆಯ ಮಂಡನಕಾರ ಜೀಸಸ್ ಕ್ರೈಸ್ಟ್ ಎಂದು ತಿಳಿದುಬಂದಾಗ ಪತ್ರಿಕಾವರದಿಗಾರರು ಆತನ ನಿವಾಸಕ್ಕೆ ಧಾವಿಸಿದರು. ಆತ ನೀಡಿದ ವಿವರಣೆ ತೀರ ಸರಳವಾಗಿತ್ತು : "ವ್ರತದಂತೆ ಧರ್ಮಗ್ರಂಥವೂ ಮಾನವನಿಗಾಗಿ ಇರುವಂಥದು, ಧರ್ಮಗ್ರಂಥಕ್ಕಾಗಿ ಮಾನವ ಅಲ್ಲ."

ಆದ್ದರಿಂದ, ಹೊನ್ನ ತಟ್ಟೆಯ ಮುಸುಕು ತೆಗೆದಾಗ ಮಾತ್ರ ("ಹಿರಣ್ಮಯೇನ ಪಾತ್ರೇಣ ..."), ಅಂದರೆ ಋತದ ಕವಚವನ್ನು ಭೇದಿಸಿದಾಗ ಮಾತ್ರ, ಸತ್ಯದರ್ಶನವಾಗುತ್ತದೆ. ಋತದ ಅನ್ವೇಷಣೆ ವಿಜ್ಞಾನ. ಈ ವಿಜ್ಞಾನದ ಗಮ್ಯ ಕಲೆ. ಋಷಿವಾಕ್ಯ ವಿಶ್ವ ಸತ್ಯ ಕುರಿತದ್ದು. ಇದರತ್ತ ಗಮಿಸುವುದು ವಿಜ್ಞಾನದ ಕಾರ್ಯ. ಫಲವಾಗಿ ವಿಜ್ಞಾನ ದ್ರವ್ಯಾಂತರಿಸಿ (transmute) ಕಲೆಯಾಗುತ್ತದೆ. ಹೀಗೆ ಇವೆರಡು—ಋಷಿವಾಕ್ಯ ಮತ್ತು ವಿಜ್ಞಾನಕಲೆ—ಪರಸ್ಪರ ಪೂರಕ ಪೋಷಕವಾಗಿ "ಮೇಳವಿಸೆ ಜಸವು ಜನಜೀವನಕೆ." ಆಗ ವ್ಯಕ್ತಿ ಆನಂದಲೀನನಾಗುತ್ತಾನೆ. ಕುವೆಂಪು ನುಡಿಗಳಲ್ಲಿ :

> ತಮೋ ತಿಮಿರವಳಿಯಲಲ್ಲಿ ಪರಂಜ್ಯೋತಿ ಬೆಳಗಲಿ
> ಋತದ ಶಿವದ ಆನಂದದ ಚಿದ್ವಿಭೂತಿ ತೊಳಗಲಿ

ಈ ಮೂರನೆಯ ಸ್ಥಿತಿ—ಋತದ ಕವಚಭೇದನೆ, ಸತ್ಯದರ್ಶನ, ವಿಜ್ಞಾನಕಲೆ ಸಂಲಯನ ಮತ್ತು ಆನಂದ ಪಾರವಶ್ಯ—ಮಾನವನ ಎದುರು ಒಂದು ಅಮೂರ್ತ ಆದರ್ಶ, ಮೌಲ್ಯ ಅಥವಾ ಗಮ್ಯ ಒಡ್ಡುತ್ತದೆ. ಅದರ ಗುಣಗಳೇನು?

ಅದು ಇದೆ, ಆದರೆ ದೊರೆಯದು.

ಅದು ಬರಸೆಳೆಯುತ್ತದೆ—ಆದರೆ ಹಾದಿ ತಿಳಿಯದು.

ಅದು ಪಣಹೂಡಿದೆ—ನಾನು ಗೆಲ್ಲಲೇಬೇಕು.

ಭೌತವಿಶ್ವದಲ್ಲಿಯ ಕೃಷ್ಣವಿವರಕ್ಕೆ (Black Hole) ಸಂವಾದಿ ಆದದ್ದು ಈ ಮೇಲಿನ "ಅದು." ಚಂದ್ರಶೇಖರ್ ಮತ್ತೆ ಮತ್ತೆ ಹೇಳುತ್ತಿದ್ದುದು : "ಭೌತವಿಶ್ವದಲ್ಲಿಯ ಪರಮ ಸುಂದರ ನಿರ್ಮಿತಿ ಕೃಷ್ಣವಿವರ." (ಇದೇ ಲೇಖಕನ *ಕೃಷ್ಣವಿವರಗಳು* ಪುಸ್ತಕದಲ್ಲಿ ಸವಿವರ ವಿಶ್ಲೇಷಣೆ ಇದೆ.)

ಈಶಾವಾಸ್ಯೋಪನಿಷತ್ತಿನ ಪ್ರಖ್ಯಾತ ಶ್ಲೋಕ :

> ತದೇ ಜತಿ ತನ್ನೈಜತಿ ತದ್ದೂರೇ ತದ್ವಂತಿಕೇ
> ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ

ಅದು ಚಲಿಸುವುದು ಚಲಿಸುವುದಿಲ್ಲ, ಅದು ದೂರದಲ್ಲಿದೆ ಹತ್ತಿರದಲ್ಲಿದೆ, ಅದು ಎಲ್ಲದರ ಒಳಗೆ ಇದೆ ಅದೇ ಎಲ್ಲಕ್ಕೂ ಹೊರಗೆ ಇದೆ. (ಅನು : ಸೋಮನಾಥಾನಂದ)

ಮೇಲಿನ ವಿವರಣೆ ಗಮ್ಯ-ಗಮನ-ಮಾರ್ಗ ಸಂಬಂಧವನ್ನು ಸೂಚಿಸುತ್ತದೆ. ಗಮ್ಯ-ಗಮನ-ಮಾರ್ಗ ಅವಿಭಾಜ್ಯ ಸನ್ನಿಕಟತೆಯಲ್ಲಿ ಎರಕಗೊಂಡಿವೆ. ಎಂದೇ ಒಂದನ್ನು ಉಳಿದೆರಡರಿಂದ ಪ್ರತ್ಯೇಕಿಸುವುದು ಅಸಾಧ್ಯ. ಮಾನವನ ಸಕಲ ಸೃಜನಶೀಲ ಕ್ರಿಯೆಗಳನ್ನೂ

ಪ್ರೇರಿಸಿ ಪೋಷಿಸುವುದು ಗಮ್ಯ-ಗಮನ-ಮಾರ್ಗ ಅಂತರಕ್ರಿಯೆ. ಇದೇ ಋಷಿವಾಕ್ಯ-ವಿಜ್ಞಾನಕಲೆ ಮೇಳನ ಮತ್ತು ತಜ್ಜನ್ಯ ಜೀವನಯಶಸ್ಸು. ಧರ್ಮ ಇದರ ತಳಹದಿ.

ಮೌಲ್ಯಗಳ ಆಕರ ಧರ್ಮ. ಇದು ವ್ಯಕ್ತಿಗೆ ಗುರಿ ಅಥವಾ ಗಮ್ಯವನ್ನು ವಿಧಿಸುತ್ತದೆ. ಇದೊಂದು ಅಮೂರ್ತ ಗುಣ. ಇದನ್ನು ಐದಲು ಮೂರ್ತ ಮಾರ್ಗನಿರ್ಮಾಣ ಅಗತ್ಯ. ಇದು ವಿಜ್ಞಾನದ ಹೊಣೆ. (ನಿಸರ್ಗದ ಜೊತೆಗೆ ಮಾನವಮತಿ ವರ್ತಿಸಿದಾಗ ವಿಜ್ಞಾನ ಮೈದಳೆಯುತ್ತದೆ. ಅವ್ಯಕ್ತದ ಜೊತೆ ವರ್ತಿಸಿದಾಗ ಧರ್ಮ ಕೆನೆಗಟ್ಟುತ್ತದೆ.) ಐನ್‌ಸ್ಟೈನ್ ಬರೆದಿದ್ದಾರೆ :

ಧರ್ಮರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಧರ್ಮ ಕುರುಡು.

ಮೊದಲನೆಯದು ಗುರಿ ಇರದ ವೃಥಾ ನಡಿಗೆ, ಎರಡನೆಯದು ದಾರಿ ಅರಿಯದ ವೃಥಾ ಪರಡಿಕೆ. ವಿಜ್ಞಾನಕ್ಕೆ ಧರ್ಮ ಮಾನವೀಯತೆಯನ್ನು ಪೂಸಬೇಕು, ಧರ್ಮಕ್ಕೆ ವಿಜ್ಞಾನ ವಾಸ್ತವತೆಯನ್ನು ಒದಗಿಸಬೇಕು. ಎಂದೇ ಧರ್ಮದೊಡನೆ ವಿಜ್ಞಾನ ಮೇಳವಿಸಲು ಜೀವನಕ್ಕೆ ಸಾರ್ಥಕ್ಯ ಲಭಿಸುತ್ತದೆ. ಗೋಪಾಲಕೃಷ್ಣ ಅಡಿಗರ (ಹಿಂದೆ ಉಲ್ಲೇಖಿಸಿದೆ) ನುಡಿಗಳಲ್ಲಿ

ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ?

**ಶಂಕರವಾಣಿ**

ಶ್ರೀ ಶಂಕರಾಚಾರ್ಯರ ''ಭಜಗೋವಿಂದಮ್''ನಲ್ಲಿರುವ ಸುಪರಿಚಿತ ಶ್ಲೋಕ :

ಸತ್ಸಂಗತ್ವೇ ನಿಸ್ಸಂಗತ್ವಂ
ನಿಸ್ಸಂಗತ್ವೇ ನಿರ್ಮೋಹತ್ವಂ
ನಿರ್ಮೋಹತ್ವೇ ನಿಶ್ಚಲ ತತ್ತ್ವಂ
ನಿಶ್ಚಲ ತತ್ತ್ವೇ ಜೀವನ್ಮುಕ್ತಿಃ

ವೈಜ್ಞಾನಿಕ ವಿಧಾನದಲ್ಲಿ ಗಮಿಸುತ್ತ ಇದನ್ನು ಅರ್ಥವಿಸಲು ಪ್ರಯತ್ನಿಸೋಣ. ವಿಜ್ಞಾನದ ಪಥಕ್ರಮಣದಲ್ಲಿ ಸಮಸ್ಯೆ ಎದುರಾಗುತ್ತದೆ. ಇದೇ ಆ ವಿಜ್ಞಾನಿಗೆ ''ಸತ್ಸಂಗ.'' ಸಮಸ್ಯೆಯ ರಹಸ್ಯಶೋಧನೆ, ಅಂದರೆ ಸಮಸ್ಯಾ ಪರಿಹಾರ, ಆತನ ಅರ್ಜುನಲಕ್ಷ್ಯ ಮಾತ್ರ. ಎಂದೇ ಇತರ ಸಂಗಗಳು ಆತನಿಗೆ ವರ್ಜ್ಯ—''ನಿಸ್ಸಂಗತ್ವಂ.'' ಹೀಗೆ, ಒಂದನೆಯ ''ಮೂರ್ತ ಅಥವಾ ಭೌತ ಸ್ಥಿತಿ''ಯಲ್ಲಿ ಮಗ್ನನಾಗುವ ವಿಜ್ಞಾನಿಗೆ ಎಲ್ಲ ಬಗೆಯ ಮೋಹಗಳೂ ದೂರವಾಗುತ್ತವೆ. ಇದೇ ''ನಿರ್ಮೋಹತ್ವ.'' ವಿಮಾನವೀಗ ನೆಲದಿಂದ ಮೇಲೆದ್ದಿದೆ, ಇಲ್ಲಿಯ ಪಾಶಗಳಿಂದ ದೂರವಾಗಿದೆ, ಗಗನಗಾಮಿ ಆಗಿದೆ (ಕೂರಂಟ್ ಉಕ್ತಿಯನ್ನು ಗಮನಿಸಿ, ಪುಟ ೫೫.) ಆ ಔನ್ನತ್ಯದಲ್ಲಿ ವಿಜ್ಞಾನಿಗೆ ತನ್ನ ಸಮಸ್ಯೆಯ ಬಗೆಗಿನ ತಳರೂಪಿಕೆ ತುಸು ತುಸುವೇ ಸ್ಪಷ್ಟವಾಗುತ್ತ ಹೋಗುವುದು. ನಿರ್ಮೋಹದಿಂದ ಮೇಲಿನ ಮಜಲು ''ನಿಶ್ಚಲತತ್ತ್ವ'' ದರ್ಶನ. ಇದು ತಾರ್ಕಿಕ ಸ್ಥಿತಿ. ಇಂಥ ವಿಜ್ಞಾನಿಗೆ, ಅಂದರೆ ನಿಶ್ಚಲತತ್ತ್ವ ದರ್ಶನ ಲೀನವಾಗಿರುವಾತನಿಗೆ ಸಮಸ್ಯಾಪರಿಹಾರ ತಂತಾನೇ ಸ್ಫುರಿಸುತ್ತದೆ. ಈ ಹಂತವೇ ''ಜೀವನ್ಮುಕ್ತಿ'' ಅಥವಾ ತಾತ್ತ್ವಿಕ ಸ್ಥಿತಿ.

**ಸಾರಾಂಶ**

ಮಂಕುತಿಮ್ಮನ ಕಗ್ಗ, ವೈಜ್ಞಾನಿಕ ವಿಧಾನ ಮತ್ತು ಶ್ರೀ ಶಂಕರಾಚಾರ್ಯಕೃತ ಶ್ಲೋಕ ಇವುಗಳ ಸಂವಾದಿತ್ವ ಗಮನಿಸಬೇಕು :

| ಮಂಕುತಿಮ್ಮವಾಣಿ | ವೈಜ್ಞಾನಿಕ ವಿಧಾನ | ಶಂಕರವಾಣಿ |
|---|---|---|
| ಹೊಸ ಚಿಗುರು ಹಳೆ ಬೇರು | ಮೂರ್ತಹಂತ | ಸತ್ಸಂಗತ್ವ |
| ಹೊಸ ಯುಕ್ತಿ ಹಳೆ ತತ್ತ್ವ | ತಾರ್ಕಿಕ ಹಂತ | ನಿಶ್ಚಲ ತತ್ತ್ವ |
| ಋಷಿವಾಕ್ಯ ವಿಜ್ಞಾನಕಲೆ | ತಾತ್ತ್ವಿಕ ಹಂತ | ಜೀವನ್ಮುಕ್ತಿ |
| ಜೀವನ ಯಶಸ್ಸು | ವಿಶ್ವರೂಪ ದರ್ಶನ | ಆನಂದಾನುಭೂತಿ |

ಹಾದಿಗಳು ಬೇರೆ, ಗುರಿ ಒಂದೇ; ವಿಧಾನಗಳು ಬೇರೆ, ಫಲ ಒಂದೇ; ಮತ್ತು ಪರಿಕರಗಳು ಬೇರೆ, ಪಾಕ ಒಂದೇ:

ಸಕಲಕೆಲ್ಲಕೆ ನೀನೆ
ಅಕಳಂಕ ಗುರುವೆಂದು
ನಿಖಿಳಶಾಸ್ತ್ರವು ಪೇಳುತಿರಲರಿದೆನು

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ
ಅವರವರ ಭಾವಕ್ಕೆ
ಅವರವರ ಪೂಜೆಗಂ
ಅವರವರಿಗೆಲ್ಲ ಶಿವ ನೀನೊಬ್ಬನೆ

ಹೋರಾಟವಿಕ್ಕಿಸಲು
ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ನೀನಲ್ಲದೆ
ಆರು ಅರಿಯರು ನೀನು
ಬೇರಾದ ಪರಿಗಳನು
ಮಾರಾರಿ ಶಿವಷಡಕ್ಷರಿ ಲಿಂಗವೆ

ಇಲ್ಲಿ "ಶಿವ" ಎಂದರೆ ವಿಜ್ಞಾನಿಗೆ ನಿಸರ್ಗ, ಆಸ್ತಿಕನಿಗೆ ದೇವರು, ನಾಸ್ತಿಕನಿಗೆ (ಅಂದರೆ ಮಾನವಮತಿಯ ಪರಮೋತ್ಕೃಷ್ಟ ಉಪಜ್ಞೆಯಾದ ದೇವರ ಬಗ್ಗೆ ನಂಬಿಕೆ ಇಲ್ಲದಾತನಿಗೆ) ಅಥವಾ ವಿಚಾರವಾದಿಗೆ ಜೀವನಮೌಲ್ಯ.

**ಡಿವಿಜಿ ವಿವರಣೆ**

ಮಂಕುತಿಮ್ಮನ ಕಗ್ಗ (ಡಿವಿಜಿ) ೧೯೪೩ರಲ್ಲಿ ಪ್ರಕಟವಾಯಿತು. ಇದರ ಒಂದು ಪದ್ಯ:

ಬದುಕು ಜಟಕಾ ಬಂಡಿ ವಿಧಿಯದರ ಸಾಹೇಬ
ಕುದುರೆ ನೀನ್, ಅವನು ಪೇಳ್ದಂತೆ ಪಯಣಿಗರು
ಮದುವೆಗೋ ಮಸಣಕೋ ಹೋಗೆಂದ ಕಡೆಗೋಡು
ಪದಕುಸಿಯೆ ನೆಲವಿಹುದು ಮಂಕುತಿಮ್ಮ

ಇದು ಸುಗಮ ಸಂಗೀತ ಮಾಧ್ಯಮದ ಮೂಲಕ ಜನಗಣಮನ ತಲಪಿ ಅನುನಾದಿಸಿದಾಗ ಸಮಕಾಲೀನ ಭಗವದ್ಗೀತೆ ಈ ನೆಲದಿಂದ ಅರಳಿ ಪರಿಮಳಿಸಿದಂತಾಯಿತು—ಹನ್ನೆರಡನೆಯ ಶತಮಾನದಲ್ಲಿ ವಚನವಾಙ್ಮಯ ಪುಷ್ಪಿಸಿ ಸುಗಂಧ ಸೂಸಿದಂತೆ.

ವಿಜ್ಞಾನ, ಸಾಹಿತ್ಯ ಮತ್ತು ಸಂಗೀತ ಪರಿವ್ರಜನ ನನ್ನ ವೃತ್ತಿ, ಪ್ರವೃತ್ತಿ ಮತ್ತು ಅಭಿವ್ಯಕ್ತಿ. ಎಂದೇ—

ಜಡವೆಂಬುದೇನು ? ಸೃಷ್ಟಿಯಲಿ ಚೇತನ ಸುಪ್ತಿ
ಅಡಗಿ ನಿದ್ರಿಪುದಲ್ಲಿ ಚೈತನ್ಯದಗ್ನಿ
ಮಿಡಿಯೆ ಪರಸತ್ತ್ವ ವಿದ್ಯುದ್ದೀಪ್ತಿಯದನಾಗ
ನಡೆವುದದು ಜೀವಿವೊಲು ಮಂಕುತಿಮ್ಮ

—ಈ ಪದ್ಯ ಓದಿದಾಗ ಮನಸ್ಸು ಪರಮಾಣುಶಕ್ತಿಯತ್ತ ತಂತಾನೇ ಹೊರಳಿತು. ಐನ್‌ಸ್ಟೈನ್ ೧೯೦೫ರಲ್ಲಿ ಮಂಡಿಸಿದ ವಿಶೇಷ ಸಾಪೇಕ್ಷತಾ ಸಿದ್ಧಾಂತದ ಹೂರಣವನ್ನು ($E=mc^2$) ಈ ಪದ್ಯ ಪ್ರತಿಮಿಸುವ ಬಗೆ ಮನನೀಯವಾಗಿದೆ. ಕೇವಲ ೧ ಗ್ರಾಮ್ ವಸ್ತುವನ್ನು (ಕಲ್ಲು, ಮರ, ಲೋಹ, ನೀರು ಅಥವಾ ಯಾವುದೇ ರದ್ದಿ ಕೂಡ ಆಗಬಹುದು) ಸಂಪೂರ್ಣವಾಗಿ ನಿರ್ನಾಮಗೊಳಿಸಿದರೆ ಅದರಿಂದ ಊಹಾತೀತ ಶಕ್ತಿ ಉದ್ಭವಿಸುತ್ತದೆ, ಅಂದರೆ ಶಕ್ತಿ ($E$) ಬೇರೆ ಅಲ್ಲ, ವಸ್ತು ಅಥವಾ ರಾಶಿ ($m$) ಬೇರೆ ಅಲ್ಲ, ಇವನ್ನು ಕೊಂಡಿಸುವ ಬಂಧಕ ಅಥವಾ ಅಂಟು ವಿಶ್ವದಲ್ಲಿ ಗರಿಷ್ಠ ವೇಗವಾಗಿರುವ ಬೆಳಕಿನ ಸ್ಥಿರ ವೇಗ $c$ ಎಂಬುದು ಇದರ ಅರ್ಥ. ದಿನಾಂಕ ೬-೮-೧೯೪೫ರಂದು ಮೊದಲ ಪರಮಾಣು ಬಾಂಬ್ ಕೆಡೆದಾಗ ಮತ್ತು "ದಿವಿಸೂರ್ಯ ಸಹಸ್ರಸ್ಯ" (ಗೀತೆ) ಕಾವ್ಯತ್ವದಿಂದ ಭೌತತ್ವಕ್ಕೆ ಇಳಿದಾಗ (ಕಲ್ಪನೆ ವಾಸ್ತವತೆ ಆದಾಗ) ಮೇಲಿನ ಕಗ್ಗ ಅಧಿಕ ಅರ್ಥ ಮತ್ತು ಧ್ವನಿ ನೀಡಿತು. (ಪರಮಾಣು ಬಾಂಬ್ ತಾಡನೆಯ ನಗ್ನ ಮತ್ತು ಕ್ರೂರ ಸತ್ಯ ದರ್ಶನಕ್ಕಿಂತ ಮೊದಲೇ ಡಿವಿಜಿ ಈ ಪದ್ಯ ಬರೆದಿದ್ದರು ಎಂಬುದು ಗಮನಾರ್ಹ.) : "ಸಂಪೂರ್ಣ ಗೋಳದಲಿ ನೆನೆದೆಡೆಯೆ ಕೇಂದ್ರವಲ ಕಂಪಿಸುವ ಕೇಂದ್ರ ನೀಂ"—ಖಗೋಳವಿಜ್ಞಾನದ ಮೊದಲ ಪಾಠವನ್ನು ಇದಕ್ಕಿಂತ ಅಡಕವಾಗಿ ಮತ್ತು ಸುಂದರವಾಗಿ ನಿರೂಪಿಸುವುದು ಅಸಾಧ್ಯ.

ಆವ ಗಾಳಿಯದಾವ ಧೂಳ್ಕಣವ ಪೊತ್ತಿಹುದೊ
ಆವ ಧೂಳಿನೊಳಾವ ಚೈತನ್ಯ ಕಣವೋ
ಜೀವವಿಂತಜ್ಞಾತ ಸೂತ್ರದಾಟದ ಬೊಂಬೆ
ಭಾವಿಸಾ ಸೂತ್ರಗಳ ಮಂಕುತಿಮ್ಮ

ವಿಕಿರಣಪಟು ಧಾತುಗಳ (radioactive elements) ಅಸ್ತಿತ್ವಕ್ಕೂ ಜೀವವಿಕಾಸಕ್ಕೂ ಬರೆದಿರುವ ಸಂಕ್ಷೇಪ ಭಾಷ್ಯವಿದು. ಇಂಥ ವಾಗ್ರತ್ನಗಳನ್ನು ವಿಜ್ಞಾನಾಸಕ್ತರು ಮಾತ್ರವಲ್ಲ,

ಸಮಗ್ರವಾಗಿ, ಜೀವನಾಸಕ್ತರು ಯಾರು ಬೇಕಾದರೂ, ಈ ಮೇರು ಕೃತಿಯಿಂದ ಅಂತೆಯೇ ಇದರ ಸಂಗಾತಿ ಗ್ರಂಥವಾದ "ಮರುಳಮುನಿಯನ ಕಗ್ಗ"ದಿಂದ (೧೯೮೪) ಕೂಡ ಆಯ್ದು ಮೆಲುಕು ಹಾಕಿ ಕೃತಾರ್ಥರಾಗಬಹುದು. ಇಂಥ ಸಾರ್ವಕಾಲಿಕ ಮೌಲ್ಯಯುಕ್ತ ರಚನೆಗಳ ಹಿನ್ನೆಲೆಯ ಜೀವಂತ ಸತ್ತ್ವ ಮತ್ತು ನಿರ್ವಾಹಕ ತತ್ತ್ವ ಯಾವ ಬಗೆಯದು ? ನನಗೆ ಹೊಳೆದಿರುವ ತಾತ್ತ್ವಿಕ ಉತ್ತರ :

ಬುದ್ಧನೆಂಬವನೇನು ಸಾಮಾನ್ಯ ಪುರುಷನೇ?
ಬುದ್ಧಿ ಸಂಸ್ಕಾರಕ್ಕೆ ಹೃದಯ ಸಂವೇದನೆಯು
ಬದ್ಧಗೊಂಡಾಗ ಮೈವಡೆದ ಆದರ್ಶ ಪರಿ-
ಶುದ್ಧಾತ್ಮನೀತ ಕಾಣ್ ಅತ್ರಿಸೂನು

## ಡಿವಿಜಿ ದರ್ಶನ

೧೯೬೫-೬೯ ಅವಧಿಯಲ್ಲಿ ನಾನು ಬೆಂಗಳೂರು ನಿವಾಸಿ ಆಗಿದ್ದೆ. ಅಲ್ಲಿಯ ತನಕ ನನಗೆ ಡಿವಿಜಿಯವರ ವೈಯಕ್ತಿಕ ಪರಿಚಯವಿರಲಿಲ್ಲ. ಆ ಜ್ಞಾನಹಿಮಾಲಯದ ಅಸ್ತಿತ್ವ ಬಲುಹಿಂದಿನಿಂದಲೇ ತಿಳಿದಿತ್ತು. ಅದನ್ನು ಏರಲು ಸದಾ ಪ್ರಯತ್ನಶೀಲನಾಗಿದ್ದೆ. ಬೆಂಗಳೂರಿನಲ್ಲಿ ನನ್ನ ಮನೆ ಡಿವಿಜಿ-ಆಶ್ರಮದ ಸನಿಹದಲ್ಲೇ ಇತ್ತು. ಅರ್ಥಾತ್ ನನಗೆ ಸಾಲೋಕ್ಯ ಮತ್ತು ಸಾಮೀಪ್ಯ ಒದಗಿದ್ದುವು; ಸಾರೂಪ್ಯಗಳಿಸಲು ಅಧ್ಯಯನಮಗ್ನನಾಗಿದ್ದೆ; ಸಾಯುಜ್ಯ ಎಂದೂ ಐದಲಾಗದ ಆದರ್ಶವಷ್ಟೆ.

"ಮಂಕುತಿಮ್ಮನ ಕಗ್ಗ"ವನ್ನು ಆಮೂಲಾಗ್ರ ಅಭ್ಯಸಿಸಿ, ಅದರಲ್ಲಿ ಸಮೃದ್ಧವಾಗಿ ಸ್ಫುರಿಸುವ ಆಧುನಿಕ ವೈಜ್ಞಾನಿಕ ಪ್ರತಿಮೆಗಳನ್ನು ಗುರುತಿಸಿ ಟಿಪ್ಪಣಿ ಮಾಡಿಕೊಂಡು ಅವರಲ್ಲಿಗೆ ಹೋದೆ—ಅಳುಕು ಅಂಜಿಕೆ ಹಿಂಜರಿಕೆ ಸಹಿತ. "ನೀವು ಆಧುನಿಕ ವೈಜ್ಞಾನಿಕ ಪರಿಕಲ್ಪನೆಗಳನ್ನು ಚೆನ್ನಾಗಿ ಅರಿತವರಾಗಿರಬೇಕು?" ಎನ್ನುತ್ತ ನಾನು ಮಾಡಿಕೊಂಡಿದ್ದ ಟಿಪ್ಪಣಿಗಳನ್ನು ಓದಿ ಹೇಳಿದೆ.

ನನ್ನ ಈ ಅಯಾಚಿತ 'ಶಿಫಾರಸು' ಅವರಿಗೆ ಅಪ್ರಿಯವಾಗಲಿಲ್ಲವೆಂದು ಅವರು ಬೀರಿದ ಮಧುರ ಮಂದಹಾಸದಿಂದ ಮತ್ತು ಮುಂದೆ ಭೋರ್ಗರೆದ ನಗೆಯ ಹೊನಲಿನಿಂದ ಸ್ಪಷ್ಟವಾಯಿತು. ಅವರೆಂದರು : "ಅಪ್ಪಾ ! ನಾನು ಕಾಲೇಜು ಮೆಟ್ಟಲು ಕೂಡ ಹತ್ತಿದವನಲ್ಲ. ಆದರೆ ಜೀವನಧರ್ಮ ಮತ್ತು ದರ್ಶನಗಳಿಗೆ ಸಂಬಂಧಿಸಿದ ಸಮಸ್ತ ಚಿಂತನ ಪ್ರಕಾರಗಳಲ್ಲಿಯೂ ಆಸಕ್ತಿ ತಳೆದವನು. ಈ ದಿಶೆಯಲ್ಲಿ ನನ್ನ ಅನುಭವಸಾರವನ್ನು ಯಥಾಮತಿ ಯಥಾಶಕ್ತಿ ನಿರೂಪಿಸಿದ್ದೇನೆ, ಅಷ್ಟೆ. ಇದು ಆಧುನಿಕ ವಿಜ್ಞಾನರಂಗದಲ್ಲಿಯೂ ಪ್ರಸ್ತುತವಾಗಿದೆಯೆಂದರೆ ನನಗೆ ಆದ ಸತ್ಯದರ್ಶನ, ಭಾಗಶಃವೇ ಆದರೂ ಮತ್ತು ಅದನ್ನು ನಾನು ಅರಿತು ಅದಕ್ಕೆ ನೀಡಿರುವ ವ್ಯಾಖ್ಯಾನ ತಪ್ಪಾಗಿಲ್ಲವೆಂದು ತಿಳಿಯುತ್ತೇನೆ. ಜ್ಞಾನಮೇರು ಅಭಿಯಾನಕ್ಕೆ ಚಿಂತನೆಗಳು ಎಷ್ಟೋ ಮಾರ್ಗಗಳು ಅಷ್ಟು. ಈಗ, ದಾರ್ಶನಿಕ ಮತ್ತು ವಿಜ್ಞಾನಿ ತಮ್ಮ ತಮ್ಮ ಪಥಗಳಲ್ಲಿ ಆರೋಹಿಸುತ್ತಿರುವಾಗ, ಉಭಯರಿಗೂ ಗೋಚರವಾಗುವ ಕೆಲವು ಸಾಮಾನ್ಯ ದೃಶ್ಯಗಳಿರುತ್ತವೆ. ಈ ಕಾರಣದಿಂದಲೇ ತತ್ತ್ವಶಾಸ್ತ್ರ

ದಲ್ಲಿಯ ಒಂದು ದರ್ಶನ ವಿಜ್ಞಾನದಲ್ಲಿಯೂ, ವಿಲೋಮವಾಗಿ, ವಿಜ್ಞಾನದಲ್ಲಿಯ ಒಂದು ದರ್ಶನ ತತ್ತ್ವಶಾಸ್ತ್ರದಲ್ಲಿಯೂ ಧ್ವನ್ಯರ್ಥ ನೀಡುವುದಾಗಿದೆ.'' ಎಂದೇ

ಜ್ಞಾನಾಭಿಯಾನದಲಿ ಸಹಕಾರ ಹರಿಗೋಲು
ಮಾನಾಪಮಾನಗಳ ಲೆಕ್ಕಿಸದೆ ಮುನ್ನಡೆವು-
ದೇ ನಿನ್ನ ಹವಣೆರಲಿ ಸೋಲು ಗೆಲವುಗಳಿಂದ
ಧ್ಯಾನ ವಿಚಲಿತನಾಗದಿರೆಲೊ ಅತ್ರಿಸೂನು

ಇದೇ ವಿಷಯವನ್ನು ಚಂದ್ರಶೇಖರ್ ಜೊತೆ ಪ್ರಸ್ತಾವಿಸಿದೆ (ಜೂನ್ ೧೯೯೫). ಡಿವಿಜಿಯವರ ವಿವರಣೆಯನ್ನು ಅವರು ಪೂರ್ಣ ಅನುಮೋದಿಸಿದರು : ''ವಿಜ್ಞಾನ ಎನ್ನಿ, ತತ್ತ್ವಶಾಸ್ತ್ರ ಎನ್ನಿ, ಅಥವಾ ಬೇರಾವುದೋ ಚಿಂತನಪ್ರಕಾರ ಎನ್ನಿ—ಎಲ್ಲವುಗಳ ಮೂಲ ಮಾನವಮತಿ, ಪ್ರೇರಣೆ ನಿಸರ್ಗ. ಇನ್ನು ಈ ಮಾನಮತಿಯಾದರೂ ನಿಸರ್ಗದ ಒಂದು ಅಂಶ. ಆದ್ದರಿಂದ ವಿವಿಧ ಚಿಂತನ ಪ್ರಕಾರಗಳ ನಡುವೆ ಸಾಮ್ಯ ಮತ್ತು ಸಾಮರಸ್ಯ ಪ್ರಕಟವಾಗಬೇಕಾದದ್ದು ಸಹಜ. ಪ್ರಕಟವಾಗದಿದ್ದರೆ ಆ ಚಿಂತನೆಯ ಒಳಗೆ ಏನೋ ದೋಷ ಹುದುಗಿದೆ ಎಂದರ್ಥ'' ಎನ್ನುತ್ತ ಕೀಟ್ಸ್ ಕವಿಯ ಪದ್ಯ ಉಲ್ಲೇಖಿಸಿದರು :

ಸೌಂದರ್ಯವೇ ಸತ್ಯ
ಸತ್ಯವೇ ಸೌಂದರ್ಯ
ನಿನಗೆ ತಿಳಿದಿರುವುದೀ ಧರೆಯಲ್ಲಿ ಇಷ್ಟೇ
ತಿಳಿದಿರಬೇಕಾದದ್ದೂ ಇಷ್ಟೇ

ಕೊನೆಯದಾಗಿ ''ಮಂಕುತಿಮ್ಮ'' ಎಂದರೆ ಡಿವಿಜಿ; ''ಅತ್ರಿಸೂನು'' ಎಂದರೆ ಯಾರು?

ಅತ್ರಿಸೂನೆಂಬಾತ ಮಂಕುತಿಮ್ಮನಿಗೇನು
ಪುತ್ರನೇ ಭ್ರಾತೃವೇ ಕುಲಜನೇ ನಕಲಿಯೇ ?
ಚಿತ್ರಭಾನುವು ತಿಮ್ಮ ಬರಿಕಿರಿ ಸೊಡರು ಸೂನು
ಶತ್ರುಗಳುಭಯರೂ ತಮಂಧಕ್ಕೆ ಅತ್ರಿಸೂನು

**ಋಷಿವಾಕ್ಯ, ವಿಜ್ಞಾನಕಲೆ**
ಲೇಖಕ : ಜಿ. ಟಿ. ನಾರಾಯಣರಾವ್
ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ (೧೯೯೮)

# ವಿಜ್ಞಾನದ ಭಾಷೆ

## ವಿಜ್ಞಾನ

ವ್ಯವಸ್ಥೆಗೊಳಿಸಿದ ಅನುಭವವನ್ನು ಸಾಮಾನ್ಯವಾಗಿ ವಿಜ್ಞಾನವೆಂದು ಹೇಳುವುದಿದೆ. ಮಳೆ ಸುರಿಯುವಂಥ ಒಂದು ಚಿರಪರಿಚಿತ ಘಟನೆ, ಅದರಿಂದ ಲಭಿಸುವ ಅನುಭವವನ್ನು ಪರಿಶೀಲಿಸಿ. ಮೋಡಗಳ ರಚನೆ, ಚಲನೆ, ಮಳೆ ಸುರಿಯಲು ನೈಸರ್ಗಿಕ ಕಾರಣಗಳು ಮುಂತಾದ ವಿವರಗಳನ್ನು ಸಂಗ್ರಹಿಸಿ ಕ್ರಮಬದ್ಧವಾಗಿ ಅಳವಡಿಸಿ ಕಾರ್ಯಕಾರಣ ಸಂಬಂಧ ಅರಿತರೆ ಅದು ವ್ಯವಸ್ಥಿತ ಅನುಭವ ಎನಿಸುವುದು. ಆದ್ದರಿಂದ ಅಂಥ ತಿಳಿವಳಿಕೆ ವಿಜ್ಞಾನ. ವಿಜ್ಞಾನ ಪದದ ಅತಿ ಸಮೀಪ ವ್ಯಾಖ್ಯೆ ಈ ವಿವರಣೆ ಎಂದು ಬಲುಮಂದಿ ಪರಿಣತರು ಒಪ್ಪಿದ್ದಾರೆ. ಪರಿಪೂರ್ಣ ವ್ಯಾಖ್ಯೆ ನೀಡಲು ಸಾಧ್ಯವಿಲ್ಲ. ಕಾರಣ, ವಿಜ್ಞಾನದ ಉಗಮ ಪ್ರಗತಿ ಮತ್ತು ಪ್ರಕೃತ ಪರಿಸ್ಥಿತಿ ಮಾನವನ ವಿಕಾಸದೊಡನೆ ಬೆರೆತುಹೋಗಿವೆ. ಮಾನವ ಎಂದರೆ ಹೀಗೆ ಎಂದು ವ್ಯಾಖ್ಯಿಸಿ ಆತನ ರಚನೆ ಆಗಲಿಲ್ಲ. ಇದೇ ವಿಜ್ಞಾನದ ಅವಸ್ಥೆ ಕೂಡ.

ಮಾನವಜೀವನದಲ್ಲಿ ಲಭಿಸುವ ಅನುಭವಗಳು ಅಸಂಖ್ಯಾತ. ಆಕಾಶವಿದ್ಯಮಾನಗಳು, ಸಸ್ಯಪ್ರಪಂಚ, ಪ್ರಾಣಿ ಜಗತ್ತು, ಭೌತಬಲಗಳು, ರಾಸಾಯನಿಕ ಕ್ರಿಯೆಗಳು, ಆರೋಗ್ಯ ಪಾಲನೆ, ಸಾಮಾಜಿಕ ವ್ಯವಹಾರ—ಒಂದೇ ಎರಡೇ? ಇಲ್ಲೆಲ್ಲ ಅನುಭವವನ್ನು ವ್ಯವಸ್ಥೆಗೊಳಿಸಿ ಅಭ್ಯಸಿಸಿದಂತೆ ಹಲವಾರು ಚಿಂತನ ವಿಧಾನಗಳು ಸಹಜವಾಗಿ ಮೈದಳೆಯುತ್ತವೆ. ಚಂದ್ರನ ಕಲೆಗಳನ್ನು ತಿಳಿಯುವ ರೀತಿ ನೀರಿನ ರಚನೆಯನ್ನು ಅರಿಯುವ ವಿಧಾನದಿಂದ ಬೇರೆ ಆಯಿತು; ಇನ್ನು ಸಸ್ಯಗಳ ಬೆಳವಣಿಗೆ ಅಭ್ಯಸಿಸುವ ಕ್ರಮ ಇವೆರಡರಿಂದ ಭಿನ್ನವೇ. ಹೀಗೆ ಅನುಭವದ ವೈವಿಧ್ಯ ಅವಲಂಬಿಸಿ ಮತ್ತು ಅನುಸರಿಸಿ ವಿಜ್ಞಾನದ ವಿವಿಧ ವಿಭಾಗಗಳು ಜನಿಸಿ ಪ್ರವರ್ಧಿಸಿದುವು. ಇಂಥವು ಪರಸ್ಪರ ಅವಿಭಾಜ್ಯವೆಂದಾಗಲಿ, ಅಸಂಬಂಧಿತವೆಂದಾಗಲಿ ಸರ್ವತಂತ್ರಸ್ವತಂತ್ರಗಳೆಂದಾಗಲಿ ಭಾವಿಸಬೇಕಾಗಿಲ್ಲ. ಇವು ಪರಸ್ಪರ ಪೂರಕ ಪೋಷಕಗಳಾಗಿ ಮೊತ್ತದಲ್ಲಿ ಒಂದು ಅಖಂಡ ಸಂಗತ ಚಿತ್ರವನ್ನು ಪ್ರದರ್ಶಿಸುತ್ತವೆ.

ವಿಜ್ಞಾನ ಪದದೊಳಗೆ ಅಡಕವಾಗಿರುವ ವಿವಿಧ ವಿಷಯಗಳನ್ನು ತಜ್ಞರು ಹಲವಾರು ವಿಧಗಳಲ್ಲಿ ವಿಂಗಡಿಸಿ ಆ ವಿಭಾಗಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ. ಇಂಥ ಒಂದು ವಿಧಾನದಲ್ಲಿ ವಿಜ್ಞಾನವನ್ನು ಪ್ರಕೃತಿವಿಜ್ಞಾನ, ಸಮಾಜವಿಜ್ಞಾನ ಎಂದು ಮುಂತಾಗಿ ವಿಂಗಡಿಸಲಾಗಿದೆ. ಪ್ರಕೃತಿವಿಜ್ಞಾನದಲ್ಲಿ ಭೌತ, ರಸಾಯನ, ಪ್ರಾಣಿ, ಸಸ್ಯ, ಭೂಮಿ ಮುಂತಾದ ಪ್ರಕಾರಗಳು ಸೇರಿವೆ. ಗಣಿತವನ್ನು ಅಮೂರ್ತ ವಿಜ್ಞಾನವೆಂಬ ಬೇರೆ ಪ್ರಕಾರಕ್ಕೇ ಸೇರಿಸಿದ್ದಾರೆ. ಈ ಲೇಖನದಲ್ಲಿ ಇವೆರಡೂ ಪ್ರಕಾರಗಳನ್ನು ಸೇರಿಸಿಕೊಂಡು ಅದಕ್ಕೆ ವಿಜ್ಞಾನ ಶಬ್ದವನ್ನು ಸೀಮಿತಗೊಳಿಸಬಯಸುತ್ತೇನೆ. ಸಮಾಜವಿಜ್ಞಾನ ಪ್ರಕೃತ ಪರಿಶೀಲನೆಯ ವ್ಯಾಪ್ತಿಯಲ್ಲಿಲ್ಲ.

## ಭಾಷೆ

ಅನುಭವದಿಂದ ಮಾನವನ ಮನಸ್ಸಿನಲ್ಲಿ ಮೂಡುವ ಒಂದು ಪರಿಸ್ಥಿತಿ ಭಾವನೆ.

ಭಾವನೆ ಅಭಿವ್ಯಕ್ತವಾಗುವ ಮಾಧ್ಯಮಗಳು ಹಲವಾರು. ಅತಿಮರುಕದಿಂದ ಮನನೊಂದ ಕೋಮಲ ಮನಸ್ಸು ಕಾವ್ಯದ ಒಂದು ಶ್ಲೋಕವನ್ನೇ ಮಾಧ್ಯಮವಾಗಿ ಬಳಸಬಹುದು. ಅಪಮಾನದಿಂದ ರಕ್ಷಕರ ಅಸಹಾಯಕತೆಯಿಂದ ಕಂಗೆಟ್ಟ ನಾರಿ ದೇವರಲ್ಲಿ ಮೊರೆಯಿಡ ಬಹುದು. ಇವೆರಡೂ ಭಾಷೆಯ ಬೇರೆ ಬೇರೆ ರೂಪಗಳು. ಭಗ್ನಪ್ರಣಯಿ ಆರಾಧ್ಯಮೂರ್ತಿ ಯನ್ನು ಶಿಲ್ಪ ಮಾಧ್ಯಮದ ಮೂಲಕ ಕಂಡರಿಸಬಹುದು. ಮರದಿಂದ ತೊಟ್ಟು ಕಳಚಿ ಬೀಳುತ್ತಿದ್ದ ಸೇಬಿನ ಹಣ್ಣನ್ನು ಕಂಡಾತ ವಿಶ್ವದ ಒಂದು ಪ್ರಮುಖ ಗಣಿತ ಸೂತ್ರವನ್ನೇ ನಿರೂಪಿಸಬಹುದು. ಆದ್ದರಿಂದ ಅಭಿವ್ಯಕ್ತಿಯ ಮಾಧ್ಯಮ ಅನುಭವ ಮತ್ತು ಭಾವನೆಗಳ ಗುಣಲಕ್ಷಣಗಳನ್ನು ಅವಲಂಬಿಸಿದೆ. ಸಾಂಕೇತಿಕವಾಗಿ

ಅನುಭವ → ಭಾವನೆ → ಮಾಧ್ಯಮ

ಎಂದು ಬರೆಯಬಹುದು. ಒಬ್ಬನಿಂದ ಅಭಿವ್ಯಕ್ತವಾದ ಮಾಧ್ಯಮ ಇನ್ನೊಬ್ಬನಿಗೆ ಅನುಭವವಾಗುವುದರಿಂದಲೂ ವ್ಯಕ್ತಿ ಸಂಘಜೀವಿಯಾಗಿರುವುದರಿಂದಲೂ ಮೇಲಿನ ಉಕ್ತಿ ವಿಲೋಮಗತೀಯವೂ ಹೌದು. ಆದ್ದರಿಂದ

ಮಾಧ್ಯಮ → ಭಾವನೆ → ಅನುಭವ

ಎಂದು ನಿರೂಪಿಸಬಹುದು. ಅಥವಾ ಎರಡನ್ನೂ ಸಂಯೋಜಿಸಿ

ಅನುಭವ ⇄ ಭಾವನೆ ⇄ ಮಾಧ್ಯಮ

ಎಂದು ಒಟ್ಟಾಗಿ ಸಂಕೇತಿಸಬಹುದು. ಈ ಲೇಖನದಲ್ಲಿ ಭಾಷೆ ಎಂದರೆ ಮನಸ್ಸಿನ ಭಾವನೆ ಯನ್ನು ನಾಲಗೆಯ ವಿಶಿಷ್ಟ ರೀತಿಯ ಉಚ್ಚಾರಣೆಗಳಿಂದ ಶಬ್ದ ಮತ್ತು ವಾಕ್ಯರೂಪಗಳಲ್ಲಿ ಹೊರಪಡಿಸುವ ಮಾಧ್ಯಮ ಎಂಬ ಅರ್ಥದಲ್ಲಿ ಬಳಸುತ್ತೇನೆ. ಬರೆಹ ಇದೇ ಭಾಷೆಯ ಇನ್ನೊಂದು ರೂಪ ಎಂಬುದನ್ನು ಗಮನಿಸಬೇಕು.

ವಿಜ್ಞಾನ ಒಂದು ಮಾನಸಿಕ ಸಂವೇದನೆ. ಅದು ಅಭಿವ್ಯಕ್ತವಾಗಿರುವ ಮಾಧ್ಯಮ ಭಾಷೆ. ಈ ಭಾಷೆಯ ಉದ್ದೇಶ ಆಸಕ್ತ ವ್ಯಕ್ತಿಗಳಲ್ಲಿ ಪರಸ್ಪರ ಸಂವಹನದ ಏರ್ಪಾಡು. ಏಕಾಂತವಾಗಿ ಅಥವಾ ಶೂನ್ಯದಲ್ಲಿ ವಿಜ್ಞಾನ ಪ್ರವರ್ಧಿಸದು. ವ್ಯಕ್ತಿ ವ್ಯಕ್ತಿಗಳ ಅನುಭವ-ವಿನಿಮಯ ವಿಜ್ಞಾನವೃಕ್ಷದ ತಾಯಿಬೇರಿಗೆ ಗೊಬ್ಬರ ನೀರಿನಂತೆ. ಒಬ್ಬನ ಅನುಭವ ಇನ್ನೊಬ್ಬನಿಗೆ ಅದೇ ಅನುಭವವಾದಾಗ ಎಂದರೆ ಒಬ್ಬನ ಭಾಷೆ ಇನ್ನೊಬ್ಬನಿಗೆ ಅಸಂದಿಗ್ಧ ಅರ್ಥ ನೀಡಿದಾಗ ಅವರಲ್ಲಿ ಪರಸ್ಪರ ವಾಹಕತ್ವವಿದೆ ಎನ್ನುತ್ತೇವೆ—ಅವರು ಒಂದೇ ಆವೃತ್ತಿಯಲ್ಲಿದ್ದಾರೆ (frequency) ಎಂದರ್ಥ.

**ಭಾಷೆಯ ಉಗಮ**

ಆಕಾಶದಲ್ಲಿ ಬೆಳಗುತ್ತಿರುವ ಅಸಂಖ್ಯಾತ ದೀಪಗಳನ್ನು ಮನುಷ್ಯ ನೋಡಿದ. ಇದು ವಾಸ್ತವಿಕತೆ. ನೆಲದ ಮೇಲಿನ ದೀಪಗಳಿಗಿಂತ ಆಕಾಶದ ಈ ವಾಸ್ತವಿಕತೆ ಭಿನ್ನವಾಗಿರುವು ದರಿಂದ ಇದಕ್ಕೆ ಬೇರೆ ಹೆಸರು ಕೊಡುವುದು ಅರ್ಥಸ್ಪಷ್ಟತೆಯ ದೃಷ್ಟಿಯಿಂದ ಆವಶ್ಯಕ ವೆನ್ನಿಸಿತು. ಇವನ್ನು ನಕ್ಷತ್ರಗಳು ಎಂದು ಹೆಸರಿಸಲಾಯಿತು. ತೊಂದರೆ ಅಲ್ಲಿಗೇ ಮುಗಿಯ

ಲಿಲ್ಲ. ಹೀಗಾಗಿ ಸೂರ್ಯ, ಚಂದ್ರ, ಗ್ರಹ, ನಕ್ಷತ್ರ ಎಂಬ ಪದಗಳು ಅನಿವಾರ್ಯವೆನಿಸಿದುವು. ಎಂದರೇನಾಯಿತು? ವಾಸ್ತವಿಕತೆಯನ್ನು ಅತ್ಯಂತ ನಿಷ್ಕೃಷ್ಟವಾಗಿ ವಿವರಿಸಲು ಪದಗಳ (ಮಾತಿನ ಎಂಬ ಅರ್ಥದಲ್ಲಿ) ಉಗಮವಾಯಿತು. ಆದ್ದರಿಂದ ಪ್ರತಿಯೊಂದು ಪದವೂ ಅಥವಾ ಪದಸಮುದಾಯವಾದ ವಾಕ್ಯವೂ ವಾಸ್ತವಿಕತೆಯ ಸಾಂಕೇತಿಕ ರೂಪ. ಆದರೆ ಮುಂದೆ ಪದಗಳ ವಾಕ್ಯಗಳ ಧ್ವನ್ಯರ್ಥ ಮುಂತಾದ ಛಾಯೆಗಳು ಬೆಳೆದು ಬಂದಿರುವುದನ್ನು ಗಮನಿಸುವಾಗ ಒಂದು ಪದಕ್ಕೆ ಒಂದು ವಾಸ್ತವಿಕತೆ ಇದೆ ಎಂಬ ವಿಲೋಮೋಕ್ತಿ ತಾರ್ಕಿಕವಾಗಿ ನಿಲ್ಲದು. ವಾಸ್ತವಿಕತೆ-ಪದ ಇವುಗಳ ಸಂಬಂಧ ಒಂದು-ಒಂದು ಹೊಂದಾಣಿಕೆಯಾದರೆ ಪದ-ವಾಸ್ತವಿಕತೆ ಇವುಗಳ ಸಂಬಂಧ ಒಂದು-ಹಲವಾರು ಹೊಂದಾಣಿಕೆ. ಇಲ್ಲಿ ನಾವು ತಿಳಿಯುವ ಸಾರವಿಷ್ಟು—ವಿಜ್ಞಾನವಿಭಾಗ ಯಾವುದೇ ಇರಲಿ, ಅದರ ವಿಕಾಸದ ಮೊದಲ ಹಂತ ವಾಸ್ತವಿಕತೆ, ಎರಡನೆಯ ಹಂತ ಅದರ ಪ್ರತೀಕಾತ್ಮಕ (symbolic) ರೂಪ ಅಥವಾ ವಿಜ್ಞಾನದ ಭಾಷೆ.

**ವಿಜ್ಞಾನದ ಭಾಷೆಯ ಲಕ್ಷಣಗಳೇನು?**

ಇಂಗ್ಲಿಷಿನಲ್ಲಿ ವಿಜ್ಞಾನದ ಭಾಷೆಗೆ ಒಂದು ಶಿಷ್ಟರೂಪ ಬಂದಿರುವುದರಿಂದಲೂ ನಮ್ಮ ಅಭ್ಯಾಸ, ಚಿಂತನೆ ಮತ್ತು ಬೋಧನೆ ಅದೇ ಭಾಷೆಯಲ್ಲಿ ನಡೆಯುತ್ತಿರುವುದರಿಂದಲೂ ಅದರಲ್ಲಿರುವ ಶಿಷ್ಟಗ್ರಂಥಗಳ ಪರಿಶೀಲನೆ ಯುಕ್ತಮಾರ್ಗ. ಈ ಕ್ರಿಯೆಯಿಂದ ಇಂಗ್ಲಿಷಿನಲ್ಲಿ ವಿಜ್ಞಾನದ ಭಾಷೆಗೆ ಮೂರು ಬಾಹ್ಯಲಕ್ಷಣಗಳಿವೆಯೆಂದು ತಿಳಿಯುತ್ತೇವೆ—ವಿವರಣಾತ್ಮಕ, ಎಂದರೆ ವಿಷಯವನ್ನು ವಿವರಿಸುವ ವಾಕ್ಯಗಳ ಸಮೂಹ; ಪ್ರತೀಕಾತ್ಮಕ, ಎಂದರೆ ಶಿಷ್ಟ ಪ್ರತೀಕಗಳನ್ನೂ ಚಿಹ್ನೆಗಳನ್ನೂ ಬಳಸಿಕೊಂಡು ಭಾವನೆಗಳನ್ನು ಸಂಕ್ಷೇಪ ರೂಪಗಳಲ್ಲಿ ನಿರೂಪಿಸಿ ಮುಂದುವರಿಸಿಕೊಂಡು ಹೋಗುವ ವಿಧಾನ; ಚಿತ್ರಗಳು, ಎಂದರೆ ವಾಸ್ತವಿಕತೆಯ ತದ್ರೂಪಗಳು, ಆಲೇಖಗಳು, ರೇಖಾಕೃತಿಗಳು ಮುಂತಾದವು. ಇವು ಪರಸ್ಪರ ಪೂರಕ ಮತ್ತು ಪೋಷಕ. ಯಾವ ಲಕ್ಷಣ ಎಷ್ಟು ಪ್ರಮಾಣದಲ್ಲಿ ಇರಬೇಕು, ಎಲ್ಲಿ ಒಂದು ಲಕ್ಷಣದಿಂದ ಇನ್ನೊಂದು ಲಕ್ಷಣಕ್ಕೆ ಜಗುಳಬೇಕು ಎಂಬ ವಿವರಗಳು ಮುಖ್ಯವಾಗಿ ನಿರೂಪಿತ ವಿಷಯವನ್ನು ಅವಲಂಬಿಸಿವೆ.

ಅಂತೂ ಒಂದು ವಿಷಯ ಆನುಷಂಗಿಕವಾಗಿ ಸ್ಪಷ್ಟವಾದಂತಾಯಿತು. ವಿಜ್ಞಾನದ ಭಾಷೆಯನ್ನು ಲಿಪಿ ಮತ್ತು ಪ್ರತೀಕಗಳಿಂದ (ಇವೂ ಲಿಪಿಯಲ್ಲಿಯೇ ಸೇರಿವೆಯಷ್ಟೆ) ನಿರೂಪಿಸಬಲ್ಲೆವು ಮತ್ತು ಚಿತ್ರಗಳಿಂದ ರೂಪಿಸಬಲ್ಲೆವು. ಈ ಹೇಳಿಕೆ ವಿಜ್ಞಾನದ ಭಾಷೆಯ ಒಂದು ಲಕ್ಷಣವೆಂದು ತಿಳಿಯಬೇಕೇ ವಿನಾ ಅದರ ವ್ಯಾಖ್ಯೆ ಎಂದಲ್ಲ.

ಭಾಷಾ ಲಕ್ಷಣಗಳು, ಅಲ್ಲಿಯ ಅವಧಾರಣೆಗಳು ಹೇಗೆಯೇ ಇರಲಿ, ಭಾಷೆಯ ಬಳಕೆಯಲ್ಲಿ ತೋರಿಬರುವ ಮೂಲಸೂತ್ರಗಳಿಷ್ಟು:

(ಅ) ಪಾರಿಭಾಷಿಕ ಶಬ್ದಗಳ ಅರ್ಥನಿರೂಪಣೆ

(ಆ) ಪ್ರತೀಕಗಳು, ಸಂಕೇತಗಳು ಮುಂತಾದ ಸಂಕ್ಷೇಪ ರೂಪಗಳು ಪ್ರತಿನಿಧಿಸುವ ವೈಜ್ಞಾನಿಕ ಭಾವನೆಗಳ ಅಥವಾ ಪರಿಕರ್ಮಗಳ ವಿವರಣೆ

(ಇ) ಸ್ವತಸ್ಸಿದ್ಧಗಳ (ಆದ್ಯುಕ್ತಿಗಳ) ಮತ್ತು ಆಧಾರಭಾವನೆಗಳ ಸ್ಪಷ್ಟೀಕರಣ

(ಈ) ತಾರ್ಕಿಕ ಸಾಮಂಜಸ್ಯ
(ಉ) ಸಾಹಿತ್ಯ ಸೌಂದರ್ಯ

**(ಅ) ಪಾರಿಭಾಷಿಕ ಶಬ್ದಗಳು**

ಪ್ರಾಣಿವಿಜ್ಞಾನದ ಉದಾಹರಣೆ ತೆಗೆದುಕೊಳ್ಳೋಣ. ಅಳಿದ ಪ್ರಾಣಿಗಳ ಪಳೆಯುಳಿಕೆಗಳ ನೆರವಿನಿಂದಲೂ ಇರುವ ಪ್ರಾಣಿಗಳ ಅಧ್ಯಯನದಿಂದಲೂ ಆ ಪ್ರಪಂಚದ ಇತಿಹಾಸವನ್ನು ಶಾಸ್ತ್ರೀಯವಾಗಿ ಬರೆಯಲಾಗಿದೆ. ಅಲ್ಲಿ ವಾಸ್ತವಿಕ ಪರಿಸ್ಥಿತಿಯನ್ನು ಲಕ್ಷಿಸಿ ಮಾಡಿದ ವಿಶಾಲ ವಿಂಗಡಣೆ ಸಹಜವಾಗಿ ಉಳಿದುಕೊಂಡಿದೆ, ಶಾಸ್ತ್ರದ ಅಸ್ತಿಭಾರವಾಗಿದೆ. ಹೀಗೆ ಮಾಡದಿದ್ದ ಮೊದಲಿನ ಯಾವ ವಿಂಗಡಣೆಗಳೂ ಉಳಿಯಲಿಲ್ಲ—ಶಾಸ್ತ್ರದ ಬೆಳವಣಿಗೆಯ ಒಂದಲ್ಲ ಒಂದು ಹಂತದಲ್ಲಿ ಇಂಥ ಅಸಹಜ ವಿಂಗಡಣೆಗಳು ವಾಸ್ತವಿಕತೆಯಿಂದ ದೂರವಾದ ಫಲಿತಾಂಶಗಳನ್ನು ನೀಡಿ ವಿಂಗಡಣೆಗಳ ಅಸ್ತಿತ್ವವನ್ನೇ ಪ್ರಶ್ನಿಸಿ ಸುಧಾರಿತ ಮಾರ್ಗಕ್ಕೆ ಎಡೆ ಮಾಡಿದುವು. ಈ ತರ್ಕ ಎಲ್ಲ ಶಾಸ್ತ್ರಗಳಿಗೂ ಅನ್ವಯಿಸುತ್ತದೆ. ಪ್ರಾಣಿವಿಜ್ಞಾನದಲ್ಲಿರುವ ವಿಂಗಡಣೆಗಳ ಹೆಸರುಗಳನ್ನೇ ಪರಿಶೀಲಿಸಿ : ವಿಭಾಗ (ಫೈಲಮ್), ವರ್ಗ (ಕ್ಲಾಸ್), ಗಣ (ಆರ್ಡರ್), ವಂಶ (ಫ್ಯಾಮಿಲಿ), ಕುಲ (ಜಿನೇರಾ), ಜಾತಿ (ಸ್ಪೀಶೀಸ್). ಇವು ವಾಸ್ತವಿಕತೆಯ ಭಿನ್ನರೂಪಗಳ ಖಚಿತ ಪ್ರತಿಬಿಂಬಗಳು. ಈ ಶಾಸ್ತ್ರದ ಒಂದು ಬರೆಹದಲ್ಲಿ ವಂಶ, ಕುಲ ಅಥವಾ ವರ್ಗ, ಜಾತಿ ಎಂಬ ಪದಯುಗ್ಮಗಳನ್ನು ರೂಢಿಯ ಮಾದರಿಯಲ್ಲಿ ಪರ್ಯಾಯ ಪದಗಳಾಗಿ ಬಳಸಿದರೆ ಅರ್ಥಗೊಂದಲ ಉಂಟಾಗದಿರದು, ವ್ಯಕ್ತಿ ವ್ಯಕ್ತಿಗಳಲ್ಲಿ ಆಗ ಸಂವಹನ ಕಡಿದುಹೋಗುವುದು.

ಪಾರಿಭಾಷಿಕ ಶಬ್ದಗಳ ಆಯ್ಕೆಯಲ್ಲಿ ನಾವು ಗಮನಿಸುವ ಅಂಶಗಳಿಷ್ಟು :

(i) ರೂಢಿಯಲ್ಲಿ ನೀಹಾರಿಕಾರೂಪದಲ್ಲಿ ಅರ್ಥವಿರುವ ಪದಗಳನ್ನು ಆರಿಸಿಕೊಂಡು ವಿವರಣೆ ಉದಾಹರಣೆಗಳಿಂದ ಅವುಗಳ ಅರ್ಥವನ್ನು ನಿರ್ದಿಷ್ಟಗೊಳಿಸಿದೆ. ಉದಾಹರಣೆಗೆ ಭೌತವಿಜ್ಞಾನದಲ್ಲಿ ಫೋರ್ಸ್, ಪವರ್, ಎನರ್ಜಿ, ಸ್ಟ್ರೆಂಗ್ತ್ ಪದಗಳು. ನಮ್ಮ ಭಾಷೆಯಲ್ಲಿ ಇವು ಕ್ರಮವಾಗಿ ಬಲ, ಸಾಮರ್ಥ್ಯ, ಶಕ್ತಿ, ತ್ರಾಣ ಎಂಬುದಾಗಿ ಬಳಕೆಗೆ ಬಂದಿವೆ. ಸಾಮಾನ್ಯವಾಗಿ ಇವು ಪರ್ಯಾಯ ಪದಗಳಾದರೂ ಭೌತವಿಜ್ಞಾನದಲ್ಲಿ ಖಚಿತ ಭಾವನೆಗಳನ್ನು ಪ್ರತಿನಿಧಿಸುವುದರಿಂದ ಬೇರೆ ಬೇರೆ ಎಂದೇ ಪರಿಗಣಿಸಬೇಕಾಗುತ್ತದೆ. ಗುರುತ್ವಾಕರ್ಷಣ ಬಲ, ಅಶ್ವಸಾಮರ್ಥ್ಯ, ಪರಮಾಣು ಶಕ್ತಿ, ಉಕ್ಕಿನ ತ್ರಾಣ—ಇವು ಸರಿಯಾದ ಪ್ರಯೋಗಗಳು; ಗುರುತ್ವಾಕರ್ಷಣಶಕ್ತಿ, ಅಶ್ವಬಲ, ಪರಮಾಣು ತ್ರಾಣ, ಉಕ್ಕಿನ ಸಾಮರ್ಥ್ಯ ಇವು ತಪ್ಪು ಪ್ರಯೋಗಗಳು.

(ii) ರೂಢಿಯಲ್ಲಿ ಇಲ್ಲದ ಹೊಸ ಶಬ್ದಗಳ ನಿರ್ಮಾಣ ಅನಿವಾರ್ಯವಾದಾಗ ಮೊದಲ ಸಂಶೋಧಕ ಬಳಸಿದ ಪದವು ಭಾವನೆಯಷ್ಟೇ ತೀವ್ರತೆಯಿಂದ ಚಾಲ್ತಿಗೆ ಬಂದಿದೆ. $(a+ib)$ ಯನ್ನು ಇಮ್ಯಾಜಿನರಿ ನಂಬರ್ (ಊಹ್ಯ ಸಂಖ್ಯೆ) ಎಂದೂ ಭೂಮಿಯ ಉತ್ತರಕಾಂತ ಧ್ರುವವನ್ನು ಸೂಚಿಸುವ ಅಯಸ್ಕಾಂತದ ಕೊನೆಯನ್ನು ಉತ್ತರಧ್ರುವವೆಂದೂ ಕರೆಯುವುದು ಇಂದು ಒಪ್ಪಲಾಗದಿದ್ದರೂ ಮೊದಲ ತೀವ್ರತೆ ಇನ್ನೂ ಇಂಥ ಹಲವಾರು "ಅಪಪ್ರಯೋಗಗಳನ್ನು" ಪಾರಿಭಾಷಿಕ ಪದಗಳಾಗಿ ಉಳಿಸಿಕೊಂಡಿದೆ. ಆದರೆ ಇಂದು

ಹೀಗೆ ನಡೆಯುವುದು ವಿರಳ; ಪಾರಿಭಾಷಿಕ ಪದಗಳು ಆದಷ್ಟು ಭಾವಸೂಚಕವಾಗಿದ್ದರೆ ಒಳ್ಳೆಯದು. ಇಮ್ಯೂನೊಕೆಮಿಸ್ಟ್ರಿ, ಇಂಟರ್‌ಫೆರಾನ್, ಸೆಟ್, ಕ್ವೇಸಾರ್, ಮ್ಯಾಸ್ಕನ್—ಇವೆಲ್ಲ ಈ ರೀತಿ ಅಸ್ತಿತ್ವಕ್ಕೆ ಬಂದಿರುವ ಪದಗಳು. ಕನ್ನಡದಲ್ಲಿ ಕೆಲವು ಉದಾಹರಣೆ ಕೊಡಬಹುದು. ಲಾಗರಿತಮ್—ಲಘುಗಣಕ, ಆಕ್ಸಿಡೇಶನ್—ಉತ್ಕರ್ಷಣೆ, ಆರ್ಕೇಯನ್ ಈರಾ—ಆರ್ಷೇಯ ಕಲ್ಪ ಆಗಿರುವುದೂ ಯುರೇನಿಯಮ್, ಈಕ್ವಿಡೇ, ಆಲ್ಗೇ, ಕೇಂಬ್ರಿಯನ್ ಮುಂತಾದವು ಆಯಾ ರೂಪದಲ್ಲೇ ಉಳಿದಿರುವುದೂ ಕೆಲವು ನಿದರ್ಶನಗಳು.

(iii) ಒಂದು ಶಾಸ್ತ್ರದಲ್ಲಿ ಒಂದು ಪಾರಿಭಾಷಿಕ ಪದಕ್ಕೆ ಸಾಮಾನ್ಯವಾಗಿ ಒಂದೇ ಅರ್ಥ ಇದೆ. ಆ ಅರ್ಥ ಬರುವಲ್ಲೆಲ್ಲ ಅದೇ ಪದ ಕಡ್ಡಾಯವಾಗಿ ಆವರ್ತಿಸುತ್ತದೆ. ಪದೇ ಪದೇ ಒಂದೇ ಪದ ಬಂತಲ್ಲ, ಓದಲು ಇದು ಹಿತವಲ್ಲವಲ್ಲ ಎಂದು ಪರ್ಯಾಯ ಪದ ಬಳಸುವಂತಿಲ್ಲ. ಅರ್ಥಸ್ಪಷ್ಟತೆ ಮುಖ್ಯ, ಸಾಹಿತ್ಯದ ಮೆರುಗು ತರುವಾಯ ಎಂಬುದು ಇಂಥಲ್ಲಿ ಅಂತರ್ಗತ ಸೂತ್ರ. ಇನ್ನು ಒಂದೇ ಪದದ ಅಸಹ್ಯ ಪುನರಾವರ್ತನೆಯನ್ನು ನಿವಾರಿಸಲೇ ಬೇಕೆಂದಾದಾಗ ವಾಕ್ಯಗಳ ಪುನಾರಚನೆಯೇ ಯೋಗ್ಯ ಮಾರ್ಗ. ಈ ವಾದಸಮರ್ಥನೆಗಾಗಿ ಕನ್ನಡದ ಒಂದು ಉದಾಹರಣೆ ಪರಿಶೀಲಿಸಬಹುದು "**ನೀರಿನ** ರಾಸಾಯನಿಕ ಸಂಯೋಜನೆಯನ್ನು ಹೆನ್ರಿ ಕ್ಯಾವೆಂಡಿಷನು ೧೭೮೧ರಲ್ಲಿ ಕಂಡುಹಿಡಿದನು. **ನೀರು** ಜಲಜನಕ ಮತ್ತು ಆಮ್ಲಜನಕಗಳು ರಾಸಾಯನಿಕವಾಗಿ ಸೇರಿ ಉಂಟಾಗಿರುವ ಒಂದು ಸಂಯುಕ್ತ. **ನೀರಿನಿಂದಲೇ** ಮನುಷ್ಯನ ಆಗುಹೋಗುಗಳು ನಿರ್ಧರಿತವಾಗುತ್ತವೆ. **ನೀರಿನ** ಒಂದೊಂದು ಅಣುವಿನಲ್ಲೂ ಜಲಜನಕದ ಪ್ರತಿ ಎರಡು ಪರಮಾಣುಗಳಿಗೆ ಆಮ್ಲಜನಕದ ಒಂದು ಪರಮಾಣು ಸೇರಿದೆ. **ನೀರನ್ನು** ಕಾಸಿದರೆ ಉಗಿಯಾಗುತ್ತದೆ. ಉಗಿ **ನೀರಿನ** ಒಂದು ಸ್ಥಿತಿಯೇ ವಿನಾ ರಾಸಾಯನಿಕವಾಗಿ **ನೀರಿನಿಂದ** ಭಿನ್ನ ರಚನೆಯಲ್ಲ." ನೀರು ಶಬ್ದದ ಪುನರಾವರ್ತನೆ ಇಲ್ಲಿ ಎಷ್ಟು ಅಹಿತಕರವಾಗಿದೆಯೆಂದರೆ ಕುಹಕ ಮನಸ್ಸು ಈ ಶಬ್ದದ ಆವರ್ತನಸಂಖ್ಯೆ ಎಷ್ಟು, ವಿಭಕ್ತಿ ಪ್ರತ್ಯಯಗಳು ಹೇಗೆ ಬಂದಿವೆ ಎಂದು ಕೊಂಕು ದಾರಿಯಲ್ಲಿ ಹರಿದರೆ ಆಶ್ಚರ್ಯವಿಲ್ಲ. ಇದನ್ನು ನಿವಾರಿಸಲು 'ನೀರಿ'ನ ಬದಲು 'ಜಲ,' 'ವನ,' 'ಶರ,' 'ಅಂಬು' ಮುಂತಾದ ಪರ್ಯಾಯ ಪದಗಳನ್ನು ಬಳಸಿದರೆ ವಿಜ್ಞಾನ ಪ್ರಪಂಚದಲ್ಲಿ ಅದು ಅಪರಾಧವಾಗುತ್ತದೆ. ಪರಿಹಾರ ಒಂದೇ, ವಾಕ್ಯಗಳ ಪುನಾರಚನೆ : "ಹೆನ್ರಿ ಕ್ಯಾವೆಂಡಿಷ್ ನೀರಿನ ರಚನೆಯನ್ನು ಶೋಧಿಸಿದ (೧೭೮೧). ಅದರ ಒಂದೊಂದು ಅಣುವೂ ಜಲಜನಕದ ಎರಡು ಮತ್ತು ಆಮ್ಲಜನಕದ ಒಂದು ಪರಮಾಣುಗಳ ರಾಸಾಯನಿಕ ಸಂಯೋಗದಿಂದ ಉಂಟಾಗಿರುವ ಸಂಯುಕ್ತ. ಕಾಸಿದರೆ ಅದು ಉಗಿಯಾಗುತ್ತದೆ. ಆದ್ದರಿಂದ ಉಗಿ ನೀರಿನ ಒಂದು ರೂಪವೇ ವಿನಾ ಭಿನ್ನ ರಾಸಾಯನಿಕ ರಚನೆ ಅಲ್ಲ." ಮೊದಲಿನ ಸಲ ನೀರು ಶಬ್ದದ ಆವರ್ತನ ಸಂಖ್ಯೆ ೭ ಎರಡನೆಯ ಸಲ ೨, ಇಷ್ಟು ಮಾತ್ರವಲ್ಲ, "ನೀರಿನಿಂದಲೇ ಮನುಷ್ಯ ಜೀವನದ ಆಗು ಹೋಗುಗಳು ನಿರ್ಧರಿತವಾಗುತ್ತವೆ" ಈ ವಾಕ್ಯ ಎಷ್ಟೇ ಸತ್ಯವಾದರೂ ಪ್ರಸಕ್ತ ಪರಿಚ್ಛೇದದ ಸಂದರ್ಭದಲ್ಲಿ ಅನಾವಶ್ಯಕವಾದ್ದರಿಂದ ಇದನ್ನು ತೆಗೆದುಬಿಟ್ಟಿದ್ದೇವೆ.

(iv) ತೋರ್ಕೆಗೆ ಒಂದೇ ರೂಪದ ಪಾರಿಭಾಷಿಕ ಪದಗಳು ಭಿನ್ನಶಾಸ್ತ್ರಗಳಲ್ಲಿ ಭಿನ್ನ ಅರ್ಥಗಳನ್ನು ನೀಡುವ ಉದಾಹರಣೆಗಳಿವೆ. ಇಂಥ ಸಂದಿಗ್ಧ ಪರಿಸ್ಥಿತಿಗಳಲ್ಲಿ ಸಂದರ್ಭ ಗ್ರಹಿಸಿ ಅರ್ಥ ತಿಳಿಯಬೇಕು. ಅಂತಿಮವಾಗಿ ಪದವಾಗಲೀ ವಾಕ್ಯವಾಗಲೀ ಸಮಗ್ರ ಸೌಧದ

ಒಂದು ಅಂಶವಷ್ಟೆ. ಸೌಧದ ಸಾಮೂಹಿಕ ಪ್ರಜ್ಞೆಯಿಂದ ಭಿನ್ನವಾಗಿ ವಾಕ್ಯದ ಅಥವಾ ಪದದ ಅರ್ಥ ಗ್ರಹಿಸಬಾರದು. ಕೆಲವು ಉದಾಹರಣೆಗಳನ್ನು ನೋಡಬಹುದು:

**ನಾರ್ಮಲ್** ಟು ದಿ ಕರ್ವ್ ಎಟ್ ದಿ ಗಿವನ್ ಪಾಯಿಂಟ್ (ಗಣಿತ)

**ನಾರ್ಮಲ್** ಟೆಂಪರೇಚರ್ ಎಂಡ್ ಪ್ರೆಶರ್ (ಭೌತ)

**ನಾರ್ಮಲ್** ಸೊಲ್ಯೂಷನ್ (ರಸಾಯನ)

ಪದ ಒಂದೇ **ನಾರ್ಮಲ್**. ಆದರೆ ಭಿನ್ನ ಪರಿಸರಗಳಲ್ಲಿ ಭಿನ್ನ ಅರ್ಥ. ಇನ್ನು ಒಂದೇ ಪದ ಒಂದೇ ಶಾಸ್ತ್ರದಲ್ಲಿ ಸಂದರ್ಭ ಬೇರೆ ಆಗುವಾಗ ಬೇರೆ ಅರ್ಥವೀವ, ವಿರಳ ಉದಾಹರಣೆಗಳೂ ಇವೆ.

**ಪವರ್** ಆಫ್ ಎ ಪಾಯಿಂಟ್ ವಿತ್ ರೆಸ್ಪೆಕ್ಟ್ ಟು ಎ ಗಿವನ್ ಸರ್ಕಲ್

**ಪವರ್** ಆಫ್ $x$ ಇನ್ $x^n$

ಎರಡು **ಪವರ್**ಗಳೂ ಗಣಿತದಲ್ಲಿಯೇ ಬರುವವು. ವಿಜ್ಞಾನವೂ ಅದರ ಭಾಷೆಯೂ ಒಟ್ಟೊಟ್ಟಿಗೆ ಬೆಳೆದು ಬರುವಾಗ ಇಂಥ ಸನ್ನಿವೇಶಗಳು ಉಂಟಾಗುವುದು ಸಹಜ. ಅಂದ ಮಾತ್ರಕ್ಕೆ ಕನ್ನಡದಲ್ಲಿ ವಿಜ್ಞಾನಕ್ಕೆ ಒಂದು ಭಾಷೆಯನ್ನು ಅರಸುವಾಗ ಇವೇ ಕೊರತೆಗಳ ಪುನರಾವರ್ತನೆ ನಡೆಯಬೇಕೆಂದೇನೂ ಇಲ್ಲ. ಅವನ್ನು ನಿವಾರಿಸುವುದು ಜಾಣ್ಮೆ.

ಪಾರಿಭಾಷಿಕ ಪದಗಳನ್ನು ಕುರಿತು ಸಮಗ್ರವಾಗಿ ಇಷ್ಟು ಹೇಳಬಹುದು: ಅವು ವಿಜ್ಞಾನ ಸೌಧದ ಮೂಲ ಇಟ್ಟಿಗೆಗಳು. ಅವನ್ನು ಕುರಿತ ಖಚಿತ ತಿಳಿವಳಿಕೆ ಆ ವಿಭಾಗದಲ್ಲಿ ಪ್ರವೇಶಕ್ಕೆ ಪರವಾನಿಗೆ.

ಪಾರಿಭಾಷಿಕ ಪದಗಳ ಜೊತೆಗೆ ಪಾರಿಭಾಷಿಕ ಪದಪುಂಜಗಳನ್ನೂ ಹೆಸರಿಸಬೇಕು. ಕೆಳಗಿನ ಕೆಲವು ವಾಕ್ಯಗಳನ್ನು ಪರಿಶೀಲಿಸಿ :

(a) Produce the line *AB* to *C such that BC* = 2*AB* (Mathematics).

(b) When a body resting on another body *tends to move* it meets with an opposing force (Physics).

(c) Iodine water *contains* dissolved iodides (Chemistry).

(d) Since life is a *systematic phenomenon* it is obvious that in a *living system* the molecules and ions do not *dash about at random* bouncing off each other endlessly and aimlessly (Zoology).

(e) Occasionally one may find apparently *thrifty plants* in fence rows, or strong stalks *pushing up* through stone heaps or other rubbish piled foot-thick upon an old abandoned asparagus bed (Botany).

(f) A number of dietary and endocrine *factors* have a *pronounced effect* on the skeletal *system* especially during periods of rapid development (Medical Science).

ಇವುಗಳಲ್ಲಿ ಓರೆ ಅಕ್ಷರಗಳಿಂದ ಕಾಣಿಸಿರುವ ಪದಪುಂಜಗಳು ಆಯಾ ವಿಭಾಗಗಳನ್ನು ವಿವರಿಸುವಾಗ ಬರುವಂಥವು ; ಪಾರಿಭಾಷಿಕ ಪದಗಳಷ್ಟಲ್ಲದಿದ್ದರೂ ಇವುಗಳಿಗೂ ವಿಶಿಷ್ಟ

ಅರ್ಥಗಳು ಆಯಾ ವಿಭಾಗಗಳಲ್ಲಿವೆ. ಇವನ್ನು ಬಿಟ್ಟರೆ ಅಥವಾ ಬೇರೆ ಅರ್ಥದಲ್ಲಿ ಪ್ರಯೋಗಿಸಿದರೆ ಆ ವಿಜ್ಞಾನವಿಭಾಗವನ್ನು ಸರಿಯಾಗಿ ಗ್ರಹಿಸಲು ಸಾಧ್ಯವಾಗದು.

**(ಆ) ಪ್ರತೀಕಗಳು ಮತ್ತು ಸಂಕೇತಗಳು**

ಸಾಮಾನ್ಯವಾಗಿ $x, y, z, \xi, ,\eta, \zeta, \mu, \upsilon, \theta$ ಮುಂತಾದ ನಿರೂಪಣೆಗಳನ್ನು ಪ್ರತೀಕಗಳೆಂದೂ $+, -, \times,, \cup, V, = \Lambda, \Sigma$ ಮುಂತಾದವನ್ನು ಚಿಹ್ನೆಗಳೆಂದೂ $\sin, \log, \phi(n)$ ಮುಂತಾದವನ್ನು ಸಂಕೇತಗಳೆಂದೂ ಕರೆಯುತ್ತೇವೆ. ವಿಶಾಲಾರ್ಥದಲ್ಲಿ ಇವೆಲ್ಲವೂ ಪ್ರತೀಕಗಳೇ, ಕೆಲವೊಂದು ಭಾವನೆಗಳ ಅಥವಾ ಮಾತಿನ ಸಂಕ್ಷೇಪ ರೂಪಗಳು ಮಾತ್ರ. ವಿಜ್ಞಾನದ ಭಾಷೆ ಪ್ರಗತಿಗೊಂಡಂತೆ ತರ್ಕಸರಣಿ ಬಿಗಿಯಾದಂತೆ ಮಾತು, ಪ್ರತೀಕ, ಸಂಕೇತ ಮತ್ತು ಚಿಹ್ನೆಗಳ ಆದರ್ಶೀಕೃತ ರೂಪಕ್ಕೆ ಪರಿವರ್ತನೆಗೊಳ್ಳುವುದು ಅನಿವಾರ್ಯವಾಯಿತು.

ಐದು ಮಾವಿನಹಣ್ಣುಗಳಿರುವ ಬುಟ್ಟಿಯಿಂದ ಮೂರು ಹಣ್ಣುಗಳನ್ನು ತೆಗೆದರೆ ಆ ಬುಟ್ಟಿಯಲ್ಲಿ ಉಳಿದಿರುವ ಹಣ್ಣುಗಳು ಎಷ್ಟು ಎನ್ನುವ ಬಲು ಸರಳ ಸಮಸ್ಯೆಯನ್ನು ಬಿಡಿಸುವಾಗ;

ಸೂರ್ಯನಲ್ಲಿ ಜರಗುವ ಬೀಜಸಂಲಯನ ಕ್ರಿಯೆಯನ್ನು ವಿವರಿಸುವಾಗ; ಆಲ್ಕೊಹಾಲಿನ ರಾಸಾಯನಿಕ ರಚನೆಯನ್ನು ನಿರೂಪಿಸುವಾಗ;

ತಳಿವಿಜ್ಞಾನದಲ್ಲಿ ಅಂತರ್ಗತವಾಗಿರುವ ಜಟಿಲ ಸಮಸ್ಯೆಯನ್ನು ತಿಳಿಯಪಡಿಸುವಾಗ— ಪ್ರತೀಕಭಾಷೆಗೆ ಇರುವ ಸೌಕರ್ಯ ಎಲ್ಲರಿಗೂ ತಿಳಿದಿದೆ. ಅವನ್ನು ಮಾತಿನಲ್ಲಿ ಬರೆದು ತಾರ್ಕಿಕವಾಗಿ ಪುನಃ ಮಾತಿನಲ್ಲೇ ಮುಂದುವರಿಸುವುದಾದರೆ ಎದುರಾಗುವ ಸಮಸ್ಯೆಗಳೇನು ಎಂಬುದನ್ನು ಯಾವುದೇ ಸರಳ ಉದಾಹರಣೆಯನ್ನು ಪರಿಶೀಲಿಸುವುದರ ಮೂಲಕ ತಿಳಿಯಬಹುದು.

ಪ್ರತೀಕಗಳ ಆಯ್ಕೆಯಲ್ಲಿ ನಾವು ಗಮನಿಸುವ ಅಂಶಗಳಿಷ್ಟು :

(i) ಶಿಷ್ಟರೂಪಕ್ಕೆ ಬಂದಂಥವು ಅಂತಾರಾಷ್ಟ್ರೀಯವಾಗಿವೆ. ಉದಾಹರಣೆಗೆ $\sin x$, $H_2O, E = mc^2, \frac{dx}{dy}$ ಇಂಗ್ಲಿಷ್ ಭಾಷೆಯವನಿಗೂ ಜರ್ಮನ್ ಭಾಷೆಯವನಿಗೂ ಕನ್ನಡ ಭಾಷೆಯವನಿಗೂ ನೀಡುವ ಅರ್ಥ ಒಂದೇ. ಅವನ್ನು ಮಾತಿನಲ್ಲಿ ವಿವರಿಸುವಾಗ ಮಾತ್ರ ಆಯಾ ಭಾಷೆಯ ವ್ಯಕ್ತಿತ್ವ ಅನುಸರಿಸಿ ಬೇರೆ ಬೇರೆಯಾಗುತ್ತವೆ. ಇಲ್ಲಿ ಒಂದು ವಿಚಾರವನ್ನು ಪ್ರಾಸಂಗಿಕವಾಗಿ ಹೇಳಬೇಕು. ನಾವು ಇಂಗ್ಲಿಷ್ ಲಿಪಿ ಎಂದು ಕರೆಯುವ ಅಕ್ಷರಗಳು ವಾಸ್ತವಿಕವಾಗಿ ಗ್ರೀಕ್ ಲಿಪಿಯಿಂದ ರೂಪಗೊಂಡ ರೋಮನ್‌ಲಿಪಿ. ಯೂರೊಪಿನ ಎಲ್ಲ ರಾಷ್ಟ್ರಗಳೂ ಈ ಲಿಪಿಯ ಅಕ್ಷರಗಳನ್ನೂ ಅವುಗಳ ಉಚ್ಚಾರಣೆಗಳನ್ನೂ ಹೆಚ್ಚು ಕಡಿಮೆ ಏಕಪ್ರಕಾರವಾಗಿ ಉಳಿಸಿಕೊಂಡಿವೆ; ರಷ್ಯ, ಬಲ್ಗೇರಿಯಾಗಳು ಇದಕ್ಕೆ ಅಪವಾದ. ಅಕ್ಷರಗಳು ರೋಮನ್ ಲಿಪಿಯವೇ, ಇನ್ನಷ್ಟೂ ಇವೆ. ಆದರೆ ಉಚ್ಚಾರಣೆ ಬೇರೆ. ರೋಮನ್ H ರಷ್ಯನ್ ಉಚ್ಚಾರಣೆಯಲ್ಲಿ ಎನ್, ರೋಮನ್ B ರಷ್ಯನ್ ಉಚ್ಚಾರಣೆಯಲ್ಲಿ ವಿ, ರೋಮನ್ C ರಷ್ಯನ್ ಉಚ್ಚಾರಣೆಯಲ್ಲಿ ಎಸ್ ಇತ್ಯಾದಿಯಾಗಿ ಪರಿವರ್ತಿತವಾಗುತ್ತವೆ. ಆದರೆ ರಸಾಯನವಿಜ್ಞಾನದ ಪ್ರತೀಕ ಅಥವಾ ಸೂತ್ರ $H_2O$ವನ್ನು ರಷ್ಯದ ವಿಜ್ಞಾನಿಗಳು

ಸಹ ಎಚ್‌ಟೂಓ ಎಂದೇ ಓದುತ್ತಾರೆ; ಮತ್ತು ಇದು ನೀರಿನ ಅಣುಸೂತ್ರ ಎಂದೇ ತಿಳಿಯುತ್ತಾರೆ. ಆದ್ದರಿಂದ ಪ್ರತೀಕಗಳು ನಿಜವಾಗಿಯೂ ಅಂತಾರಾಷ್ಟ್ರೀಯವಾಗಿವೆ.

(ii) ಶಿಷ್ಟರೂಪಕ್ಕೆ ಬಂದಂಥವು ವಿಜ್ಞಾನದ ಎಲ್ಲ ವಿಭಾಗಗಳಲ್ಲಿಯೂ ಎಲ್ಲ ಸಂದರ್ಭಗಳಲ್ಲಿಯೂ ಒಂದೇ ಅರ್ಥ ನೀಡುವುವು. $H_2O$ ಪ್ರತೀಕ ರಸಾಯನ, ಭೌತ, ಪ್ರಾಣಿ ಮುಂತಾದ ಎಲ್ಲ ವಿಭಾಗಗಳಲ್ಲಿಯೂ ಎಲ್ಲ ಸಂದರ್ಭಗಳಲ್ಲಿಯೂ ನೀರಿನ ಒಂದು ಅಣುವನ್ನು ಪ್ರತಿನಿಧಿಸುತ್ತದೆ. ಇಂಥವು ನಿಜಕ್ಕೂ ಅಂಕಿತ ನಾಮಗಳು.

(iii) ಶಿಷ್ಟರೂಪಕ್ಕೆ ಬರದೇ ಇರುವಂಥವುಗಳ ಅರ್ಥಸ್ಪಷ್ಟತೆಯನ್ನು. ಪಾರಿಭಾಷಿಕ ಪದಗಳನ್ನು ಕುರಿತು ಮಾಡಿದಂತೆ ನಿಗದಿಸಬಹುದು. ಚುಕ್ಕಿಯ ಉದಾಹರಣೆ ನೋಡಬಹುದು. ಅದು ಬಿಂದು (ಎಂದರೆ ಆಯಾಮರಹಿತ ಆದರ್ಶ) ಆಗಬಹುದು, ದಶಮಾಂಶ ಸೂಚಕವಾಗಬಹುದು, ಗುಣಾಕಾರ ಸೂಚಕವಾಗಬಹುದು, ಇತ್ಯಾದಿ.

ಪ್ರತೀಕ ಮತ್ತು ಸಂಕೇತಗಳನ್ನು ಕುರಿತು ಸಮಗ್ರವಾಗಿ ಇಷ್ಟು ಹೇಳಬಹುದು: ಅವು ವಿಜ್ಞಾನಭಾಷೆಯ ಆದರ್ಶರೂಪಗಳು, ಅಂತಾರಾಷ್ಟ್ರೀಯ, ವಾಸ್ತವಿಕತೆಗೆ ಸಮೀಪತಮ ನಿರೂಪಣೆ.

ಈ ಸೌಲಭ್ಯಗಳಿಗೆ ನಾವು ಸಹಜವಾಗಿ ತೆರಬೇಕಾದ ಶುಲ್ಕ ಇವುಗಳ ದೃಢತೆಯಲ್ಲಿ ಅಡಕವಾಗಿದೆ. ಸಾಕಷ್ಟು ಶಿಕ್ಷಣ, ಪೂರ್ವಸಿದ್ಧತೆ ಇಲ್ಲದಿರುವವರಿಗೆ ಪ್ರತೀಕಭಾಷೆ ರಂಗವಲ್ಲಿಯಂತೆಯೋ ಚೀನೀ ಲಿಪಿಯಂತೆಯೋ ಕಂಡರೆ ಆಶ್ಚರ್ಯವಿಲ್ಲ. ಪ್ರತೀಕ ಭಾಷೆ ಸಹಜ ಭಾಷೆಗಿಂತ (ಆಡುನುಡಿ, ಬರೆವ ನುಡಿ) ತೀರ ಭಿನ್ನವಾಗಿದೆ. ಪ್ರತೀಕ, ಸಂಕೇತ, ಸಂಜ್ಞೆಗಳು ಪಾರಿಭಾಷಿಕ ಪದಗಳನ್ನು ಬೆಸೆದು ಬಂಧಿಸುವ ಗಾರೆ.

### (ಇ) ಆದ್ಯುಕ್ತಿಗಳು ಮತ್ತು ಆಧಾರ ಭಾವನೆಗಳು

ಯಾವ ವಿಜ್ಞಾನಗ್ರಂಥವನ್ನೂ ಜ್ಞಾನದ ಪ್ರಾರಂಭದಿಂದ—ಎಂದರೆ ಆದಿಮಾನವನ ಕಾಲದಿಂದ—ತೊಡಗಿ ಬರೆಯಲಾಗುವುದಿಲ್ಲ. ಒಂದು ಮಜಲನ್ನು ಅಂಗೀಕರಿಸಿ ಅಲ್ಲಿಂದ ಮುಂದೆ ವಿಷಯಪ್ರತಿಪಾದನೆ ಮಾಡಬೇಕು. ಹೀಗೆ ಮಾಡುವಾಗ ಎರಡು ಸನ್ನಿವೇಶಗಳು ತಲೆದೋರುತ್ತವೆ: (i) ತರ್ಕದಿಂದ ಅಥವಾ ಪ್ರಯೋಗದಿಂದ ಸಾಧಿಸಲಾಗದ ಆದರೆ ಎಲ್ಲರಿಗೂ ತಿಳಿದಿರುವ ಅಂಶಗಳು—ಇವು ಸ್ವಯಂವೇದ್ಯ ಸಂಗತಿಗಳು ಅಥವಾ ಆದ್ಯುಕ್ತಿಗಳು; ಒಂದು ರೀತಿಯಲ್ಲಿ ಅವಿಭಾಜ್ಯ ಮೂಲಭಾವನೆಗಳು; ಪಾರಿಭಾಷಿಕ ಪದಗಳ ಬಳಕೆ ಇವುಗಳಲ್ಲಿ ಪ್ರಥಮವಾಗಿ ನಡೆದಿರುತ್ತದೆ.

(ii) ವಾಸ್ತವಿಕತೆ ತಿಳಿದಿದೆ; ಅದರ ಸುಬದ್ಧ ಸಂಕ್ಷಿಪ್ತ ಭಾಷ್ಯದ ಹೆಸರು ಸಿದ್ಧಾಂತ. ಸಿದ್ಧಾಂತವನ್ನು ಪಡೆಯುವ ಮಾರ್ಗದಲ್ಲಿ ದತ್ತಾಂಶಗಳ ಸಂಗ್ರಹಣೆ, ಪಾರಿಭಾಷಿಕ ಪದಗಳ ಸ್ಪಷ್ಟೀಕರಣ, ಆದ್ಯುಕ್ತಿಗಳ ನಿರ್ಧಾರ ಎಲ್ಲ ಕ್ರಮಬದ್ಧವಾಗಿ ನೆರವೇರಿದ ತರುವಾಯ ಒಂದು ಊಹೆಯನ್ನು ಮಾಡಬೇಕಾಗುತ್ತದೆ. ಇದೇ ಆಧಾರಭಾವನೆ. ಈ ತೀರ್ಮಾನ ಲಭಿಸಿದ್ದು ಈ ಕಾರಣದಿಂದಾಗಿರಬಹುದೋ ಎಂಬ ಊಹೆಯೇ ಆಧಾರ ಭಾವನೆ.

ಗ್ರಂಥಕಾರ ನೂತನ ಸಂಶೋಧನೆಯೊಂದನ್ನು ಮಾಡುತ್ತಿಲ್ಲ ಎಂದು ಮರೆಯಬಾರದು. ಆದ್ದರಿಂದ ಅವನು ವಿವರಿಸಲಿರುವ ಸಿದ್ಧಾಂತ ಕುರಿತು ಆದ್ಯುಕ್ತಿಗಳ ಹಾಗೂ

ಆಧಾರಭಾವನೆಗಳ ಖಚಿತ ನಿರೂಪಣೆ ಬಲು ಅವಶ್ಯ. ಇವುಗಳ ಆಯ್ಕೆಯಲ್ಲಿ ನಾವು ಗಮನಿಸುವ ಅಂಶಗಳಿಷ್ಟು :

(i) ಆದ್ಯುಕ್ತಿಗಳು ಆ ವಿಷಯದಲ್ಲಿ ಆಸಕ್ತರಿಗೆ ಸ್ಪಷ್ಟವಾಗಿ ವೇದ್ಯವಾಗಬೇಕು. ಅವನ್ನು ತರ್ಕದಿಂದ ಸಾಧಿಸಲು ಸಾಧ್ಯವಿಲ್ಲ.

(ii) ಒಂದು ವಿಷಯದ ತಳಹದಿಯ ಅತಿ ಮುಖ್ಯಾಂಶ ಆದ್ಯುಕ್ತಿಗಳು. ''ಇವಿಷ್ಟು ನನ್ನ ಬತ್ತಳಿಕೆಯಲ್ಲಿರುವ ಬಾಣಗಳು'' ಎಂದಂತೆ. ವಿಷಯ ನಿರೂಪಣೆಯಲ್ಲಿ ಇವೇ ಪುನಃ ಪುನಃ ಪ್ರಯೋಗವಾಗುತ್ತವೆ.

(iii) ಅತ್ಯಂತ ಕನಿಷ್ಠ ಸಂಖ್ಯೆಯ ಆದ್ಯುಕ್ತಿಗಳನ್ನು ಆಧರಿಸಿ ರಚಿಸಿದ ಸಿದ್ಧಾಂತ ತಾರ್ಕಿಕವಾಗಿ ಅತಿಸುಭದ್ರ ಎನಿಸುವುದು.

(iv) ವಾಸ್ತವಿಕತೆಯನ್ನು ಯಥಾವತ್ತಾಗಿ ವಿವರಿಸುವ ಭಾಷ್ಯ ಸಿದ್ಧಾಂತ. ನಡೆವ ದಾರಿಯ ಗುರುತುಗಲ್ಲುಗಳು: ಪ್ರಯತ್ನ–ವೈಫಲ್ಯ–ಪ್ರಯತ್ನ–ವೈಫಲ್ಯ–ಪ್ರಯತ್ನ .... –ಜಯ. ಜಯ. ಅಂದರೆ ಸಮರ್ಪಕ ಸಿದ್ಧಾಂತ ಪಡೆಯುವವರೆಗೂ ಈ ಶ್ರೇಣಿ ಸಾಗಿಯೇ ಇರುವುದು. ಸಂಶೋಧಕ ತುಳಿಯುವ ಹೊಸ ಹಾದಿಯಲ್ಲಿ ಪ್ರತಿಸಲವೂ ಪಾರಿಭಾಷಿಕ ಪದಗಳೂ ಆಧಾರಭಾವನೆಗಳೂ ಪರಿಷ್ಕೃತವಾಗಿ ಸಿದ್ಧಾಂತರೂಪ ತಳೆಯುತ್ತವೆ. ವಿಜ್ಞಾನದ ಭಾಷೆಯೂ ನಿಖರವಾಗುತ್ತದೆ.

ಆದ್ಯುಕ್ತಿಗಳು ಮತ್ತು ಆಧಾರಭಾವನೆಗಳನ್ನು ಕುರಿತು ಸಮಗ್ರವಾಗಿ ಇಷ್ಟು ಹೇಳಬಹುದು : ಮೊದಲಿನವು ಕಟ್ಟಡದ ಅಸ್ತಿಭಾರವಾದರೆ ಎರಡನೆಯವು ಅದರ ಆಲೇಖ್ಯ. ಶಾಸ್ತ್ರದ ತಾರ್ಕಿಕ ಸುಭದ್ರತೆಗೆ ಆದ್ಯುಕ್ತಿಗಳ ನಿಷ್ಕೃಷ್ಟ ನಿರೂಪಣೆ ಅತ್ಯಗತ್ಯ.

**(ಈ) ತಾರ್ಕಿಕ ಸಾಮಂಜಸ್ಯ**

ನಿಸರ್ಗದ ಒಂದೊಂದು ಘಟನೆಯಲ್ಲೂ ಅತ್ಯಾಶ್ಚರ್ಯಕರವಾಗಿರುವಂಥ ತಾರ್ಕಿಕ ಸಾಮಂಜಸ್ಯವಿದೆ. ಇದರ ಅರ್ಥವಿಷ್ಟು : ಸೂರ್ಯಚಂದ್ರರ ಚಲನವಲನಗಳನ್ನು ನಕ್ಷತ್ರಗಳ ಮುನ್ನೆಲೆಯಲ್ಲಿ ಪರಿಶೀಲಿಸೋಣ. ಮುಂದೆ ಗ್ರಹಗಳನ್ನು ಇವುಗಳ ಯಾದಿಗೆ ಸೇರಿಸೋಣ. ದೀರ್ಘಕಾಲದ ವೀಕ್ಷಣೆ ಮತ್ತು ತರ್ಕದಿಂದ ಇವುಗಳ ವರ್ತನೆಯನ್ನು ಅರ್ಥವಿಸಿಕೊಂಡಿದ್ದೇವೆಂದು ಭಾವಿಸೋಣ. ಆದ್ದರಿಂದ ಈ ಘಟನೆಗಳನ್ನು ಕುರಿತು ವೈಜ್ಞಾನಿಕವಾಗಿ ಕಾರ್ಯಕಾರಣ ಸಂಬಂಧ ನಿರೂಪಿಸಲು ಸಮರ್ಥರಾಗಿದ್ದೇವೆ, ಅಥವಾ ಒಂದು ನಿರ್ದಿಷ್ಟ ಬೌದ್ಧಿಕ ಚೌಕಟ್ಟಿನೊಳಗೆ—ವಿಜ್ಞಾನದ ಭಾಷೆಯಲ್ಲಿ—ಸೂರ್ಯ ಚಂದ್ರ ಮುಂತಾದವುಗಳ ಯಥಾರೂಪ ಚಿತ್ರಣ ಮಾಡಿ ಆ ಘಟನೆಗಳನ್ನು ಪೂರ್ಣವಾಗಿ ವಿವರಿಸಲು ಶಕ್ತರಾಗಿದ್ದೇವೆ ಎಂದಾಯಿತು. ಈಗ ಹೊಸತೊಂದು ಸನ್ನಿವೇಶ ಒದಗಿತೆಂದು ಊಹಿಸೋಣ—ಇದುವರೆಗೆ ಪರಿಶೀಲಿಸದ ಆಕಾಶಕಾಯವೊಂದು ನಮ್ಮ ವೀಕ್ಷಣೆಗೆ ಲಭಿಸಿದೆ, ನಮ್ಮ ಬೌದ್ಧಿಕ ರಚನೆಯಾದ ಚೌಕಟ್ಟಿನೊಳಗೆ ಇದಕ್ಕೆ ದೊರೆಯುವ ಸ್ಥಾನಕ್ಕೂ ವಾಸ್ತವಿಕತೆಗೂ ಹೊಂದಾಣಿಕೆ ಇದ್ದರೆ ನಾವು ಮಂಡಿಸಿರುವ ವಾದ ತಾರ್ಕಿಕವಾಗಿ ಸಮಂಜಸವೆಂದೆನ್ನಿಸುವುದು. ಇಂಥ ಸಾಮಂಜಸ್ಯವಿರದಿದ್ದರೆ? ಆಗ ಈ ತರ್ಕ ಪ್ರತಿಪಾದಿಸುವ ಸಿದ್ಧಾಂತ ಬುಡಭದ್ರವಿಲ್ಲದ ಸೌಧದಂತೆ. ಇದು ಬಲು ಕಾಲ ನಿಲ್ಲದು. ಎಲ್ಲಿ ತಾರ್ಕಿಕ ಅಸಾಮಂಜಸ್ಯ

ವಿರುವುದೋ ಅಲ್ಲಿ ಒಂದೋ ನಮ್ಮ ತಿಳಿವಳಿಕೆ ಅಪರಿಪೂರ್ಣವಾಗಿದೆ ಅಥವಾ ನೂತನ ಸನ್ನಿವೇಶವೊಂದು ತಲೆದೋರಿದೆ ಎಂದು ತೀರ್ಮಾನಿಸಬೇಕು. ಬುಧಗ್ರಹದ ಪುರರವಿ ಬಿಂದುವಿನ ಚಲನೆ ಸೌರವ್ಯೂಹದ ಗಣಿತ ರಚನೆಯಲ್ಲಿ ಹಣುಕಿದ ಒಂದು ಅಸಾಮಂಜಸ್ಯ. ಅದನ್ನು ತಾರ್ಕಿಕವಾಗಿ ನೆಲೆಗೊಳಿಸಲು ನೂತನ ಸಿದ್ಧಾಂತವೇ ಬರಬೇಕಾಯಿತಷ್ಟೆ.

ಪ್ರತಿಯೊಂದು ಸಿದ್ಧಾಂತವೂ ತಾರ್ಕಿಕವಾಗಿ ಸಮಂಜಸವಾಗಿದೆ, ಸರಿ. ಇದರ ವಿಲೋಮ—ತಾರ್ಕಿಕ ಸಾಮಂಜಸ್ಯವಿರುವ ಪ್ರತಿಯೊಂದು ವಾದವೂ ಸಿದ್ಧಾಂತ (ಎಂದರೆ ವಾಸ್ತವಿಕತೆಗೆ ಬರೆದ ಭಾಷ್ಯ)—ಸಾಧುವಾಗಿರಬೇಕಾಗಿಲ್ಲ. ಕವಿ, ಕಾದಂಬರಿಕಾರರು ರಚಿಸುವ ಲೋಕಗಳಲ್ಲಿಯೂ ತಾರ್ಕಿಕ ಸಾಮಂಜಸ್ಯವಿರಲೇಬೇಕು; ಆದರೆ ಕಾಲ್ಪನಿಕ ಚೌಕಟ್ಟಿನೊಳಗೆ ಸಮಂಜಸವಾಗಿರುವ, ನಮ್ಮ ಬುದ್ಧಿಗೆ ಅದ್ಭುತ ಸಂತೋಷ ಸಂತೃಪ್ತಿ ನೀಡುವ ತರ್ಕಶುದ್ಧ ವಾದಗಳೆಲ್ಲವೂ ಸಿದ್ಧಾಂತಗಳೇ ಎಂದು ಹೇಳಲಾಗುವುದಿಲ್ಲ. ವಸ್ತುವಿಗೆ ಯಾವುದೋ ಗುಣವಿದೆ ನಿಜ, ಆದರೆ ಆ ಗುಣವೇ ಆ ವಸ್ತುವಾಗದು. ಇದರ ಕಾರಣ ಸುಲಭ. ವಾಸ್ತವಿಕತೆಯಲ್ಲಿ ತಾರ್ಕಿಕ ಸಾಮಂಜಸ್ಯವಿದೆ; ಆದ್ದರಿಂದ ಅದರ ಭಾಷ್ಯ ವಾದ ಸಿದ್ಧಾಂತದಲ್ಲಿ ತಾರ್ಕಿಕ ಸಾಮಂಜಸ್ಯವಿರಲೇಬೇಕು. ಆದರೆ ವಿಲೋಮೋಕ್ತಿ ಒಂದು ಬೌದ್ಧಿಕ ಕ್ರಿಯೆ. ಇಲ್ಲಿ ವಾಸ್ತವಿಕತೆ ಹೀಗೆಯೇ ಇರಬೇಕೆಂಬ ಪ್ರೊಕ್ರುಸ್ಟಿಯನ್ ಶಯ್ಯಾ ವಿಧಿ ನಿಲ್ಲದು.

ತಾರ್ಕಿಕ ಅಸಾಮಂಜಸ್ಯ ತಲೆದೋರಲು ಕೆಲವು ಕಾರಣಗಳು : (i) ಪಾರಿಭಾಷಿಕ ಪದಗಳು, ಆದ್ಯುಕ್ತಿಗಳು, ಆಧಾರ ಭಾವನೆಗಳು ಇವುಗಳ ಮೇಲಿನ ಅಪ್ರಬುದ್ಧ ಹಿಡಿತ. (ii) ಸುಲಭ ಸಾರ್ವತ್ರೀಕರಣದ ಅತ್ಯಾಸೆ. (iii) ಸಾಕಷ್ಟು ಪುರಾವೆಗಳ ಸಂಗ್ರಹ ವಿಶ್ಲೇಷಣೆ ಮಾಡದೇ ಸಿದ್ಧಾಂತದೆಡೆಗೆ ಧಾವಿಸುವ ತವಕ.

### (ಉ) ಸಾಹಿತ್ಯಸೌಂದರ್ಯ

ಅಮೂರ್ತ ಗಣಿತದ ಭಾವನಾಲೋಕದಿಂದ ತೊಡಗಿ ಪ್ರಾಣಿವಿಜ್ಞಾನದ ರಕ್ತಮಾಂಸ ಮೂಳೆಗಳ ವಾಸ್ತವಿಕತೆಯವರೆಗೂ ಪ್ರತಿಯೊಂದು ಶಿಷ್ಟ ಮತ್ತು ಇಂಗ್ಲಿಷ್ ಗ್ರಂಥದಲ್ಲಿಯೂ ಎದ್ದುತೋರುವ ಒಂದು ಗುಣ ಸಾಹಿತ್ಯಸೌಂದರ್ಯ. ಓದುಗನಿಗೆ ವಿಜ್ಞಾನದ ಆ ವಿಭಾಗ ತಿಳಿದಿರಲಿ ತಿಳಿಯದಿರಲಿ ಮಾತಿನ ಓಘ, ಪದಗಳ ಆಯ್ಕೆ, ಜೋಡಣೆ, ಉದಾಹರಣೆಗಳ ಸರಣಿ ಮುಂತಾದವುಗಳಲ್ಲಿರುವ ಕಲಾಪ್ರಜ್ಞೆ ಅವನನ್ನು ಸೆರೆಹಿಡಿಯದಿರದು. ವಾಸ್ತವಿಕತೆ ಸೌಂದರ್ಯಯುಕ್ತವಾದುದು. ಅದನ್ನು ವಿವರಿಸುವ ಭಾಷೆ ಮಾನವ ಕೃತವಾದದ್ದರಿಂದ ಅದು ಸಹಜವಾಗಿಯೇ ಸೌಂದರ್ಯಯುಕ್ತವಾಗಿರುವುದೆಂದು ಧೈರ್ಯವಾಗಿ ಸಾರುವಂತಿಲ್ಲ. ಕನ್ನಡಿಯ ತಳ ಏರುಪೇರಿನಿಂದ ಕೂಡಿದ್ದರೆ ಸುಂದರ ವದನ ಮಂಗಮೂತಿಯಾಗಿ ಪ್ರತಿಬಿಂಬಿತವಾದರೆ ಆಶ್ಚರ್ಯವಿಲ್ಲವಷ್ಟೆ.

Motion of a projectile ಎಂಬ ಒಂದೇ ವಿಷಯವನ್ನು ಕುರಿತು ಎರಡು ಬೇರೆ ಬೇರೆ ಪುಸ್ತಕಗಳಲ್ಲಿ ಬರೆದಿರುವ ಪೀಠಿಕಾಪರಿಚ್ಛೇದಗಳನ್ನು ಇಲ್ಲಿ ಉದ್ಧರಿಸಿಕೊಟ್ಟಿದೆ :

I. We now consider the motion of a projectile, that is, the motion of a body which is small enough to be regarded as a particle and which is

projected in a direction oblique to the direction of gravity. We shall suppose the body to be projected in vacuum near the surface of the earth or in other words we shall suppose the resistance due to air and the slight variation due to gravity to be negligible.

II. The science of ballistics is concerned with the motion of projectiles. The theory of the explosion of the charge and the motion of the projectile in the barrel of the gun belong to interior ballistics which we shall not be concerned. After the projectile leaves the barrel of the gun it moves under the influence of gravity and the resistance of air. The purpose of the exterior ballistics is to predict from given muzzle velocity and angle of elevation of the gun the path or trajectory of the projectile. On account of the complicated nature of the resistance of the air an accurate mathematical prediction of the trajectory is difficult. Some of the difficulties arise from the fact that the projectile is of finite size. To avoid these we regard the projectile as a particle. In the present section we shall make a further and much more drastic simplification : we shall assume that no resistance is offered by the air.

ಮೊದಲಿನದು ರೂಢಿಯಲ್ಲಿ ನಾವು ಹೇಳುವ guide ಭಾಷೆಯಲ್ಲಿದೆ. ವಾಸ್ತವಿಕತೆಯ ಸೌಂದರ್ಯದಿಂದ ಅದನ್ನು ಸರಳೀಕರಿಸಿರುವ ಮನಸ್ಸಿನ ಪುಟಿತದಿಂದ ಈ ಲೇಖಕ ಪ್ರಭಾವಿತನಾದಂತಿಲ್ಲ; ಬದಲು, ಒಬ್ಬ ವಿದ್ಯಾರ್ಥಿಗೆ ಪರೀಕ್ಷೆಯನ್ನು ಎದುರಿಸಲು ಬೇಕಾಗುವ ಕನಿಷ್ಠ ಭಾವನೆಗಳನ್ನು ನೀರಸವಾಗಿ ನಿರೂಪಿಸುವ ವ್ಯಾಪಾರೀ ಮನೋವೃತ್ತಿ ಇಲ್ಲಿ ಎದ್ದು ಕಾಣುತ್ತಿದೆ. ಎರಡನೆಯದು ಜೀವನದ ಒಂದು ಘಟನೆಯಿಂದ ತೊಡಗಿ ಅದರ ಆದರ್ಶೀಕೃತ ರೂಪದೆಡೆಗೆ ಸಹಜ ಸರಳವಾಗಿ ಏರಿರುವ ಸುಂದರ ನಿರೂಪಣೆ. ವಾಸ್ತವಿಕತೆಯ ಸೌಂದರ್ಯದಿಂದ ಈ ಲೇಖಕ ಸಂತೋಷಪಟ್ಟಿದ್ದಾನೆ. ಈತನ ಭಾಷಾ ಸೌಂದರ್ಯ ಮೆಚ್ಚುವಂತಿದೆ.

ಸಾಹಿತ್ಯಸೌಂದರ್ಯವೆಂದರೇನು? ಸಿದ್ಧಾಂತದ ಸಹಜ ಸೌಂದರ್ಯಕ್ಕೆ ಇಟ್ಟ ಒಪ್ಪ ಇದು. ಭಾವನೆಯನ್ನು ನಿಷ್ಕೃಷ್ಟವಾಗಿ ನಿರ್ದುಷ್ಟವಾಗಿ ಪ್ರಕಟಿಸುವುದರ ಜೊತೆಗೆ ಕಲಾತ್ಮಕವಾಗಿ ಹೇಳುವ ವಿಧಾನವಿದು. ಅಂತಿಮವಾಗಿ ಇದು ಗ್ರಂಥಕರ್ತೃವಿನ ಮನೋಧರ್ಮ, ಸಂಸ್ಕಾರ, ಸಾಹಿತ್ಯಪ್ರಭುತ್ವಗಳನ್ನು ಅವಲಂಬಿಸಿದೆಯಾದರೂ ನಾವು ಗಮನಿಸಿರುವ ಕೆಲವು ಯಾಂತ್ರಿಕ ಲಕ್ಷಣಗಳನ್ನು ಇಲ್ಲಿ ನಿರೂಪಿಸಬಹುದು: (i) ಪಾರಿಭಾಷಿಕವಲ್ಲದ ಪದಗಳ ಪ್ರಯೋಗದಲ್ಲಿ ಎಚ್ಚರ. (ii) ಆಡುಮಾತಿನ ಜಾಯಮಾನವನ್ನು ಗ್ರಹಿಸಿ ಅದರ ಜಾಡನ್ನು ಅನುಸರಿಸಿ ವಾಕ್ಯಗಳ ರಚನೆ ; ಸಾಮಾನ್ಯವಾಗಿ ಒಂದು ಭಾವನೆಗೆ ಒಂದು ವಾಕ್ಯ; ವಾಕ್ಯದಿಂದ ವಾಕ್ಯಕ್ಕೆ ಭಾವನೆಯ ಸಹಜ ಅವಿಚ್ಛಿನ್ನ ವಹನ ; ಚಿಕ್ಕ ಚೊಕ್ಕ ವಾಕ್ಯಗಳು ; ಒಂದೇ ಪದದ ಪುನರಾವರ್ತನೆಯನ್ನು ವಿರಳವಾಗಿಸುವುದು; ವಾಕ್ಯಗಳ ರಚನೆಯಲ್ಲಿ

ನೀರಸ ಏಕತೆ ಬರದಂತೆ ಎಚ್ಚರ ವಹಿಸುವುದು; (iii) ಕಿರಿದರೊಳ್ ಪಿಡುದರ್ಥಮಂ ಹಿಡಿದಿಡುವ ಪ್ರಜ್ಞೆ.

ಇಂಗ್ಲಿಷ್ ಭಾಷೆಯಲ್ಲಿರುವ ಯಾವುದೇ ಉತ್ಕೃಷ್ಟ ವಿಜ್ಞಾನ ಗ್ರಂಥದಲ್ಲಿ ನಾವು ಗಮನಿಸುವ ಮತ್ತು ಗಮನಿಸಿ ವಿಸ್ಮಿತರಾಗುವ ಲಕ್ಷಣಗಳೆರಡು—ನಿರೂಪಿತ ವಿಜ್ಞಾನಭಾವನೆಗಳ ಮೌಲ್ಯದ ಉತ್ಕೃಷ್ಟತೆ; ಹೆಗಲೆಣೆಯಾಗಿ ನಿಂತು ವಿಜ್ಞಾನಮೌಲ್ಯವನ್ನು ಮೆರಗಿಸುವ ಸಾಹಿತ್ಯ ಮೌಲ್ಯ. ಉತ್ತಮ ವಿಜ್ಞಾನಗ್ರಂಥವೊಂದು ಉತ್ತಮ ಸಾಹಿತ್ಯರಚನೆಯೂ ಹೌದು.

**ಸಾರಾಂಶ**

ಇದುವರೆಗಿನ ಪರಿಶೀಲನೆಯ ಸಾರಾಂಶವಿಷ್ಟು. ವಿಜ್ಞಾನಕ್ಕೆ ಒಂದು ಭಾಷೆ ಇದೆ. ವಾಸ್ತವಿಕತೆಗೆ ಬರೆದ ಭಾಷ್ಯವಿದು. ಇದರ ಮೂಲ ಇಟ್ಟಿಗೆಗಳು ಪಾರಿಭಾಷಿಕ ಪದಗಳು, ತಳಹದಿ ಆದ್ಯುಕ್ತಿಗಳು, ಗಾರೆ ಪ್ರತೀಕಗಳು, ಆಲೇಖ್ಯ ಆಧಾರ ಭಾವನೆಗಳು, ಸೌಧ ಸಿದ್ಧಾಂತ. ಇದು ತಾರ್ಕಿಕವಾಗಿ ಸಮಂಜಸವಾಗಿರಬೇಕು ಮತ್ತು ಸಾಹಿತ್ಯ ಸೌಂದರ್ಯ ಪೂರಿತವಾಗಿರಬೇಕು.

ಇಂಥ ಭಾಷೆ ಎಲ್ಲರಿಗೂ ಅರ್ಥವಾಗಲೇಬೇಕೆಂದಿಲ್ಲ. ಒಬ್ಬ ಗಣಿತದ ವಿದ್ಯಾರ್ಥಿ ಇದ್ದಾನೆ. ವೈದ್ಯವಿಜ್ಞಾನದಲ್ಲಿ ಆತನ ಪ್ರವೇಶ ಕೇವಲ ಹೊರವಲಯದ್ದು. ಅದರ ಒಂದು ಉತ್ಕೃಷ್ಟ ಗ್ರಂಥದ ಒಂದೇ ಒಂದು ವಾಕ್ಯವೂ ಆತನಿಗೆ ಅರ್ಥವಾಗದಿದ್ದರೆ ಕೊರತೆ ಆತನದೇ ವಿನಾ ಗ್ರಂಥದ್ದಲ್ಲ. ಪ್ರತಿಯೊಂದು ವಿಜ್ಞಾನಗ್ರಂಥವೂ ಸಾಮಾನ್ಯವಾಗಿ ಎಲ್ಲರಿಗೂ ಅರ್ಥವಾಗುವ ಸರಳ ಭಾಷೆಯಲ್ಲಿರಬೇಕು ಎನ್ನುವ ಘನೋದ್ದೇಶವನ್ನು ಪ್ರಾಯೋಗಿಕವಾಗಿಸಲು ಪ್ರಯತ್ನಿಸುವಾಗ ಎದುರಾಗುವ ತೊಡಕನ್ನು ಜಾರ್ಜ್ ಗಾಮೋ (೧೯೦೪-೬೮) *One, Two, Three,..., Infinity* ಗ್ರಂಥದ ಮುನ್ನುಡಿಯಲ್ಲಿ ವಿವರಿಸಿದ್ದಾರೆ:

"..... Above all my thanks are due to my young friend Marina Von Neumann who claims that she knows everything better than her famous father does, except, of course, mathematics which she says she knows only equally well. After she had read in manuscript some of the chapters of the book and told me about numerous things in it which she could not understand, I finally decided that this book is not for children as I had originally intended it to be."

ಇದೇ ವಿಚಾರ ಕುರಿತು "ವಿಜ್ಞಾನ ಪ್ರಪಂಚ" ಪ್ರಕಟವಾದಾಗ ಶಿವರಾಮ ಕಾರಂತರನ್ನು (೧೯೦೨-೯೭) ಒಂದು ಪ್ರಶ್ನೆ ಕೇಳಿದೆ (೧೯೬೬). ಅದನ್ನೂ ಅದಕ್ಕೆ ಅವರು ನೀಡಿದ ಉತ್ತರವನ್ನೂ ಇಲ್ಲಿ ಉದ್ಧರಿಸಿದ್ದೇನೆ.

ಪ್ರಶ್ನೆ : ಕನ್ನಡದಲ್ಲಿ ವೈಜ್ಞಾನಿಕ ಗ್ರಂಥ, ಪ್ರಬಂಧ ರಚನೆಯಾದಾಗ ಸಾಮಾನ್ಯ ಓದುಗರು ಆಡಿಕೊಳ್ಳುವ ಮಾತು ಹೀಗಿದೆ : ಇಂಗ್ಲಿಷ್ ಬಲ್ಲವರಿಗೆ ಇವುಗಳ ಪ್ರಯೋಜನವಿಲ್ಲ. ಮೂಲಗ್ರಂಥಗಳನ್ನೇ ಓದಬಹುದು. ಕನ್ನಡ ಮಾತ್ರ ಬಲ್ಲವರಿಗೆ ಇವುಗಳ ಅರ್ಥವಾಗುವುದು ಕಠಿಣ. ನಿಮ್ಮ ಅನುಭವದ ವಿವರ ತಿಳಿಸುವಿರಾ?

ಉತ್ತರ : "ಇಂಗ್ಲಿಷಿನಲ್ಲಿ ವೈಜ್ಞಾನಿಕ ವಿವರ ಓದಿಕೊಳ್ಳುವವನಿಗೆ ಬೇಕಷ್ಟು ಗ್ರಂಥಗಳಿವೆ. ಅವರಿಗಾಗಿ ನಾವು ಈ ಕೆಲಸ ಮಾಡುವುದಿಲ್ಲ. ಬರಿದೆ ಕನ್ನಡ ಬಲ್ಲವರಿಗೆ ಅರ್ಥವಾಗಲು ಕಠಿಣವೆಂದೇ? ವಿಷಯ ಪ್ರವೇಶ ಮಾಡುವ ಕಾಲದಲ್ಲಿ ಸಾಮಾನ್ಯ ಇಂಗ್ಲಿಷ್ ಬಲ್ಲವರಿಗೆ ಸೈನ್ಸ್ ಬುಕ್ ಅರ್ಥವಾಗುತ್ತದೆಯೇನು? ಅದು ಕತೆಯಂತಲ್ಲ. ಇಂಗ್ಲಿಷ್ ಬಲ್ಲವರೂ ಎಷ್ಟು ಸೈನ್ಸ್ ಓದುತ್ತಾರೆ? ಅದು ಬೆಳೆಯಿಸಬೇಕಾದ ಅಭಿರುಚಿ."

ವಿಜ್ಞಾನದ ಭಾಷೆ ಬಲು ಬಿಗಿ—ಘನವಸ್ತುವಿನಲ್ಲಿ ಪರಮಾಣುಗಳಿರುವಂತೆ ಇಲ್ಲಿ ಶಬ್ದಗಳು ಸಂತುಲಿತವಾಗಿರುವುವು. ಈ ಭಾಷೆಯಲ್ಲಿ ಉತ್ಪ್ರೇಕ್ಷೆ ಉದ್ಗಾರಗಳಿಗೆ ಅವಕಾಶ ಕಡಿಮೆ. ನಿಸರ್ಗದಂತೆ ಇದೂ ಕಡುಕೃಪಣ. ಒಂದು ಹೆಚ್ಚಿನ ಪದ ಅಥವಾ ಪ್ರತ್ಯಯದ ಪ್ರಯೋಗವನ್ನು ಇದು ಸಹಿಸದು. ಈ ಕಾರಣಗಳಿಂದ ಪ್ರತೀಕರೂಪದೆಡೆಗೆ ವಿಜ್ಞಾನಿಗಳ ಒಲವು ಹೆಚ್ಚು. ಅದು ವಿಜ್ಞಾನದ ಭಾಷೆಯ ಆದರ್ಶ.

## ಕನ್ನಡದಲ್ಲಿ ವಿಜ್ಞಾನದ ಭಾಷೆ

ಇದುವರೆಗಿನ ತರ್ಕಸರಣಿ ಮತ್ತು ತೀರ್ಮಾನಗಳನ್ನು ಇಂಗ್ಲಿಷ್ ಭಾಷೆಯಲ್ಲಿರುವ ಶಿಷ್ಟಗ್ರಂಥಗಳ ಅವಲೋಕನದಿಂದ ಮಾಡಿದ್ದೇವೆ. ಆದರೆ ಇವು ಸಾಮಾನ್ಯವಾಗಿ ಇತರ ಭಾಷೆಗಳಿಗೂ ಅನ್ವಯಿಸುವುವು. ಕಾರಣ, ವಿಜ್ಞಾನವೆಂಬ ಮೂಲಪ್ರೇರಕ ಶಕ್ತಿ ಭಾಷಾತೀತವಾದದ್ದು.

ಕನ್ನಡದಲ್ಲಿ ವಿಜ್ಞಾನದ ಭಾಷೆ ಹೇಗೆ ಬೆಳೆದು ಬಂದಿದೆ ಎಂಬ ಪರಿಶೀಲನೆಯನ್ನು ಈ ಕೆಳಗಿನ ಆದ್ಯುಕ್ತಿಗಳನ್ನು ಆಧರಿಸಿ ಮಾಡುತ್ತೇವೆ : (i) ಕನ್ನಡಭಾಷೆ ವಿಜ್ಞಾನಭಾಷೆಯಾಗಿ ಬೆಳೆದಿಲ್ಲ. (ii) ಕನ್ನಡಭಾಷೆ ವಿಜ್ಞಾನಭಾಷೆಯಾಗಿ ಬೆಳೆಯುವುದು ಸಾಧ್ಯವಿದೆ.

ಕನ್ನಡಭಾಷೆ ವಿಜ್ಞಾನ ಭಾಷೆಯಾಗಿ ಏಕೆ ಬೆಳೆಯಲಿಲ್ಲ? ಈ ಚರ್ಚೆಯನ್ನು ಕೇವಲ ವೈಜ್ಞಾನಿಕ ಕ್ಷೇತ್ರಕ್ಕೆ ಸೀಮಿತಗೊಳಿಸುವುದು ಯುಕ್ತ. ಅಲ್ಲದೆ ಇದರ ಸವಿವರ ವಿಶ್ಲೇಷಣೆ ಪ್ರಸಕ್ತ ಲೇಖನದ ವ್ಯಾಪ್ತಿಗೆ ಮೀರಿದ್ದು. ಪ್ರಶ್ನೆಗೆ ಸುಲಭ ಮತ್ತು ಸರಳ ಉತ್ತರ—ವಿಜ್ಞಾನದ ಸಂವೇದನೆ ಕನ್ನಡಭಾಷೆಯಲ್ಲಿ ಆಗಲಿಲ್ಲ. ಆದ್ದರಿಂದ ಪದಗಳು ಇಲ್ಲಿ ಟಂಕಿಸಲ್ಪಡಲಿಲ್ಲ. ಸಂಶೋಧಕರು, ಬೋಧಕರು, ಲೇಖಕರು ಮೊದಲಾದವರು ವಿಜ್ಞಾನವನ್ನು ಅರ್ಥವಿಸುವುದು, ಬರೆಯುವುದು ಇಂಗ್ಲಿಷಿನಲ್ಲಿ. ಕನ್ನಡ ಭಾಷೆಯಲ್ಲಿ ಬರೆಯಲು ಅಥವಾ ಹೇಳಲು ಹೊರಟಾಗ ಅವರ ತೊಳಲಾಟ ಅಪಪ್ರಯೋಗಗಳನ್ನು ಲಕ್ಷಿಸಿದರೆ "ಭಾವನೆ ಸ್ಪಷ್ಟವಾಗಿದ್ದರೆ ಭಾಷೆ ಯಾವುದಾದರೇನಂತೆ?" ಎಂಬ ಭಾಷಾ ಸಮಸ್ಯೆಯ ಸುಲಭ ಪರಿಹಾರ ಅಷ್ಟೊಂದು ಸಮಂಜಸವೆನಿಸದು. ಎಂದರೇನಾಯಿತು? ಕನ್ನಡದಲ್ಲಿ ಯೋಚಿಸದೆ ಭಾಷೆ ಬೆಳೆಯದು, ಭಾಷೆ ಬೆಳೆಯದೆ ಯೋಚನೆ ಸಾಗದು; ಭಾಷೆಯ ಸಾಮರ್ಥ್ಯ ಅದಕ್ಕೆ ನಾವು ಕೊಟ್ಟಿರುಂಟು. ಆದ್ದರಿಂದ ಕನ್ನಡವು ವಿಜ್ಞಾನದ ಭಾಷೆಯಾಗಿ ಬೆಳೆಯಬೇಕಾದರೆ ವಿಜ್ಞಾನರಂಗದಲ್ಲಿರುವ ಎಲ್ಲರೂ—ವಿಶೇಷವಾಗಿ ಸಂಶೋಧಕರು, ಲೇಖಕರು, ಬೋಧಕರು—ಮೊದಲು ಕನ್ನಡದಲ್ಲಿ ಯೋಚನೆ ಮಾಡಲು ತೊಡಗಬೇಕು; ತರುವಾಯ ಕನ್ನಡದಲ್ಲಿ ಚರ್ಚಿಸಬೇಕು, ಪಾಠ ಮಾಡಬೇಕು, ಭಾಷಣವೀಯಬೇಕು; ಹೀಗೆ ಪುಟಪಾಕಗೊಂಡ ಮೆದು ಭಾಷೆಯನ್ನು ಬರವಣಿಗೆಯ ಸಂಸ್ಕಾರಕ್ಕೆ ಒಳಪಡಿಸಬೇಕು.

ದೀರ್ಘ ಸಹನಶೀಲ ಪರಿಶ್ರಮ ಇಲ್ಲಿ ಅತ್ಯಾವಶ್ಯಕ. ಕನ್ನಡದಲ್ಲಿ ಯೋಚನೆ ಎಂಬುದೊಂದು ಬಲು ಸೂಕ್ಷ್ಮ ಮಾನಸಿಕ ಕ್ರಿಯೆ. ಇಂಗ್ಲಿಷಿನಲ್ಲಿ ಓದಿ ಗ್ರಹಿಸಿದುದನ್ನು ಆ ಕ್ಷಣವೇ ಮಾನಸಿಕವಾಗಿ ಭಾಷಾಂತರಿಸಿ ಕನ್ನಡದಲ್ಲಿ ಸೆರೆಹಿಡಿದಿಟ್ಟುಕೊಳ್ಳುವ ಒಂದು ವಿಧಿ. ಹೀಗೆ ಲಭಿಸಿದ ಕನ್ನಡ ಭಾವನೆಗೆ ಕನ್ನಡ ಭಾಷಾರೂಪ ನೀಡಿ ಪ್ರಕಟಿಸುವಾಗ ಭಾಷೆ ಭಯಂಕರವಾಗಿ ಕುಂಟುತ್ತದೆ, ಕಿರಲುತ್ತದೆ. ಇದಕ್ಕಿರುವ ಪರಿಹಾರ ಕನ್ನಡ ಭಾಷೆಯ ಶಾಸ್ತ್ರೀಯ ಅಭ್ಯಾಸ. ಈಗ ಮೂವತ್ತು ವರ್ಷಗಳ ಹಿಂದೆ "ಕನ್ನಡ ಭಾಷೆ ಕಲಿಯುತ್ತಿದ್ದೇನೆ" ಎಂದರೆ ಜನ ನಗುತ್ತಿದ್ದರು. ಇದರಲ್ಲಿ ಕಲಿಯುವುದೇನಿದೆ, ನಮ್ಮ ಮಾತಲ್ಲವೇ ಇದು—ಎಂಬುದು (ತಿರಸ್ಕಾರದೊಂದಿಗೆ) ಹಿನ್ನೆಲೆಯಲ್ಲಿ ಅಡಗಿದ್ದ ಭಾವ. ಮಾತು ನಮ್ಮದೇ ಆದರೂ ಅದನ್ನು ಪ್ರಯತ್ನಪೂರ್ವಕ ಕಲಿಯದಿದ್ದರೆ ಅದರ ಮೇಲೆ ನಮಗಿರುವ ಹಿಡಿತ ದೈನಂದಿನ ವ್ಯವಹಾರ ಮಟ್ಟದಿಂದ ಮೇಲೇರದು. ಇಂಥ ಅಭ್ಯಾಸದ ಜೊತೆಗೆ ಆಧುನಿಕ ಕನ್ನಡ ಸಾಹಿತ್ಯದ ವಾಚನಾಭಿರುಚಿಯೂ ಬಲು ಅಗತ್ಯ. ಇಂಗ್ಲಿಷ್ ಭಾಷೆಯಲ್ಲಿರುವ ಒಂದು ಭೌತವಿಜ್ಞಾನ ಗ್ರಂಥದಲ್ಲಿ LIGHT ಪ್ರಕರಣವನ್ನು ಪ್ರಾರಂಭಿಸುವ ಬಗೆ ನೋಡಿ—"Let there be light" said Newton and there was light !

ಕನ್ನಡದ ಇಂಥ ಒಂದು ಗ್ರಂಥದ "ಬೆಳಕು" ಪ್ರಕರಣದ ಮೊದಲ ವಾಕ್ಯಗಳು "ಬೆಳಕು ಎಂದರೇನು? ಅದರ ಸ್ವಭಾವವೇನು?" ಎಂದಿವೆ. ನಮ್ಮ ಕಾವ್ಯಗಳು ಬರಡೇ ? "ಬೆಳ್ಳನೆ ಬೆಳಗಾಯಿತು" ಎಂಬ ಕವಿವಾಣಿಗೆ ಇವರು ಕಿವುಡಾಗಿದ್ದರೇ? ವಿಜ್ಞಾನಕ್ಷೇತ್ರದವನಿಗೆ ಸಾಹಿತ್ಯ ಅನಾವಶ್ಯಕ ಎಂಬ ಅಭಿಪ್ರಾಯ ತಪ್ಪು. ಜೀವನವೃಕ್ಷ ಜನಜೀವನದ ಸಾರವನ್ನು ಸಾಹಿತ್ಯದ ಮೂಲಕ ಹೀರಿ ವಿಜ್ಞಾನಫಲ ನೀಡುತ್ತದೆ. ಇಲ್ಲಿ ಸಾಹಿತ್ಯದ ಅಲಕ್ಷ್ಯ ಎಷ್ಟು ಅಪಾಯಕಾರಿ ಎಂಬುದು ಸ್ಪಷ್ಟ.

ಮೇಲೆ ಹೇಳಿದ ಜಾಡನ್ನು ಅನುಸರಿಸಿ ಹೊಸದಾರಿ ತುಳಿದವರು ಇಂದು (ಆರ್. ಎಲ್. ನರಸಿಂಹಯ್ಯನವರ ತಲೆಮಾರಿನ ಅನಂತರದವರು) ಬೆರಳೆಣಿಕೆಯ ಸಂಖ್ಯೆ ಮೀರಿರುವಂತೆ ಕಾಣುವುದಿಲ್ಲ. ಆದರೆ ಅವರ ದಾರಿಯಲ್ಲಿ ಹಲವಾರು ಮಂದಿ ಯುವ ಲೇಖಕರು ನಡೆಯುತ್ತಿರುವುದೊಂದು ಶುಭ ಲಕ್ಷಣ. ಈಗ ಪ್ರಕಟಿತವಾಗಿರುವ ಗ್ರಂಥಗಳು, ಲೇಖನಗಳು ಮುಂತಾದ ವಿಜ್ಞಾನದ ವಿವಿಧ ಅಭಿವ್ಯಕ್ತಿಗಳ ಪರಿಶೀಲನೆಯಿಂದ ಕನ್ನಡವು ವಿಜ್ಞಾನದ ಭಾಷೆಯಾಗಿ ಬೆಳೆಯಬಲ್ಲುದು ಎಂಬ ನಮ್ಮ ಎರಡನೆಯ ಆದ್ಯುಕ್ತಿಗೆ ಸಾಕಷ್ಟು ಪುರಾವೆ ದೊರೆತಿದೆ. ನಮ್ಮ ಭಾಷೆಯ ಗ್ರಂಥಕರ್ತೃಗಳಿಗೆ (ವಿಜ್ಞಾನಕ್ಷೇತ್ರಕ್ಕೆ ಕನ್ನಡ ತಡವಾಗಿ ಪ್ರವೇಶಿಸಿದುದರಿಂದ) ಕೆಲವು ಸಾಧಕ ಬಾಧಕಗಳಿವೆ.

ಸಾಧಕಗಳು : (i) ವಿಜ್ಞಾನದ ಭಾವನೆಗಳು ಇತರ ಭಾಷಾಮಾಧ್ಯಮದ ಮೂಲಕ ಸ್ಪಷ್ಟವಾಗಿ ತಿಳಿದಿವೆ. ಆದ್ದರಿಂದ ಅವನ್ನು ಕ್ರಮಬದ್ಧವಾಗಿ ಕನ್ನಡದಲ್ಲಿ ನಿರೂಪಿಸಬಹುದು. ಇಂಗ್ಲಿಷ್ ಭಾಷೆ ವಿಜ್ಞಾನದೊಂದಿಗೆ ಬೆಳೆದು ಬಂದುದರಿಂದ ಈ ಸೌಕರ್ಯ ಅದಕ್ಕೆ ಲಭಿಸಲಿಲ್ಲ. ಆದ್ದರಿಂದ ಆ ಭಾಷೆಯ ಏರುತಗ್ಗುಗಳನ್ನೂ ಅಂಕುಡೊಂಕುಗಳನ್ನೂ ಕನ್ನಡದಲ್ಲಿ ನಿವಾರಿಸಿಕೊಳ್ಳಬಹುದು. (ii) ಕನ್ನಡಸಾಹಿತ್ಯ ಪ್ರಬುದ್ಧವಾಗಿ ಬೆಳೆದಿದೆ. ಆದ್ದರಿಂದ ವಿಪುಲ ಪದಸಂಪತ್ತು, ಅರ್ಥವೈಶಿಷ್ಟ್ಯ, ಪ್ರಯೋಗ ಲಾಲಿತ್ಯ ಇವೆಲ್ಲ ಸಹಜವಾಗಿ ಲಭಿಸುತ್ತವೆ.

ಬಾಧಕಗಳು : (i!) ಭಾವನೆ ಮೊದಲು ಅಭಿವ್ಯಕ್ತವಾದ ಮೂಲಭಾಷೆಯ ತೀವ್ರತೆ

ಬೇರೆ ಯಾವ ಭಾಷೆಗೂ ಒದಗದು. (ii) ಪಾರಿಭಾಷಿಕ ಶಬ್ದಗಳ ನಿರ್ಮಾಣ ಮತ್ತು ಚಲಾವಣೆಗಳಲ್ಲಿ ಗೊಂದಲ. (iii) ಕನ್ನಡದಲ್ಲಿ ಇಂಗ್ಲಿಷ್‌ತನ ಅಥವಾ ಇಂಗ್ಲಿಷ್ ಮೂರಿ.

ನಮ್ಮ ಹೆಸರಾಂತ ಲೇಖಕರು ಇವನ್ನು ಅರಿತು ಎಚ್ಚರದಿಂದ ಮುಂದುವರಿದಿದ್ದಾರೆ. ಆದರೂ ಪಾರಿಭಾಷಿಕ ಶಬ್ದಗಳ ಮತ್ತು ಪಾರಿಭಾಷಿಕ ಪದಪುಂಜಗಳ ಬಳಕೆಯಲ್ಲಿ ಸಾಕಷ್ಟು ಗೊಂದಲವಿದೆ. ಇದರ ನಿವಾರಣೆಗೆ ಎರಡು ಶುದ್ಧೀಕಾರಕಗಳ ಪ್ರಯೋಗ ಕಂಡು ಬಂದಿದೆ. ಒಂದು, ಪ್ರತಿಯೊಂದು ಪಾರಿಭಾಷಿಕ ಶಬ್ದಕ್ಕೂ ಇಂಗ್ಲಿಷ್ ರೂಪವನ್ನು ಅಲ್ಲಲ್ಲೇ ಮತ್ತು ಗ್ರಂಥದ ಕೊನೆಯಲ್ಲಿ (ಅಕಾರಾದಿಯಾಗಿ) ಬರೆಯುವುದು. ಎರಡು, ಆಯಾ ಶಾಸ್ತ್ರಗಳಲ್ಲಿ ಪರಿಣತರಿಂದ ಸಿದ್ಧವಾಗಿರುವ ಮತ್ತು ಆಗುತ್ತಿರುವ ಶಬ್ದಕೋಶ ಗಳು. ಒಂದು ಇಂಗ್ಲಿಷ್ ಪಾರಿಭಾಷಿಕ ಶಬ್ದಕ್ಕೆ ಒಂದು ಅಚ್ಚಗನ್ನಡ ಶಬ್ದ ಬೇಕೇ ಬೇಕು ಎಂಬ ಅಂಧಾಭಿಮಾನ ಈ ನಾಡಿನಲ್ಲಿಲ್ಲದಿರುವುದೊಂದು ಭಾಗ್ಯವೇ. ನಮ್ಮ ಧೋರಣೆ ಹೇಗಿದೆ ಎಂಬುದನ್ನು ಕೆ. ವಿ. ಪುಟ್ಟಪ್ಪನವರು ೧೯೬೩ರಷ್ಟು ಹಿಂದೆಯೇ ಸ್ಪಷ್ಟೀಕರಿಸಿ ದ್ದಾರೆ: "ವೈಜ್ಞಾನಿಕ ಅಥವಾ ಪಾರಿಭಾಷಿಕ ವಿಷಯಗಳಿಗೆ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸುವ ಸಂಕಟಕ್ಕೆ ಗುರಿಯಾಗಬೇಕಾಗಿಲ್ಲ. ಅಂತರರಾಷ್ಟ್ರೀಯ ಶಬ್ದಗಳನ್ನೇ ಇದ್ದಕ್ಕಿದ್ದ ಹಾಗೆಯೇ ಬಳಸಿಕೊಳ್ಳಬಹುದು. ಆವಶ್ಯಕತೆ ಕಂಡು ಬಂದರೆ ಮಾತ್ರ ವಿವರಣಾತ್ಮಕವಾಗಿ ಮಾತ್ರ ದೇಶಭಾಷೆಯ ಶಬ್ದಗಳನ್ನು ಉಪಯೋಗಿಸಬಹುದು. ಪಾರಿಭಾಷಿಕ ಶಬ್ದಗಳು ವಾಸ್ತವವಾಗಿ ಅಂಕಿತನಾಮಗಳು ತಾನೇ!"

ಶಿವರಾಮ ಕಾರಂತರನ್ನು "ಕನ್ನಡ ಭಾಷೆಯಲ್ಲಿ ಆಧುನಿಕ ವೈಜ್ಞಾನಿಕ ಗ್ರಂಥಗಳನ್ನು ಬರೆಯಲು ಇರುವ ದೊಡ್ಡ ಕೊರತೆ ಸಾಕಷ್ಟು ಪಾರಿಭಾಷಿಕ ಪದಗಳ ಅಭಾವ. ಈ ಕೊರತೆ ಯನ್ನು ನೀವು ಹೇಗೆ ಬಗೆಹರಿಸಿದ್ದೀರಿ?" ಎಂದು ಪ್ರಶ್ನಿಸಿದಾಗ (೧೯೬೭) ಅವರು ನೀಡಿದ ಉತ್ತರ, "ಪಾರಿಭಾಷಿಕ ಪದಗಳ ಕೊರತೆ—ಅದು ತೀರ ಸಣ್ಣ ವಿಷಯ. ಮೊದಲಿನ ಕೊರತೆ ಅಭಿರುಚಿ. ಅಭಿರುಚಿಯಿಂದ ಓದಿದವನಿಗೆ ಹೇಳಬೇಕು ಇತರರಿಗೆ ಅನಿಸುತ್ತದೆ. ಅನಿಸಿ ದಾಗ ಕನ್ನಡ ಶಬ್ದಗಳ ಕಷ್ಟ ವಿಷಯ ತಿಳಿದವನಿಗೆ ಅದು ಅಂಥ ಕಷ್ಟವಲ್ಲ. ಅನೇಕ ಸೈನ್ಸ್ ಟರ್ಮ್ಸ್‌ನ್ನು ಹಾಗೆಯೇ ಇರಿಸಬಹುದು. ಸುಲಭದಲ್ಲಿ ತಿಳಿಸುವ ಸೈಂಟಿಫಿಕ್ ಫಂಕ್ಷನ್ಸ್ ಅನುವಾದಿಸಬಹುದು. ಅಂಥ ಕೆಲಸಕ್ಕೆ ಕ್ಲಿಷ್ಟವಲ್ಲದ ಕನ್ನಡ ಸಂಸ್ಕೃತ ಪದಗಳು ನೆರವಾಗು ತ್ತವೆ. ಕೆಲವೊಮ್ಮೆ ಹೊಳೆಯದಿರಬಹುದು. ತುಸು ತಾಳ್ಮೆಯಿಂದ ಯೋಚಿಸಿದರೆ ಹೊಳೆದೇ ಹೊಳೆಯುತ್ತದೆ. ಬರಿದೆ ಗ್ಲಾಸರಿ ಇರಿಸಿಕೊಂಡವರು ಅಂಥ ನಾಲ್ಕಾರು ಪದ ಗಳನ್ನು ಒಂದೇ ವಾಕ್ಯದಲ್ಲಿ ಬಳಸಿ ಯಾವುದೂ ತಿಳಿಯದಂತೆ ಮಾಡುವ ಭಯ ಹೆಚ್ಚು."

ಕನ್ನಡದಲ್ಲಿ ಬರೆಯುವಾಗ ಎದುರಾಗುವ ಇತರ ಕೆಲವು ಸಮಸ್ಯೆಗಳನ್ನು ಕೇಂದ್ರೀ ಕರಿಸಲು ಕೆಳಗಿನ ಉದಾಹರಣೆಗಳನ್ನು ಬರೆದಿದೆ:

(i) ಆಲದ ಮರವು ಅಸಂಖ್ಯಾತ ಬೀಳಲುಗಳನ್ನು ಹೊಂದಿದ್ದು ಅದು ಎಲ್ಲ ಕಡೆಗಳಲ್ಲಿಯೂ ಬೆಳೆಯುತ್ತದೆ.

ಟೀಕೆ : "ಆಲದ ಮರವು ಅಸಂಖ್ಯಾತ ಬೀಳಲುಗಳನ್ನು ಹೊಂದಿ"ರುವುದಕ್ಕೂ "ಅದು ಎಲ್ಲ ಕಡೆಗಳಲ್ಲಿಯೂ ಬೆಳೆಯು"ವುದಕ್ಕೂ ಭಾವಸಂಬಂಧವಿಲ್ಲ. ಅಲ್ಲದೇ 'ಹೊಂದಿದೆ' ಪ್ರಯೋಗ ಕನ್ನಡಕ್ಕೆ ಒಪ್ಪುವುದಿಲ್ಲ.

ಭಾವ ಸಂಬಂಧವಿಲ್ಲದ ವಾಕ್ಯಗಳನ್ನು ಸಂಯೋಜಿಸಬಾರದು.

(ii) ಹತ್ತಿಸಿದ ಮೇಣದ ಬತ್ತಿಯಿಂದ ಕೂಡಿದ ನೀರಿನ ತಟ್ಟೆಯ ಮೇಲೆ ಒಂದು ಭರಣಿಯನ್ನು ಮುಚ್ಚಲಾಗಿರಲಿ.

ಟೀಕೆ: ಇಂಗ್ಲಿಷಿನಿಂದ ಹಸಿ ಹಸಿ ಭಾಷಾಂತರವಿದು. ಒಂದು ಇಂಗ್ಲಿಷ್ ವಾಕ್ಯಕ್ಕೆ ಒಂದು ಕನ್ನಡ ವಾಕ್ಯ ಎಂಬ ನೀತಿ ಸಲ್ಲದು. ಕನ್ನಡದ ಜಾಯಮಾನವನ್ನು ಮರೆಯ ಬಾರದು.

(iii) ಕುದಿಯುತ್ತಿರುವ ಲಾವಾರಸವನ್ನು ಹೊರಗೆ ಉಗುಳುವ ಪರ್ವತವನ್ನು ಅಗ್ನಿಪರ್ವತವೆಂದು ಕರೆಯುತ್ತೇವೆ. ಈ ಲಾವಾರಸವನ್ನು ಉಗುಳುವ ಅಗ್ನಿಪರ್ವತಕ್ಕೆ ಜ್ವಾಲಾಮುಖಿಯೆಂದೂ ಹೆಸರಿದೆ. ಇಂಥ ಜ್ವಾಲಾಮುಖಿಗಳ ವಿವರಣೆ ಇತಿಹಾಸದಲ್ಲಿ ಉಲ್ಲೇಖಿತವಾಗಿದೆ.

ಟೀಕೆ : ಪ್ರತಿ ವಾಕ್ಯವೂ ಹಿಂದಿನ ವಾಕ್ಯದ ಕೆಲವು ಪದಗಳನ್ನು ಪುನಃ ಉಪಯೋಗಿಸಿ ಮುಂದುವರಿಯುತ್ತದೆ. ಪುನರಾವರ್ತಿತ ಮುನ್ನಡೆ ಬರಕೂಡದು.

(iv) ಸಂಖ್ಯೆಗಳನ್ನು ವಿಶಾಲವಾಗಿ ವಾಸ್ತವ ಮತ್ತು ಮಿಶ್ರ ಸಂಖ್ಯೆಗಳೆಂದು ವಿಭಾಗಿಸಿದೆ. ಒಂದು ವರ್ಗ ಸಮೀಕರಣವನ್ನು ಪರಿಶೀಲಿಸಿ. ಅದರ ಮೂಲಗಳು ವಾಸ್ತವವಾಗಿರಬಹುದು, ಊಹ್ಯವಾಗಿರ ಬಹುದು.

ಟೀಕೆ : ಒಂದನೆಯ ವಾಕ್ಯದಿಂದ ಎರಡನೆಯ ವಾಕ್ಯಕ್ಕೆ ಭಾವ ನೆಗೆದಿರುವುದು ಹನು ಮಂತನಿಗೂ ಸವಾಲೆಂಬಂತಿದೆ. ವಾಕ್ಯಶ್ರೇಣಿಯಲ್ಲಿ ಭಾವವಹನ ತುಂಡಾಗಕೂಡದು.

(v) ಅಡಿಕೆ ಮರದ ಕೃಷಿಯನ್ನು ಕುರಿತು ಬೇಕಾದಷ್ಟು ಹೇಳಬಹುದು.

ಟೀಕೆ : ಹೇಳುವುದನ್ನು ಪೀಠಿಕೆಯಿಲ್ಲದೇ ಸೀದಾ ಹೇಳಬಹುದಲ್ಲ! ನೇರ ವಿಷಯ ಪ್ರವೇಶಕ್ಕಿಂತ ಬೇರೆ ದಾರಿಯಿಲ್ಲ.

**ಪರಿಸಮಾಪ್ತಿ**

ಕನ್ನಡದಲ್ಲಿ ವಿಜ್ಞಾನದ ಭಾಷೆಯನ್ನು ಜ್ಞಾನ ಸಂಶೋಧನೆ ಮತ್ತು ಪ್ರಸಾರ ಕಾರ್ಯಗಳ ನೇತಾರರಾಗಿರುವ ತಜ್ಞರು ಎಚ್ಚರದಿಂದ ಬೆಳೆಸಬೇಕು. ಇಂಥ ಕಾರ್ಯದಲ್ಲಿ ನೆರವೇರಲೇ ಬೇಕಾದ ಅನಿವಾರ್ಯ ವಿಧಿಗಳು :

(i) ಕನ್ನಡದಲ್ಲಿ ಚಿಂತನೆ ಚರ್ಚೆ ಬೋಧನೆ

(ii) ಕನ್ನಡ ಸಾಹಿತ್ಯದ ವಿದ್ವತ್ಪೂರ್ಣ ಅಭ್ಯಾಸ

(iii) ವಿಜ್ಞಾನಪ್ರಸಾರಕ್ಕಾಗಿ ವಿವಿಧ ಪ್ರಕಾರಗಳ (ಜನಪ್ರಿಯ ಲೇಖನಗಳು, ಗ್ರಂಥ ಗಳು, ಪಠ್ಯಪುಸ್ತಕಗಳು, ಆಕರ ಗ್ರಂಥಗಳು, ಅನುವಾದಗಳು ಇತ್ಯಾದಿ) ರಚನೆ.

ಇಂದು ಮುಂಚೂಣಿಯಲ್ಲಿರುವವರ ಹೊಣೆಗಾರಿಕೆ ದೊಡ್ಡದು. ಅವರಿಗೆ ಇಂಗ್ಲಿಷ್ ಭಾಷೆಗೆ ನೇರ ಪ್ರವೇಶ ಉಂಟು, ಎಂದರೆ ವಿಜ್ಞಾನದ ವಿಕಾಸವನ್ನು ಅವರು ಪ್ರತ್ಯಕ್ಷ ಅನುಭವಿಸಬಲ್ಲರು. ಮುಂದಿನ ತಲೆಮಾರಿನವರಿಗೆ ಇಂಥ ಸೌಕರ್ಯ ಉಳಿದಿರುವುದು ಸಂಶಯ. ಅಂಥವರಿಗೆ ವಿಜ್ಞಾನಕ್ಕೆ ಕನ್ನಡವೇ ರಹದಾರಿ. ಆ ದಾರಿ ತೋರುವ ಒಂದು ಪ್ರಾಮಾಣಿಕ ಪ್ರಯತ್ನ ಈ ಕಾರ್ಯಶಿಬಿರದ್ದಾಗಲಿ ಎಂದು ಹಾರೈಸುತ್ತೇನೆ.

**ವಿಜ್ಞಾನ ಸಾಹಿತ್ಯ ನಿರ್ಮಾಣ**ದಿಂದ ಉದ್ಧೃತ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ (೧೯೭೧)

# ವಿಜ್ಞಾನ ವಾಙ್ಮಯದ ಭಾಷಾಂತರ—ವಿಶಿಷ್ಟ ಸಮಸ್ಯೆಗಳು

**ಪೀಠಿಕೆ**

'ವಿಜ್ಞಾನ ವಾಙ್ಮಯ' ಎಂದರೆ ವಿಜ್ಞಾನದ (science) ಹಾಗೂ ತಂತ್ರವಿದ್ಯೆಯ (technology) ಸಮಸ್ತ ಚಟುವಟಿಕೆಗಳನ್ನೂ ಪ್ರತಿಬಿಂಬಿಸುವ ಸಾಹಿತ್ಯ ಎಂದರ್ಥ.

ಯಾವುದೇ ಭಾಷೆಯಲ್ಲಿ ನಿರೂಪಿತವಾಗಿರುವ ವಿಷಯವನ್ನು ಇನ್ನೊಂದು ಭಾಷೆಯಲ್ಲಿ ಯಥಾವತ್ತಾಗಿ ನಿರೂಪಿಸುವ ಕ್ರಿಯೆಯೇ 'ಭಾಷಾಂತರ.' ಅನುವಾದ ಪರ್ಯಾಯಪದ. ಮೊದಲನೆಯ ಭಾಷೆಗೆ ಮೂಲಭಾಷೆ ಎಂದೂ ಎರಡನೆಯದಕ್ಕೆ ಉದ್ದಿಷ್ಟ ಭಾಷೆ ಎಂದೂ ಹೆಸರು.

ಇಂಗ್ಲಿಷಿನಲ್ಲಿರುವ ವಿಜ್ಞಾನ ವಾಙ್ಮಯವನ್ನು ಯಥಾವತ್ತಾಗಿ ಕನ್ನಡಕ್ಕೆ ಭಾಷಾಂತರಿಸುವಾಗ ನಾವು ಎದುರಿಸುವ ವಿಶಿಷ್ಟ ಸಮಸ್ಯೆಗಳನ್ನು ಗುರುತಿಸಿ ಸಾಧ್ಯವಾಗುವಲ್ಲಿ ಪರಿಹಾರಗಳನ್ನು ಸೂಚಿಸುವುದು ಪ್ರಕೃತ ಪ್ರಬಂಧದ ಉದ್ದೇಶ. ಅನ್ಯಥಾ ಹೇಳದಿದ್ದರೆ, ಈ ಲೇಖನದ ವ್ಯಾಪ್ತಿಯಲ್ಲಿ, 'ಮೂಲ ಭಾಷೆ' ಇಂಗ್ಲಿಷನ್ನೂ 'ಉದ್ದಿಷ್ಟ ಭಾಷೆ' ಕನ್ನಡವನ್ನೂ ಪ್ರತಿನಿಧಿಸುತ್ತವೆ.

**ವಿಜ್ಞಾನದ ಭಾಷೆ**

"ವಿಜ್ಞಾನ ಒಂದು ಸಂಸ್ಥೆ, ಒಂದು ವಿಧಾನ, ಜ್ಞಾನದ ಸಂಗೃಹೀತ ಪರಂಪರೆ, ಉತ್ಪಾದನೆಯ ಮಟ್ಟವನ್ನು ಕಾದಿಡುವುದರಲ್ಲಿಯೂ ಉತ್ಪಾದನೆಯನ್ನು ಅಭಿವೃದ್ಧಿಪಡಿಸುವುದರಲ್ಲಿಯೂ ಪ್ರಧಾನವಾದ ಒಂದು ಅಂಶ ; ಮತ್ತು, ವಿಶ್ವ ಹಾಗೂ ಮಾನವನೆಡೆಗೆ ನಂಬಿಕೆಗಳನ್ನೂ ನಿಲವುಗಳನ್ನೂ ರೂಪಿಸುವ ಅತ್ಯಂತ ಸಾಮರ್ಥ್ಯವಂತ ಪ್ರಭಾವಗಳ ಪೈಕಿ ಒಂದು." ಶ್ರೇಷ್ಠ ವಿಜ್ಞಾನಿ ಜೆ. ಡಿ. ಬರ್ನಾಲ್(೧೯೦೧-೭೧) *Science in History* ಎನ್ನುವ ತಮ್ಮ ಗ್ರಂಥದಲ್ಲಿ ವಿಜ್ಞಾನ ಕುರಿತು ನೀಡಿರುವ ವಿವರಣೆ ಇದು. ಮಾನವನ ಅಸಂಖ್ಯಾತ ಸೃಜನಾತ್ಮಕ ಚಟುವಟಿಕೆಗಳ ಪರಿಧಿಯೊಳಗೆ ವಿಜ್ಞಾನವೂ ಸೇರಿದೆ. ವಿಶ್ವ ಒಡ್ಡುವ ಉದ್ದೀಪನೆಗೆ ಮಾನವಮನಸ್ಸಿನ ಅನುಕ್ರಿಯೆಯ ಒಂದು ಪ್ರಕಾರ ವಿಜ್ಞಾನ. ಒಂದೊಂದು ಸೃಜನಾತ್ಮಕ ಚಟುವಟಿಕೆಯೂ ಅದರದೇ ಆದ ವಿಶಿಷ್ಟ ಭಾಷೆಯ (ಮಾಧ್ಯಮದ) ಮೂಲಕ ಅಭಿವ್ಯಕ್ತಿಗೊಳ್ಳುವುದು ಸರಿಯಷ್ಟೆ. ಅಂತೆಯೇ ವಿಜ್ಞಾನಕ್ಕೂ ವಿಶಿಷ್ಟವಾದ ಒಂದು ಭಾಷೆ ಇದೆ.

ಇಂಗ್ಲಿಷಿನಲ್ಲಿ ವಿಜ್ಞಾನದ ಭಾಷೆಗೆ ಶಿಷ್ಟರೂಪ ಬಂದಿರುವುದರಿಂದಲೂ ನಮ್ಮ ಅಧ್ಯಯನ, ಚಿಂತನೆ, ಬೋಧನೆ ಸಾಧಾರಣವಾಗಿ ಅದೇ ಭಾಷೆಯಲ್ಲಿ ಇಂದು ಕೂಡ (೧೯೭೮) ನಡೆಯುತ್ತಿರುವುದರಿಂದಲೂ* ಅದರಲ್ಲಿರುವ ಶಿಷ್ಟ ಗ್ರಂಥಗಳನ್ನು ಒಮ್ಮೆ ಅವಲೋಕಿಸುವುದು ಅಪೇಕ್ಷಣೀಯ. ಹೀಗೆ ಮಾಡಿದ್ದೇ ಆದರೆ ಇಂಗ್ಲಿಷಿನಲ್ಲಿ ವಿಜ್ಞಾನದ ಭಾಷೆಗೆ ಮೂರು ಬಾಹ್ಯ ಲಕ್ಷಣಗಳಿವೆ ಎಂದು ತಿಳಿಯುತ್ತದೆ:

---

* ೨೦೦೪ರಲ್ಲಿ ಇನ್ನಷ್ಟು ತೀವ್ರವಾಗಿ

ವಿವರಣಾತ್ಮಕ—ವಿಷಯವನ್ನು ವಾಕ್ಯ ಸಮೂಹಗಳ ನೆರವಿನಿಂದ ವಿಶದವಾಗಿ ವಿವರಿಸುವುದು.

ಪ್ರತೀಕಾತ್ಮಕ—ಶಿಷ್ಟ ಪ್ರತೀಕ, ಸಂಕೇತ ಮತ್ತು ಚಿಹ್ನೆಗಳನ್ನು ನಿರ್ದಿಷ್ಟ ನಿಯಮಾನುಸಾರ ಬಳಸಿಕೊಂಡು ಭಾವನೆಗಳನ್ನು ಹ್ರಸ್ವೀಕರಿಸಿ ಚಿಂತನೆಯನ್ನು ಮುಂದುವರಿಸಿಕೊಂಡು ಹೋಗುವುದು.

ಚಿತ್ರಾತ್ಮಕ—ವಾಸ್ತವಿಕತೆಯನ್ನು ಬಿಂಬಿಸುವ ರೇಖಾಕೃತಿ, ಆಲೇಖ, ಚಿತ್ರ ಮುಂತಾದ ದೃಷ್ಟಿಸಹಾಯಕಗಳ ನೆರವಿನಿಂದ ಸಂಕೀರ್ಣ ಭಾವನೆಗಳಿಗೆ ಮೂರ್ತರೂಪ ಕೊಡುವುದು.

ಆದ್ದರಿಂದ ವಿಜ್ಞಾನದ ಭಾವನೆಗಳನ್ನು ವಾಕ್ಯ ಮತ್ತು ಪ್ರತೀಕಗಳಿಂದ ನಿರೂಪಿಸಬಲ್ಲೆವು. ಚಿತ್ರ ಮತ್ತು ಆಲೇಖಗಳಿಂದ ಸ್ಪಷ್ಟೀಕರಿಸಬಲ್ಲೆವು. ಹೀಗೆ ವಿಕಸಿಸಿರುವ ವಿಜ್ಞಾನದ ಭಾಷೆಯಲ್ಲಿ ನಾವು ಗಮನಿಸುವ ಮುಖ್ಯ ಲಕ್ಷಣಗಳಿವು (ಇಂಗ್ಲಿಷಿನಲ್ಲಿರುವ ಉತ್ಕೃಷ್ಟ ವಿಜ್ಞಾನ ಗ್ರಂಥಗಳನ್ನು ಪರಿಶೀಲಿಸಬಹುದು):

ಪಾರಿಭಾಷಿಕ ಪದಗಳ ಖಚಿತ ಅರ್ಥನಿರೂಪಣೆ

ಪ್ರತೀಕ, ಸಂಕೇತ ಮತ್ತು ಚಿಹ್ನೆಗಳು ಸೂಚಿಸುವ ಭಾವನೆಗಳ ವಿವರಣೆ

ಆದ್ಯುಕ್ತಿಗಳ ಹಾಗೂ ಅಭಿಗೃಹೀತಗಳ (assumptions) ಸ್ಪಷ್ಟೀಕರಣ

ತಾರ್ಕಿಕ ಸಾಮಂಜಸ್ಯ

ಸಾಹಿತ್ಯ ಸೌಂದರ್ಯ

ವಿಜ್ಞಾನದ ಭಾಷೆಯಲ್ಲಿ ಇಂಥ ಜಟಿಲ ಬಂಧ ಹಾಗೂ ಆಂತರಿಕ ಸಂಬಂಧ ಇರುವುದರಿಂದಲೇ ಅದು ನಿಸರ್ಗದ ವಿವಿಧ ಸಂಕೀರ್ಣ ವಿದ್ಯಮಾನಗಳನ್ನು ಮಿತಭಾಷೆಯಲ್ಲಿ ತರ್ಕಬದ್ಧವಾಗಿಯೂ ಸ್ಪಷ್ಟವಾಗಿಯೂ ಸುಂದರವಾಗಿಯೂ ವಿವರಿಸಬಲ್ಲ ಮಾಧ್ಯಮವಾಗಿದೆ. ಸಹಜವಾಗಿ ಇದು ಬಿಗಿ. ಎಂದೇ ಇದರ ಓದುಗನಲ್ಲಿ ವಿಶೇಷ ಏಕಾಗ್ರತೆ ಮತ್ತು ಶಿಸ್ತು ಅತ್ಯಗತ್ಯ.

ನ್ಯೂಟನ್ನನ ಕಾಲದಲ್ಲಿ (೧೬೪೨-೧೭೨೭) ಇನ್ನೂ ಜಟ್ಕಾವಾಲಾಗಳ ಹಲ್ಕಾ ಭಾಷೆ ಆಗಿದ್ದ ಇಂಗ್ಲಿಷ್ (ಹಾಗೆಂದು ಲ್ಯಾಟಿನ್ ಹಾಗೂ ಗ್ರೀಕ್ ದೇವಭಾಷಾಪರಿಣತ ಇಂಗ್ಲಿಷ್ ಕುಲೀನರು ಭಾವಿಸಿದ್ದರು!) ಇಂದು ಪ್ರಪಂಚದ ಸರ್ವಶ್ರೇಷ್ಠ ವಿಜ್ಞಾನ ಭಾಷೆಗಳ ಪೈಕಿ ಒಂದಾಗಿರುವುದರ (ನಮ್ಮ ದೃಷ್ಟಿಯಿಂದ ವಿಜ್ಞಾನದ ಭಾಷೆ ಎಂದರೆ ಇಂಗ್ಲಿಷ್ ಒಂದೇ) ಕಾರಣಗಳು ಮುಖ್ಯವಾಗಿ ಎರಡು : ಒಂದು, ಆ ಭಾಷೆಯ ಹವೆಯಲ್ಲಿ ಮಹೋನ್ನತ ವಿಜ್ಞಾನ ಸಂಶೋಧನೆಗಳು ಘಟಿಸಿದುವು, ಘಟಿಸುತ್ತಿವೆ. ಹೀಗಾಗಿ ಕ್ರಮೇಣ ಇಂಗ್ಲಿಷಿಗೆ ಇವುಗಳ ಅಭಿವ್ಯಕ್ತಿಮಾಧ್ಯಮವಾಗಿ ವಿಕಸಿಸುವ ಸುಯೋಗ ಪ್ರಾಪ್ತವಾಗಿದೆ. ಎರಡು, ರಾಜಕೀಯವಾಗಿ ಗ್ರೇಟ್ ಬ್ರಿಟನ್ (ಭಾಷೆ ಇಂಗ್ಲಿಷ್) ಪ್ರಪಂಚಾದ್ಯಂತ ವರ್ಚಸ್ವೀ ಸ್ಥಾನವನ್ನು ಗಿಟ್ಟಿಸಿತ್ತು. ಇಂಥ ಒಂದು ಭಾಷೆಯಲ್ಲಿ ಪಾರಿಭಾಷಿಕ ಪದಗಳ ಹಾಗೂ ಪದಗುಚ್ಛಗಳ ಸುತ್ತ ವಿಶಿಷ್ಟ ಭಾವನೆಗಳು ಕ್ರಮೇಣ ಹೆಪ್ಪುಗಟ್ಟಿ ಅವನ್ನು ಅಂಕಿತನಾಮಗಳ ಅಂತಸ್ತಿಗೆ ಏರಿಸಿಬಿಡುತ್ತವೆ. ಕೆಲವು ಸರಳ ಉದಾಹರಣೆಗಳನ್ನು ನೋಡಿ :

force, energy, power; speed, momentum, velocity; turning, rotation, revolution; invention, discovery, exploration, research

ಈ ಒಂದೊಂದು ಗುಂಪಿನಲ್ಲಿರುವ ಪದಗಳನ್ನು ಸಾಹಿತ್ಯ ಭಾಷೆಯಲ್ಲಿ ಪರ್ಯಾಯ ಪದಗಳಾಗಿ ಬಳಸಿದರೆ ಒಟ್ಟರ್ಥಕ್ಕೆ ಭಂಗ ಬರದು. ವಿಜ್ಞಾನಭಾಷೆಯಲ್ಲಿ ಹಾಗಲ್ಲ—ಅನರ್ಥವಾದೀತು. ಉದಾಹರಣೆಗೆ speed ಎಂದರೆ ಚಲನದರ. ಇದೊಂದು ಪರಿಮಾಣ (magnitude) ಮಾತ್ರ. ಇದಕ್ಕೆ ದಿಶೆ (direction) ಇಲ್ಲ. momentum ಎಂದರೆ ರಾಶಿ (mass) ಹಾಗೂ ವೇಗ (velocity) ಇವುಗಳ ಗುಣಲಬ್ಧ. ಇದಕ್ಕೆ ಪರಿಮಾಣವಿದೆ, ದಿಶೆ ಇದೆ. ದಿಶಾಸಹಿತವಾದ ಜವವೇ ವೇಗ. ಇದೊಂದು ಸದಿಶ (vector).

ಇಂಗ್ಲಿಷಿನಲ್ಲಿ ವಿಜ್ಞಾನವನ್ನು ಅಭ್ಯಸಿಸಿದವರು, ತಿಳಿದೊ ತಿಳಿಯದೆಯೊ, ಪಾರಿಭಾಷಿಕ ಪದಗಳನ್ನು ಸರಿಯಾಗಿಯೇ ಬಳಸುತ್ತಾರೆ, ನಾವು ನಮ್ಮ ಅಂಕಿತನಾಮಗಳನ್ನು ಸರಿಯಾಗಿ ಬಳಸುವಂತೆ. ಇದರಲ್ಲಿ ಅಸಹಜತೆ ಏನೂ ಎದ್ದು ಕಾಣುವುದಿಲ್ಲ. ಏಕೆಂದರೆ ವಿಜ್ಞಾನದ ಪ್ರಗತಿಯೂ ಅದರ ಸಂವಹನಮಾಧ್ಯಮವಾಗಿ ಇಂಗ್ಲಿಷಿನ ಅಭಿವರ್ಧನೆಯೂ ಕ್ರಮಶಃ ವಿಕಸಿಸಿವೆ.

### ವಿಜ್ಞಾನಭಾಷೆಯಾಗಿ ಕನ್ನಡ

ಆಧುನಿಕ ವಿಜ್ಞಾನದ ಭಾಷೆಯಾಗಿ ಕನ್ನಡ—ಅಷ್ಟೇಕೆ ಯಾವುದೇ ಭಾರತೀಯ ಭಾಷೆ ಕೂಡ—ವಿಕಾಸಗೊಂಡಿಲ್ಲ ಎಂಬುದು ಕಂಡಂತೆಯೇ ಇದೆ. ಕರ್ನಾಟಕದಲ್ಲಿ ಇಂದು 'ಕುಲೀನ'ರ ದೃಷ್ಟಿಯಿಂದ ಕನ್ನಡ 'ಹಲ್ಕಾ' ಭಾಷೆ, ಅಡುಗೆಮನೆಯಿಂದ (ಅಥವಾ ಕಿಚ್ಚನ್ನಿನಿಂದ) ಹೊರಗೆ ಬರಲು ಯೋಗ್ಯವಾದದ್ದಲ್ಲ; ಇಂಗ್ಲಿಷ್ ಆದರೊ 'ದೇವಭಾಷೆ,' ಸಾರ್ವತ್ರಿಕ ಮನ್ನಣೆ ಪಡೆಯಲು ಅರ್ಹವಾದದ್ದು.

ಕನ್ನಡಿಗರು ಕನ್ನಡದಲ್ಲಿ ವಿಜ್ಞಾನವನ್ನು ಯೋಚಿಸದೆ ಇದ್ದರೆ, ಕನ್ನಡದಲ್ಲಿ ವಿಜ್ಞಾನವನ್ನು ಬೋಧಿಸದೆ ಇದ್ದರೆ, ಕನ್ನಡದಲ್ಲಿ ವಿಜ್ಞಾನವನ್ನು ಓದದೆ ಇದ್ದರೆ, ಕನ್ನಡದಲ್ಲಿ ವಿಜ್ಞಾನದ ಸಮಸ್ತ ಚಟುವಟಿಕೆಗಳನ್ನೂ ಎಸಗದೆ ಇದ್ದರೆ ಕನ್ನಡ ಎಂದೂ ವಿಜ್ಞಾನದ ಭಾಷೆಯಾಗಿ ಬಡ್ತಿ ಪಡೆಯಲಾರದು. ಸದ್ಯದ (೨೦೦೪) ಪರಿಸ್ಥಿತಿ ಹೇಗಿದೆ? ಕನ್ನಡ ವ್ಯವಸ್ಥಿತವಾಗಿ ವಿಜ್ಞಾನದ ಭಾಷೆಯಾಗಿ ಅಭಿವರ್ಧನೆಗೊಂಡಿರುವಂತೆ ತೋರುವುದಿಲ್ಲ. ಇಂಥ ಕನ್ನಡಕ್ಕೆ —ಆಧುನಿಕ ವಿಜ್ಞಾನದ ಅಭಿವ್ಯಕ್ತಿ ಮಾಧ್ಯಮವಾಗಿ ಸಹಜವಿಕಾಸ ಕ್ರಮದಲ್ಲಿ ರೂಪುಗೊಂಡಿರದ ಕನ್ನಡಕ್ಕೆ—ಇಂಗ್ಲಿಷಿನಿಂದ ವಿಜ್ಞಾನವಾಙ್ಮಯವನ್ನು ಆಮದು ಮಾಡುವಾಗ (ಅಂದರೆ ಭಾಷಾಂತರಿಸುವಾಗ) ಉದ್ಭವಿಸುವ ಸಮಸ್ಯೆಗಳಿಗೆ ಮುಖ್ಯತಃ ಎರಡು ಮುಖಗಳಿವೆ: ವ್ಯಕ್ತಿಮೂಲ, ಕೃತಿಮೂಲ.

### ವ್ಯಕ್ತಿಮೂಲ ಸಮಸ್ಯೆಗಳು

ನಮ್ಮ ಅನೇಕ 'ವಿದ್ವಾಂಸರು' ಎಷ್ಟರಮಟ್ಟಿಗೆ ಇಂಗ್ಲಿಷ್ ಸಂಮೋಹನಾಸ್ತ್ರದಿಂದ ಸ್ವಂತತ್ವವನ್ನು ಕಳೆದುಕೊಂಡುಬಿಟ್ಟಿದ್ದಾರೆ ಎಂಬುದನ್ನು ಗಮನಿಸುವಾಗ ಖೇದವಾಗುತ್ತದೆ. ಇಂಥವರಿಂದ ದೇಶಕ್ಕೆ ಎರಡು ಬಗೆಯ ನಷ್ಟ ಉಂಟು: ಇವರ 'ವಿದ್ವತ್ತು' ಇಂಗ್ಲಿಷ್ ಮೂಲಕ ಹೊರಲೋಕವನ್ನೆಂದೂ ಸಂಪರ್ಕಿಸುವುದಿಲ್ಲ, ಆ ಭಾಷೆಯಲ್ಲಿ ಬರೆದಿರುವ ಹಾಗೂ ಬರೆಯಬಲ್ಲ ಪ್ರಪಂಚದ ಘಟಾನುಘಟಿಗಳ ಮುಂದೆ ಇವರಿಗೆ ಯಾವ ಸ್ಥಾನವೂ ದೊರೆಯದು; ಕನ್ನಡದಲ್ಲಿ ಬರೆಯಲು ಯಾ ಬೋಧಿಸಲು ಇವರಿಗೆ ಬರದು,

ಏಕೆಂದರೆ ಈ ದಿಶೆಯಲ್ಲಿ ಇವರು ಏನೂ ಕೃಷಿ ಮಾಡಿಲ್ಲ (ಮಾಡುವ ಮನಸ್ಸೂ ಇಲ್ಲ.)

ಈ ಖೋಟಾ ವಿದ್ವಾಂಸರು ಕನ್ನಡದಲ್ಲಿ ಪ್ರಕಟವಾಗುವ ಯಾವುದೇ ಭಾಷಾಂತರವನ್ನು (ಇಲ್ಲವೇ ಸ್ವತಂತ್ರ ಕೃತಿಯನ್ನು) ಕುರಿತಂತೆ ಪೂರ್ವಗ್ರಹಪೀಡಿತರಾಗಿ "ಇದು ವಿಜ್ಞಾನದ ಕೊಲೆ. ಅರ್ಥವಾಗುವುದಿಲ್ಲ. ಬರವಣಿಗೆ ಸರಳ, ಸುಂದರ, ಆಕರ್ಷಕವಾಗಿರದಿದ್ದರೆ ಅದರ ಪ್ರಯೋಜನವೇನು?" ಎಂಬ ಸಾರ್ವತ್ರಿಕ ಧೋರಣೆ ತಳೆಯುತ್ತಾರೆ. ಉನ್ನತ ಸ್ಥಾನಗಳನ್ನು 'ಅಲಂಕರಿಸಿರುವ' ಇಂಥ ಶೂನ್ಯವಾದಿಗಳಿಂದ ಕನ್ನಡಕ್ಕೆ ಆಗಿರುವ ಹಾಗೂ ಆಗುತ್ತಿರುವ ಹಾನಿ ಅಪಾರ.

ಸ್ವತಃ ವಿಜ್ಞಾನಲೇಖಕ ಶಿವರಾಮ ಕಾರಂತರಿಗೆ (೧೯೦೨-೯೭) ರಿಚರ್ಡ್ ಕೂರಾಂಟನ (ಈತ ಪ್ರಸಿದ್ಧ ಗಣಿತವಿದ) ಬರೆಹವೊಂದರ ಕನ್ನಡ ಭಾಷಾಂತರವನ್ನು ಒಪ್ಪಿಸಿದೆ. ಅದರ ಆಯ್ದ ಭಾಗ ನೋಡಿ :

ನಿಗಮನ ಹೇಗೆ ಅಂತರ್ಬೋಧೆಯಿಂದ ಪರಿಪುಷ್ಟಿಗೊಂಡಿರಬೇಕೊ ಹಾಗೆ ಕ್ರಮಾಗತ ಸಾರ್ವತ್ರೀಕರಣ ಮಾಡಬೇಕೆಂಬ ತೀವ್ರಾಕಾಂಕ್ಷೆ ವರ್ಣವೈವಿಧ್ಯಯುತ ವಿವರವನ್ನು ಕುರಿತ ಗೌರವ ಮತ್ತು ಪ್ರೀತಿಯಿಂದ ಹದಗೊಂಡಿರಬೇಕು ಮತ್ತು ಸಂತುಲಿತವಾಗಿರಬೇಕು. ಬಿಡಿ ಸಮಸ್ಯೆಯೊಂದನ್ನು ಉನ್ನತ ಸಾರ್ವತ್ರಿಕ ಸಿದ್ಧಾಂತಗಳ ವಿಶೇಷ ನಿದರ್ಶನವೆಂಬ ಕೀಳುದರ್ಜೆಗೆ ತಳ್ಳುವುದು ಸಲ್ಲ.

ತಿರಸ್ಕಾರ ಧೋರಣೆಯಿಂದ ಈ ಪರಿಚ್ಛೇದದ ಮೇಲೆ ಕಣ್ಣು ಹಾಯಿಸಿದ ಶ್ರೀಯುತರು, "ಒಂದು ಸಾಲೂ ಅರ್ಥವಾಗುವುದಿಲ್ಲ. Communication fails" ಎಂದು ಇಂಗ್ಲಿಷಿನಲ್ಲಿ ಅಪ್ಪಣೆ ಕೊಡಿಸಿದರು. ಆಗ ಅವರಿಗೆ ಇದೇ ಬರೆಹದ ಇಂಗ್ಲಿಷ್‌ಮೂಲದ ಪೂರ್ಣ ಪಾಠವನ್ನು ತೋರಿಸಿದೆ. ಅದರ ಸಂವಾದೀ ಭಾಗ ನೋಡಿ :

Just as deduction should be supplemented by intuition, so the impulse to progressive generalization must be tempered and balanced by respect and love for colourful detail. The individual problem should not be degraded to the rank of special illustration of lofty general theories.

ಅವರ ಪ್ರತಿಕ್ರಿಯೆ ಅರ್ಥಹೀನ ಮೌನ ಮಾತ್ರ!( ಪುಟ ೯೨, ೯೩, ೯೫ರಲ್ಲಿ ಪ್ರಕಟಿಸಿರುವ ಅವರ ಪ್ರತಿಕ್ರಿಯೆಗಳನ್ನು ಗಮನಿಸಿ. ನೋಡಿ—ಪುಟ ೫೪ -೫೫.)

ನನ್ನ ಅಂಬೋಣವಿದು: ಇಂಗ್ಲಿಷಿನಲ್ಲಿರುವ ಎಲ್ಲ ವಾಙ್ಮಯವೂ ಇಂಗ್ಲಿಷ್ ಮಾತೃಭಾಷೆ ಆಗಿರುವ ಎಲ್ಲರಿಗೂ ಅರ್ಥವಾಗದು, ಅರ್ಥವಾಗಬೇಕಾಗಿಯೂ ಇಲ್ಲ. ಇದನ್ನು ಸುಲಭವಾಗಿ ಅನುಮೋದಿಸುವ ನಮ್ಮ 'ವಿದ್ವಾಂಸರು' ಕನ್ನಡಕ್ಕಾಗುವಾಗ (ಇವರು ಕನ್ನಡಿಗರೆಂಬುದನ್ನು ಮರೆಯಬಾರದು) ತದ್ವಿರುದ್ಧ ನಿಲವನ್ನು ತಳೆಯುತ್ತಾರೆ. ಕನ್ನಡದಲ್ಲಿರುವ ಎಲ್ಲ ವಿಜ್ಞಾನವಾಙ್ಮಯವೂ ಕನ್ನಡ ಮಾತೃಭಾಷೆಯಾಗಿರುವ ಎಲ್ಲರಿಗೂ ಅರ್ಥವಾಗಬೇಕು ಎಂದು ವಾದಿಸುತ್ತಾರೆ, "ಇದು ನನಗೆ ತಿಳಿಯುವುದಿಲ್ಲ, ಆದ್ದರಿಂದ ಗೋಟಾಳೆ" ಎಂದು ಸಾಧಿಸುತ್ತಾರೆ! ಉಚ್ಚಸ್ಥಾನಗಳಲ್ಲಿ ಇಂಥ ಅವೈಜ್ಞಾನಿಕ ನಿಲವು ಇರುವುದು ಕನ್ನಡ ವಿಜ್ಞಾನ ವಾಙ್ಮಯ ಎದುರಿಸಬೇಕಾಗಿರುವ ಬಲು ದೊಡ್ಡ ವ್ಯಕ್ತಿಮೂಲ ಸಮಸ್ಯೆ. ತಿಳಿಯದಿದ್ದರೂ ತಿಳಿದಿದೆ ಎಂದು ತಿಳಿದಿರುವ ಇಂಥವರು ಖಂಡಿತ ಹೊಂತಕಾರಿಗಳು.

ಇನ್ನೊಂದು ವ್ಯಕ್ತಿಮೂಲ ಸಮಸ್ಯೆಯನ್ನು ತಿಳಿಯುವ ಮೊದಲು ಈ ಮುಂದಿನ ಎರಡು ಉದಾಹರಣೆಗಳನ್ನು ಎಚ್ಚರಿಕೆಯಿಂದ ಗಮನಿಸುವುದು ಅವಶ್ಯ. (ಈ ಲೇಖನದಲ್ಲಿ ಉಲ್ಲೇಖಿಸಿರುವ ಎಲ್ಲ ಉದಾಹರಣೆಗಳನ್ನೂ ಮುದ್ರಿತ ಲೇಖನ ಇಲ್ಲವೆ ಪುಸ್ತಕಗಳಿಂದ ಆಯಲಾಗಿದೆ.)

ಮೂಲ : Acid solutions turn blue litmus red. There are, however, a number of solutions which turn red litums blue and which neutralize acids. These are the alkalis. There are four principal ones, of which ammonium hydroxide, commonly called 'household' ammonia, is probably the best known, the others are sodium hydroxide, potassium hydroxide and calcium hydroxide. Substances that are able to neutralize acids are known as bases. The alkalis are not the only bases: they are merely the ones which will dissolve in water to give a solution. The other bases are the oxides and the (insoluble) hydroxides of metals. When a base neutralizes an acid it produces a salt and water only. This is how a chemist defines a base.

ಭಾಷಾಂತರ ೧ : ಆಮ್ಲ ದ್ರಾವಣಗಳು ನೀಲಿ ಲಿಟ್ಮಸನ್ನು ಕೆಂಪು ಬಣ್ಣಕ್ಕೆ ತಿರುಗಿಸುತ್ತವೆ. ಆದರೆ ಕೆಂಪು ಲಿಟ್ಮಸನ್ನು ನೀಲಿಬಣ್ಣಕ್ಕೆ ತಿರುಗಿಸುವ ಮತ್ತು ಆಮ್ಲಗಳನ್ನು ತಟಸ್ಥಗೊಳಿಸುವ ಅನೇಕ ದ್ರಾವಣಗಳಿವೆ. ಇವೇ ಕ್ಷಾರಗಳು. ನಾಲ್ಕು ಮುಖ್ಯ ಕ್ಷಾರಗಳಿವೆ. ಅವುಗಳಲ್ಲಿ ಸಾಮಾನ್ಯವಾಗಿ 'ಮನೆ ಬಳಕೆಯ ಅಮೋನಿಯಾ' ಎಂದು ಕರೆಯಲ್ಪಡುವ ಅಮೋನಿಯಮ್ ಹೈಡ್ರಾಕ್ಸೈಡ್ ಬಹುಶಃ ಎಲ್ಲದಕ್ಕಿಂತ ಚೆನ್ನಾಗಿ ಪರಿಚಿತವಾಗಿರುವುದು. ಸೋಡಿಯಮ್ ಹೈಡ್ರಾಕ್ಸೈಡ್, ಪೊಟ್ಯಾಸಿಯಮ್ ಹೈಡ್ರಾಕ್ಸೈಡ್ ಮತ್ತು ಕ್ಯಾಲ್ಸಿಯಮ್ ಹೈಡ್ರಾಕ್ಸೈಡ್‌ಗಳು ಇತರ ಮೂರು ಕ್ಷಾರಗಳು. ಆಮ್ಲಗಳನ್ನು ತಟಸ್ಥಗೊಳಿಸುವ ವಸ್ತುಗಳಿಗೆ ಪ್ರತ್ಯಾಮ್ಲಗಳೆಂದು ಹೆಸರು. ಪ್ರತ್ಯಾಮ್ಲಗಳೆಂದರೆ ಕ್ಷಾರಗಳು ಮಾತ್ರ ವಲ್ಲ. ನೀರಿನಲ್ಲಿ ಕರಗಿ ದ್ರಾವಣವನ್ನು ಕೊಡಬಲ್ಲ ಪ್ರತ್ಯಾಮ್ಲಗಳನ್ನು ಮಾತ್ರ ಕ್ಷಾರಗಳೆನ್ನುತ್ತಾರೆ. ಇತರ ಪ್ರತ್ಯಾಮ್ಲಗಳೆಂದರೆ ಲೋಹಗಳ ಆಕ್ಸೈಡುಗಳು ಮತ್ತು (ಕರಗದ) ಹೈಡ್ರಾಕ್ಸೈಡುಗಳು. ಪ್ರತ್ಯಾಮ್ಲವು ಆಮ್ಲವನ್ನು ತಟಸ್ಥಗೊಳಿಸಿದಾಗ ಒಂದು ಲವಣ ಮತ್ತು ನೀರು ಮಾತ್ರ ಉತ್ಪತ್ತಿ ಯಾಗುತ್ತವೆ. ರಸಾಯನಶಾಸ್ತ್ರಜ್ಞರು 'ಪ್ರತ್ಯಾಮ್ಲ' ಎಂಬ ಪದಕ್ಕೆ ವ್ಯಾಖ್ಯೆ ನೀಡುವುದು ಹೀಗೆ.

ಭಾಷಾಂತರ ೨ : ಆಮ್ಲ ದ್ರಾವಣಗಳು ನೀಲಿ ಲಿಟ್ಮಸನ್ನು ಕೆಂಬಣ್ಣಕ್ಕೆ ತಿರುಗಿಸುತ್ತವೆ. ಕೆಂಪು ಲಿಟ್ಮಸನ್ನು ನೀಲಿ ಬಣ್ಣಕ್ಕೆ ತಿರುಗಿಸುವ ಮತ್ತು ಆಮ್ಲಗಳನ್ನು ತಟಸ್ಥೀಕರಿಸುವ ಹಲವಾರು ದ್ರಾವಣ ಗಳಿವೆ ಎಂದರೆ ನಿಮಗೆ ಆಶ್ಚರ್ಯವಾದೀತು. ಇವು ಕ್ಷಾರಗಳು. ನಾಲ್ಕು ಪ್ರಧಾನಕ್ಷಾರಗಳಿವೆ. ಇವುಗಳ ಪೈಕಿ ಅತ್ಯಂತ ಸುಪರಿಚಿತವಾದದ್ದು ಅಮೋನಿಯಮ್ ಹೈಡ್ರಾಕ್ಸೈಡ್—ಗೃಹೋಪಯೋಗೀ ಅಮೋನಿಯವೆಂದು ಪ್ರಸಿದ್ಧವಾಗಿದೆ. ಸೋಡಿಯಮ್ ಹೈಡ್ರಾಕ್ಸೈಡ್, ಪೊಟ್ಯಾಸಿಯಮ್ ಹೈಡ್ರಾಕ್ಸೈಡ್ ಮತ್ತು ಕ್ಯಾಲ್ಸಿಯಮ್ ಹೈಡ್ರಾಕ್ಸೈಡ್ ಇತರ ಕ್ಷಾರಗಳು. ಆಮ್ಲಗಳನ್ನು ತಟಸ್ಥೀಕರಿಸಬಲ್ಲ ಪದಾರ್ಥಗಳಿಗೆ ವ್ಯಾಪಕವಾಗಿ ಪ್ರತ್ಯಾಮ್ಲಗಳೆಂದು ಹೆಸರು. ಕ್ಷಾರಗಳು ಮಾತ್ರವೇ ಪ್ರತ್ಯಾಮ್ಲಗಳಲ್ಲ —ಇವು ನೀರಿನಲ್ಲಿ ವಿಲೀನಿಸಿ ದ್ರಾವಣ ಕೊಡಬಲ್ಲ ಪ್ರತ್ಯಾಮ್ಲಗಳು, ಅಷ್ಟೆ. ಇತರ ಪ್ರತ್ಯಾಮ್ಲ ಗಳೆಂದರೆ ಲೋಹಗಳ ಆಕ್ಸೈಡುಗಳು ಹಾಗೂ (ಲೀನಿಸದ) ಹೈಡ್ರಾಕ್ಸೈಡುಗಳು. ಆಮ್ಲವನ್ನು ಪ್ರತ್ಯಾಮ್ಲ ತಟಸ್ಥೀಕರಿಸಿದಾಗ ಲವಣ ಮತ್ತು ನೀರು ಮಾತ್ರ ಉತ್ಪತ್ತಿ ಆಗುತ್ತವೆ—ರಸಾಯನವಿಜ್ಞಾನಿಗಳು ಪ್ರತ್ಯಾಮ್ಲವನ್ನು ವ್ಯಾಖ್ಯಿಸುವುದು ಹೀಗೆ.

ಟೀಕೆ : ವಿಜ್ಞಾನ ಪರಿಕಲ್ಪನೆಯ ಸೂಕ್ಷ್ಮ ತಂತುಗಳನ್ನು ಗ್ರಹಿಸದೆ ಬೇಕಾಬಿಟ್ಟಿಯಾಗಿ ಮಾಡಿದ ಭಾಷಾಂತರ ಮೊದಲನೆಯದು. ಅದರ ಭಾಷೆಯೂ ಜಾಳುಜಾಳಾಗಿದೆ. ಮೂಲಕ್ಕೆ ಅತ್ಯಂತ ಸಮೀಪವಾಗಿದ್ದು ಕನ್ನಡದ ಜಾಯಮಾನವನ್ನೂ ಪಾರಿಭಾಷಿಕ ಪದಗಳ ಬಳಕೆಯಲ್ಲಿ ನಿಷ್ಕೃಷ್ಟತೆಯನ್ನೂ ಕಾಪಾಡಿಕೊಂಡಿರುವ ಭಾಷಾಂತರ ಎರಡನೆಯದು. ಮುಖ್ಯವಾಗಿ, ಭಾಷಾಂತರ ೧ರಲ್ಲಿಯ ಎರಡನೆಯ ವಾಕ್ಯದ "ಆದರೆ"ಯ ಔಚಿತ್ಯವನ್ನು ಗಮನಿಸಿ. ಈ ತೊಂದರೆಯನ್ನು ಭಾಷಾಂತರ ೨ರಲ್ಲಿ ನಿವಾರಿಸಲಾಗಿದೆ. ಅಲ್ಲದೆ, ಕರಗು melt, ಲೀನವಾಗು dissolve—ಇವು ಎರಡು ಬೇರೆ ಬೇರೆ ರಾಸಾಯನಿಕ ಕ್ರಿಯೆಗಳು.

ಮೂಲ : It was the existence of electrons, and of subatomic particles generally, that was to bring a new degree of order into the table of elements.

ಭಾಷಾಂತರ ೧ : ಎಲೆಕ್ಟ್ರಾನುಗಳ—ಸಾರ್ವತ್ರಿಕವಾಗಿ ಉಪಪರಮಾಣವಿಕ ಕಣಗಳ—ಅಸ್ತಿತ್ವದ ಕಾರಣವಾಗಿ ಧಾತುಕೋಷ್ಟಕಕ್ಕೆ ಕ್ರಮಬದ್ಧತೆಯ ಹೊಸಮಟ್ಟ ಒದಗಿಬಂತು.

ಭಾಷಾಂತರ ೨ : ಎಲೆಕ್ಟ್ರಾನುಗಳೂ, ವ್ಯಾಪಕವಾಗಿ, ಉಪಪರಮಾಣ್ವಿಕ ಕಣಗಳೂ ಉಂಟೆಂದು ತಿಳಿದುಬಂದದ್ದರಿಂದ ಮೂಲವಸ್ತುಗಳ ಸಾರಣಿಗೆ ಹೊಸ ದರ್ಜೆಯ ವ್ಯವಸ್ಥೆ ಬಂದಿತು.

ಟೀಕೆ : ಭಾಷಾಂತರ ೨ ಅವಾಂತರವಾಗಿವೆ ಎಂದು ವಿವರಿಸಬೇಕಾಗಿಲ್ಲ. ಪಾರಿಭಾಷಿಕ ಪದಗಳ ಬಳಕೆಯಲ್ಲಿಯ ಗೊಂದಲವೊಂದೇ ಇದರ ಕಾರಣ ಅಲ್ಲ. ಈ ಭಾಷಾಂತರಕಾರನಿಗೆ ಮೂಲ ನಿರೂಪಣೆಯ ಹಿನ್ನೆಲೆಯಲ್ಲಿರುವ ವಿಜ್ಞಾನ ಪರಿಕಲ್ಪನೆಗಳ ಪರಿಚಯವಿಲ್ಲದ್ದರಿಂದ ಭಾಷಾಂತರ ವಿಕಾರರೂಪಿ ಆಗಿದೆ.

ಈಗ ನೀವೇ ಈ ಮುಂದಿನ ಹೇಳಿಕೆಯನ್ನು ಮಂಡಿಸಬಲ್ಲಿರಿ: ಇಂಗ್ಲಿಷಿನಿಂದ ಕನ್ನಡಕ್ಕೆ ವಿಜ್ಞಾನ ವಾಙ್ಮಯವನ್ನು ಭಾಷಾಂತರಿಸುವುದೆಂದರೆ ಪರಭಾಷೆಯಲ್ಲಿರುವ ವಿಜ್ಞಾನದ ಸಾರ್ವತ್ರಿಕ ಪರಿಕಲ್ಪನೆಯನ್ನು ಸ್ವಭಾಷೆಯಲ್ಲಿ ಪುನಸ್ಸೃಷ್ಟಿಸುವುದು. ನಿದರ್ಶನಾರ್ಥ ಎರಡನೆಯ ಉದಾಹರಣೆಯನ್ನು ಇನ್ನೊಮ್ಮೆ ಪರಿಶೀಲಿಸಿ. ಎಲೆಕ್ಟ್ರಾನುಗಳ, ಅಂತೆಯೇ, ಇತರ ಉಪಪರಮಾಣವಿಕ ಕಣಗಳ, ಧಾತುಕೋಷ್ಟಕದ (ಅಥವಾ ಆವರ್ತಕೋಷ್ಟಕದ) ಏರ್ಪಾಡು—ಇವು ವಿಜ್ಞಾನದ ಸಾರ್ವತ್ರಿಕ ಪರಿಕಲ್ಪನೆಗಳು, ಎಲ್ಲ ಕಾಲಗಳಲ್ಲೂ ಎಲ್ಲ ದೇಶಗಳಲ್ಲೂ ಬದಲಾಗದೆ ಉಳಿಯುವಂಥವು. "ಮೂಲ"ದಲ್ಲಿ ಇವು ಇಂಗ್ಲಿಷ್ ಪೋಷಾಕು ಧರಿಸಿ ವಿಜೃಂಭಿಸಿದರೆ "ಭಾಷಾಂತರ ೧"ರಲ್ಲಿ ಕನ್ನಡದ ಉಡುಗೆ ತೊಟ್ಟು ಮೆರೆಯುತ್ತಿವೆ.

ಆದ್ದರಿಂದ ಭಾಷಾಂತರ ಪ್ರಮುಖ ಆವಶ್ಯಕತೆಗಳು ಎರಡು : ಒಂದು, ವಿಜ್ಞಾನ ಪರಿಕಲ್ಪನೆಗಳನ್ನು ಅರ್ಥವಿಸಬಲ್ಲಷ್ಟು ವಿಷಯದ ಮೇಲೆ ಪ್ರಭುತ್ವ ; ಎರಡು, ಮೂಲ ಹಾಗೂ ಉದ್ದಿಷ್ಟ ಭಾಷೆಗಳೆರಡರಲ್ಲೂ ಪ್ರಾವೀಣ್ಯ. ವಾಸ್ತವವಾಗಿ ಭಾಷಾಂತರಕಾರ ಉದ್ದಿಷ್ಟ ಭಾಷೆಯಲ್ಲಿ ಒಬ್ಬ ಸೃಜನಾತ್ಮಕ ಲೇಖಕನೇ ಆಗಿರಬೇಕು. ಈ ಅಂಶವನ್ನು ಮುಂದೆ ವಿಶದೀಕರಿಸಿದೆ.

ಈಗ, ಇನ್ನೊಂದು ವ್ಯಕ್ತಿಮೂಲ ಸಮಸ್ಯೆಗೆ ಬರೋಣ. ನಮ್ಮ ಬಹುಮಂದಿ ಭಾಷಾಂತರಕಾರರಲ್ಲಿ ಮೇಲಿನ ಎರಡು ಪ್ರಮುಖ ಆವಶ್ಯಕತೆಗಳ ಪೈಕಿ ಒಂದಾದರೂ ಗೈರುಹಾಜರಾಗಿರುವುದರಿಂದ ಈ ಸಮಸ್ಯೆ ಉದ್ಭವಿಸುತ್ತದೆ: ವಿಷಯಪ್ರಭುತ್ವವಿರು

ವಾತನಿಗೆ ಉದ್ದಿಷ್ಟ ಭಾಷೆಯಲ್ಲಿ ಕೈಯಾಡಿಸುವ ತಾಕತ್ತಿಲ್ಲ: ಭಾಷಾಪ್ರಭುತ್ವವಿರುವಾತನಿಗೆ ವಿಷಯದ ಬಗೆಗಿನ ತಿಳಿವಳಿಕೆ ಅತ್ಯಲ್ಪ. ಕೆಲವು ಉದಾಹರಣೆಗಳನ್ನು ನೋಡಿ.

ಮೂಲ : The earth rotates round itself and revolves round the sun.

ಭಾಷಾಂತರ ೧ : ಭೂಮಿ ತನ್ನ ಸುತ್ತ ತಿರುಗುತ್ತದೆ ಮತ್ತು ಸೂರ್ಯನ ಸುತ್ತ ಪ್ರದಕ್ಷಿಣೆ ಹಾಕುತ್ತದೆ.

ಭಾಷಾಂತರ ೨: ಭೂಮಿ ತನ್ನ ಸುತ್ತ ಆವರ್ತಿಸುತ್ತದೆ ಮತ್ತು ಸೂರ್ಯನ ಸುತ್ತ ಪರಿಭ್ರಮಿಸುತ್ತದೆ.

ಟೀಕೆ : ಪ್ರಕೃತ ಸಂದರ್ಭದಲ್ಲಿ rotate (rotation) ಮತ್ತು revolve (revolution) ಎರಡು ವಿಭಿನ್ನ ಭೌತ ಕ್ರಿಯೆಗಳು. ಎಂದೇ ಅವನ್ನು ಪ್ರತಿನಿಧಿಸಲು ಎರಡು ಬೇರೆ ಬೇರೆ ಪದಗಳು ಇರುವುದಾಗಿದೆ. ಯಾವುದೇ ಭಾಷೆ ಸುಪುಷ್ಟವಾಗಿ ಸರ್ವಾಂಗ ಸುಂದರವಾಗಿ ಅಭಿವರ್ಧಿಸುವ ವಿಧಾನವೂ ಇದೇ. ಭಾಷಾಂತರ ೧ರಲ್ಲಿ 'ತಿರುಗು' ಮತ್ತು 'ಪ್ರದಕ್ಷಿಣೆ ಹಾಕು' ಪ್ರಯೋಗಗಳಿವೆ. ಆದರೆ ವಿಷಯದ ಮೇಲಿನ ಪ್ರಭುತ್ವದಿಂದ ಈ ಭಿನ್ನ ಪ್ರಯೋಗಗಳು ಬಂದಿವೆ ಎನ್ನುವುದಕ್ಕಿಂತಲೂ ಮೂಲದಲ್ಲಿ ಎರಡು ಬೇರೆ ಬೇರೆ ಪದಗಳಿರುವುದರಿಂದ ಭಾಷಾಂತರದಲ್ಲಿಯೂ ಹಾಗೆ ಇರುವುದು ಕ್ಷೇಮ ಎಂಬ ಅಳುಕಿನಿಂದ ಬಂದಿವೆ ಎನ್ನುವುದೇ ಹೆಚ್ಚು ಸಮಂಜಸವಾದದ್ದು. ಅಲ್ಲದೇ, ಸ್ಪಷ್ಟವಾಗಿ, 'ಪ್ರದಕ್ಷಿಣೆ ಹಾಕು' ಪದ ದೋಷಪೂರ್ಣವಾಗಿದೆ : 'ಪ್ರದಕ್ಷಿಣೆ' ಪದದಲ್ಲಿ ಚಲನದಿಶೆ ಅಧ್ಯಾಹಾರವಾಗಿದೆ. ಇದು ವಾಸ್ತವ ಪರಿಸ್ಥಿತಿಗೆ ವಿರುದ್ಧವಾದದ್ದು. ಭಾಷಾಂತರ ೨ ಈ ಸಂದಿಗ್ಧತೆಯನ್ನು 'ಆವರ್ತಿಸು' (ಆವರ್ತನೆ) ಮತ್ತು 'ಪರಿಭ್ರಮಿಸು' (ಪರಿಭ್ರಮಣೆ) ಪದಗಳ ಬಳಕೆಯಿಂದ ಯಶಸ್ವಿಯಾಗಿ ನಿವಾರಿಸಿದೆ. ವಿಷಯದ ಮೇಲೆ ಪ್ರಭುತ್ವ ಹೇಗೆ ಅನಿವಾರ್ಯ ಎಂಬುದನ್ನು ಮೇಲಿನ ಉದಾಹರಣೆ ಸ್ಪಷ್ಟಪಡಿಸುತ್ತದೆ.

ಇಂಗ್ಲಿಷ್ ಭಾಷಾಜ್ಞಾನ ಚೆನ್ನಾಗಿಲ್ಲದಿರುವ ವಿಷಯ ತಜ್ಞರಿಂದ ಘಟಿಸಿರುವ ಅಪಚಾರಗಳಿಗೆ ಕೆಲವು ಉದಾಹರಣೆಗಳು : Church's intervention in scientific matters ಎಂಬುದು 'ವೈಜ್ಞಾನಿಕ ವಿಚಾರಗಳಲ್ಲಿ ಚರ್ಚ್ ಎಂಬಾತನ ಹಸ್ತಕ್ಷೇಪ' ('ವೈಜ್ಞಾನಿಕ ವಿಚಾರಗಳಲ್ಲಿ ಇಗರ್ಜಿಯ [ಅಥವಾ ಧರ್ಮದ] ಹಸ್ತಕ್ಷೇಪ' ಎಂಬುದರ ಬದಲಾಗಿ) ಎಂದಾಗಿದೆ. The role played by the governor in the computer ಎಂಬುದು 'ರಾಜ್ಯಪಾಲರು ಗಣಕದಲ್ಲಿ ಅಭಿನಯಿಸುವ ಪಾತ್ರ' ('ಗಣಕದಲ್ಲಿ ನಿಯಂತ್ರಕದ ಪಾತ್ರ' ಎಂಬುದರ ಬದಲಾಗಿ) ಎಂದಾಗಿದೆ. All summer long Mendel was busy over his flower beds ಎಂಬುದು 'ಇಡೀ ಬೇಸಗೆ ಕಾಲ ನೀಳಕಾಯದ ಮೆಂಡಲನು ತನ್ನ ಹೂಹಾಸಿಗೆಗಳಲ್ಲಿ ಮಗ್ನನಾಗಿದ್ದ' ('ತಾನು ಮಾಡಿದ್ದ ಸಸಿ ಪಾತಿಗಳನ್ನು ಗಮನಿಸುವುದರಲ್ಲೇ ಮೆಂಡಲ್ ಬೇಸಗೆ ಪೂರ್ತಿ ಮಗ್ನನಾಗಿದ್ದ' ಎಂಬುದಕ್ಕೆ ಬದಲಾಗಿ) ಎಂದಾಗಿದೆ!

ಇವು ವಿಷಯಪ್ರಭುತ್ವ ಇಲ್ಲದ ಅಪದವೀಧರರಿಂದ ಘಟಿಸಿರುವ ಅಪರಾಧಗಳು ಅಲ್ಲ! ತಜ್ಞರು (?) ಉಡಾಫೆಯಿಂದ ಗೀಚಿದ 'ನೊಣ ಅನುವಾದಗಳು!'

ಭಾಷಾಂತರ ಕ್ರಿಯೆಯನ್ನು ಕುರಿತು ಹೇಳುವುದಾದರೆ ಭಾಷಾಂತರಕಾರನಿಗೆ ಮೂಲ ಭಾಷೆಯಾದ ಇಂಗ್ಲಿಷನ್ನು ಸರಿಯಾಗಿ ಅರ್ಥವಿಸಿ ಆ ಭಾಷೆಯ ನಯ ನವುರುಗಳನ್ನು

ಗ್ರಹಿಸಿ ಆನಂದಿಸುವಷ್ಟು ಜ್ಞಾನ ಅತ್ಯವಶ್ಯ. ಆತ ಆ ಭಾಷೆಯಲ್ಲಿ ಸಿದ್ಧ ಲೇಖಕನಾಗಿರ ಬೇಕಾಗಿಲ್ಲ. ಉದ್ದಿಷ್ಟ ಭಾಷೆಯಾದ ಕನ್ನಡಕ್ಕೆ ಬರುವಾಗ ಭಾಷಾಂತರಕಾರನಲ್ಲಿ ಭಾಷಾ ಸಂಪತ್ತು, ಸೃಜನಾತ್ಮಕ ಸಾಮರ್ಥ್ಯ, ಲೇಖನಕೃಷಿಯಲ್ಲಿ ಖಚಿತ ನಿಲವು ಮುಂತಾದ ವೆಲ್ಲವೂ ಚೆನ್ನಾಗಿ ಮೇಳೈಸಿಕೊಂಡು ಇರಬೇಕಾದದ್ದು ಅತ್ಯವಶ್ಯ. ಇಲ್ಲವಾದರೆ ಆತನ ಭಾಷಾಂತರ ಯಾಂತ್ರಿಕವೂ ನೀರಸವೂ ಆಗಿದ್ದು 'ಹರಕೆ ಒಪ್ಪಿಸುವ' ವಿಧಿ ಆದೀತು ಮಾತ್ರ. ಕನ್ನಡದ ಅಭಿಜಾತ ಹಾಗೂ ನವಜಾತ ಸಾಹಿತ್ಯವನ್ನು ಆಳವಾಗಿಯೂ ವ್ಯವಸ್ಥಿತ ವಾಗಿಯೂ ಅಭ್ಯಸಿಸುವುದರಿಂದ, ಲೇಖನಕೃಷಿಯನ್ನು ಶಿಸ್ತಿನಿಂದ ಮಾಡುವುದರಿಂದ, ಮೇಲಾಗಿ ಕನ್ನಡ ಹಾಗೂ ಕನ್ನಡಿಗರ ಬಗ್ಗೆ ನಿಜವಾದ ಒಲವು ತಳೆಯುವುದರಿಂದ ಮಾತ್ರ ಭಾಷಾಂತರಕಾರನಿಗೆ ಆಕರ್ಷಕ ಮತ್ತು ಪಕ್ವ ಶೈಲಿ ಸಿದ್ಧಿಸೀತು. ಕೇವಲ ಡಿಪ್ಲೊಮಾ ಹಾಗೂ ಡಿಗ್ರಿಗಳ ಸರಮಾಲೆಯನ್ನು ಗಳಿಸಿ ಮೆರೆಸುವುದರಿಂದ ಅಲ್ಲ. ಇದೇನಿದ್ದರೂ ಹಾದಿ ಮಾತ್ರ, ಗುರಿ ಅಲ್ಲ. ಒಂದು ಉದಾಹರಣೆ ನೋಡಿ.

ಮೂಲ : Two molecules of water split to give two molecules of hydrogen gas and one molecule of oxygen gas. This is because two oxygen atoms are needed to make an oxygen molecule. By pairing up and sharing two of each other's electrons both oxygen atoms gain complete outer electron-shells.

ಭಾಷಾಂತರ ೧ : ಎರಡು ನೀರಿನ ಅಣುಗಳು ಒಡೆದು ಎರಡು ಹೈಡ್ರೊಜನ್ ಅನಿಲದ ಅಣುಗಳನ್ನೂ ಒಂದು ಆಕ್ಸಿಜನ್ ಅಣುವನ್ನೂ ಕೊಡುತ್ತವೆ. ಏಕೆಂದರೆ ಒಂದು ಆಕ್ಸಿಜನ್ ಅಣು ವಾಗಲು ಎರಡು ಆಕ್ಸಿಜನ್ ಪರಮಾಣುಗಳು ಬೇಕು. ಎರಡು ಆಕ್ಸಿಜನ್ ಪರಮಾಣುಗಳೂ ಜೊತೆಗೂಡಿ ಎರಡು ಎಲೆಕ್ಟ್ರಾನುಗಳನ್ನು ಸಹಭೋಗಿಸುವುದರಿಂದ ಅವುಗಳ ಹೊರ ಎಲೆಕ್ಟ್ರಾನ್ ಚಿಪ್ಪುಗಳು ಪೂರ್ತಿಯಾಗಿ ತುಂಬಿಕೊಳ್ಳುತ್ತವೆ.

ಭಾಷಾಂತರ ೨ : ನೀರಿನ ಎರಡು ಅಣುಗಳು ಒಡೆದು ಹೈಡ್ರೊಜನ್ ಅನಿಲದ ಎರಡು ಅಣುಗಳನ್ನೂ ಆಕ್ಸಿಜನ್ ಅನಿಲದ ಒಂದು ಅಣುವನ್ನೂ ಕೊಡುತ್ತವೆ. ಏಕೆಂದರೆ ಆಕ್ಸಿಜನ್ನಿನ ಒಂದು ಅಣುವಾಗಲು ಆಕ್ಸಿಜನ್ನಿನ ಎರಡು ಪರಮಾಣುಗಳು ಬೇಕು. ಆಕ್ಸಿಜನ್ನಿನ ಈ ಎರಡು ಪರಮಾಣುಗಳು ಎರಡು ಎಲೆಕ್ಟ್ರಾನುಗಳನ್ನು ಜಂಟಿಯಾಗಿ ಸಹಭೋಗಿಸುವುದರಿಂದ ಅವುಗಳ ಹೊರ ಎಲೆಕ್ಟ್ರಾನ್ ಚಿಪ್ಪುಗಳು ಪೂರ್ತಿ ತುಂಬಿಕೊಳ್ಳುತ್ತವೆ.

ಟೀಕೆ : ಭಾಷಾಂತರ ೧ರ ಅವಾಂತರ 'ಎರಡು ನೀರಿನ ಅಣು'ಗಳಿಂದಲೇ ತೊಡಗು ತ್ತದೆ. (ಗಂಗಾನದಿಯ ನೀರಿನ ಅಣು ಮತ್ತು ತುಂಗಭದ್ರಾ ನದಿಯ ನೀರಿನ ಅಣು?)

ಇಂಥ ಒಬ್ಬ ಭಾಷಾಂತರಕಾರ ಇಂಗ್ಲಿಷಿನಿಂದ ವಿಜ್ಞಾನದ ಯಾವುದೇ ಸೃಜನಾತ್ಮಕ ವಾಙ್ಮಯವನ್ನು—ಉದಾಹರಣೆಗೆ ಐನ್‌ಸ್ಟೈನರ ಜೀವನಚರಿತ್ರೆ ಹಾಗೂ ದರ್ಶನ— ಕನ್ನಡಕ್ಕೆ ಭಾಷಾಂತರಿಸಿದ್ದಾದರೆ ಆ 'ಜಗತ್ಕೌತುಕ'ವಾದ 'ಸತ್ಕೃತಿ' ದೇವರಿಗೆ ಮಾತ್ರ ಪ್ರೀತಿ: ಅಪಪೋಷಣೆಯಿಂದ ಸೊರಗಿ ತೊಗಲುಗೊಂಬೆಯಾದ ಐನ್‌ಸ್ಟೈನರನ್ನು ಇದರಲ್ಲಿ 'ಕಂಡು ಧನ್ಯ'ರಾಗಬಹುದು ಓದುಗರು.

ಸಾರಾಂಶವಿಷ್ಟು : ವಿಷಯದ ಮೇಲೆ ಪ್ರಭುತ್ವ ಇಲ್ಲದವ ಮತ್ತು/ಅಥವಾ ಇಂಗ್ಲಿಷ್ ಭಾಷೆಯ ಖಚಿತ ಜ್ಞಾನ ಹಾಗೂ ಕನ್ನಡ ಭಾಷೆಯಲ್ಲಿ ಪಾಂಡಿತ್ಯಪೂರ್ಣ ಸೃಜನಾತ್ಮಕ

ಶೈಲಿ ಇಲ್ಲದವ ವಿಜ್ಞಾನವಾಙ್ಮಯವನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಸಮರ್ಪಕವಾಗಿಯೂ ಆಕರ್ಷಕವಾಗಿಯೂ ಭಾಷಾಂತರಿಸಲಾರ. ಇಂಥ ಒಬ್ಬ ವ್ಯಕ್ತಿ ಈ ಕೆಲಸಕ್ಕೆ ಕೈಹಾಕದಿರುವುದೇ ಲೇಸು.

ಭಾಷಾಂತರದ ಕೃತಿಮೂಲ ಸಮಸ್ಯೆಗಳು ಏನೆಂದು ಪರಿಶೀಲಿಸುವ ಮುನ್ನ ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರಲ್ಲಿ ಸಾಮಾನ್ಯವಾಗಿ ಪ್ರಚಲಿತವಾಗಿರುವ ಒಂದು ತಪ್ಪು ಕಲ್ಪನೆಯನ್ನು ತೊಡೆದುಹಾಕುವುದು ಅಗತ್ಯವೆನಿಸುತ್ತದೆ. ಇಂಗ್ಲಿಷಿನಿಂದ ವಿಜ್ಞಾನ ವಾಙ್ಮಯವನ್ನು ಕನ್ನಡಕ್ಕೆ ಭಾಷಾಂತರಿಸುವುದು ಇತರ ಬಗೆಯ ವಾಙ್ಮಯಗಳನ್ನು ಭಾಷಾಂತರಿಸುವುದಕ್ಕಿಂತ ಸುಲಭ ಎಂಬುದೇ ಆ ತಪ್ಪು ಕಲ್ಪನೆ. ಇದು ಸರಿಯೇ ಅಲ್ಲವೇ ಎಂದು ಪರೀಕ್ಷಿಸಲು ನಾನು ಡಿಕನ್ಸ್, ಹ್ಯೂಗೋ ಇವರ ಕಾದಂಬರಿಗಳ ಕೆಲವು ಅಧ್ಯಾಯಗಳನ್ನೂ ಜೀನ್ಸ್, ಗ್ಯಾಮೋ ಇವರ ಜನಪ್ರಿಯ ವಿಜ್ಞಾನ ಗ್ರಂಥಗಳ ಕೆಲವು ಅಧ್ಯಾಯಗಳನ್ನೂ ಕನ್ನಡಕ್ಕೆ ಅನುವಾದಿಸಿ ನೋಡಿದೆ. ಒಂದೊಂದು ಪ್ರಕಾರದಲ್ಲಿ ನಾನು ಎದುರಿಸಿದ ಸಮಸ್ಯೆ ಒಂದೊಂದು. ಆದ್ದರಿಂದ ಇಂಥ ಹೋಲಿಕೆ ಅವೈಜ್ಞಾನಿಕ ಎಂದು ಖಂಡಿತವಾಗಿ ಹೇಳಬಲ್ಲೆ.

**ಕೃತಿಮೂಲ ಸಮಸ್ಯೆಗಳು**

ನಮಗೊಬ್ಬ ಆದರ್ಶ ಭಾಷಾಂತರಕಾರ ದೊರೆತಿರುವನೆಂದು ಭಾವಿಸೋಣ: ಅಂದರೆ ಆತನಿಗೆ ವಿಷಯದ ಮೇಲೆ ಒಳ್ಳೆಯ ಹಿಡಿತವಿದೆ : ಇಂಗ್ಲಿಷ್ ಭಾಷೆಯನ್ನು ಆತ ಚೆನ್ನಾಗಿ ತಿಳಿದುಕೊಂಡಿದ್ದಾನೆ ; ಕನ್ನಡ ಸಾಹಿತ್ಯವನ್ನು ಚೆನ್ನಾಗಿ ಅರಗಿಸಿಕೊಂಡು ಆ ಭಾಷೆಯಲ್ಲಿ ಸೃಜನಾತ್ಮಕ ಲೇಖಕನಾಗಿದ್ದಾನೆ. ಮೇಲಾಗಿ ಆತನಿಗೆ ತಾನು ಹಿಡಿದ ಕಾರ್ಯವನ್ನು ಕಷ್ಟಪಟ್ಟು ಶ್ರದ್ಧೆಯಿಂದ ನಿರ್ವಹಿಸಿ ಅನುವಾದಿತ ಕೃತಿ, ಕನ್ನಡದಲ್ಲಿ ಮೂಲಕೃತಿಯೇ ಮರುವುಟ್ಟು ಪಡೆದುಬಂದಂತೆ ಇರಬೇಕು ಎಂಬ ಛಲವೂ ಇದೆ ಎಂದು ಭಾವಿಸೋಣ. ಇಂಥ ಸಾಚಾ ಭಾಷಾಂತರಕಾರನಿಗೆ ಎದುರಾಗುವ ಸಮಸ್ಯೆಗಳೇ ಕೃತಿಮೂಲ ಸಮಸ್ಯೆಗಳು.

ವಾಸ್ತವವಾಗಿ ಈ ಪ್ರಬಂಧ ಕೃತಿಮೂಲ ಸಮಸ್ಯೆಗಳನ್ನು ಮಾತ್ರ ಚರ್ಚಿಸಬೇಕು. ಆದರೆ ಕನ್ನಡದಲ್ಲಿರುವ ಬಹುತೇಕ ಖೋಟಾ ಭಾಷಾಂತರಗಳನ್ನು ಗಮನಿಸಿಯೂ ಅವುಗಳತ್ತ ದೃಷ್ಟಿಹರಿಸದೇ ಕೇವಲ ಕೃತಿಮೂಲ ಸಮಸ್ಯೆಗಳನ್ನು ಮಾತ್ರ ಎತ್ತಿಕೊಂಡದ್ದಾದರೆ ಇದೊಂದು ಅಮೂರ್ತ ಶೈಕ್ಷಣಿಕ ಕವಾಯತು ಮಾತ್ರ ಆದೀತು ಅಷ್ಟೆ. ಹೀಗಾಗಬಾರದು ಎಂಬ ಉದ್ದೇಶದಿಂದ ವ್ಯಕ್ತಿಮೂಲ ಸಮಸ್ಯೆಗಳತ್ತ ಮೊದಲು ಗಮನ ಹರಿಸಿದ್ದಾಯಿತು.

I. ನಮ್ಮ ಆದರ್ಶ ಭಾಷಾಂತರಕಾರನಿಗೆ ಎದುರಾಗುವ ಮೊದಲ ಸಮಸ್ಯೆ ಪಾರಿಭಾಷಿಕ ಪದಗಳ ಗೊಂದಲ. ಇದು ಏನು ಎಂಬುದರ ಅರಿವಾಗಲು ಈ ಮುಂದಿನ ಉದಾಹರಣೆಗಳನ್ನು ನೋಡಿ :

ಮೂಲ : Columbus discovered America.

ಭಾಷಾಂತರ : ಕೊಲಂಬಸ್ ಅಮೆರಿಕವನ್ನು ಕಂಡುಹಿಡಿದ.

ಮೂಲ : Thomas Alva Edison invented the phonograph.

ಭಾಷಾಂತರ : ತಾಮಸ್ ಆಲ್ವ ಎಡಿಸನ್ ಫೋನೋಗ್ರಾಫನ್ನು ಕಂಡುಹಿಡಿದ.

ಮೂಲ : Find the value of $x$ from the following equation.

ಭಾಷಾಂತರ : ಈ ಮುಂದಿನ ಸಮೀಕರಣದಿಂದ $x$ನ ಬೆಲೆ ಕಂಡುಹಿಡಿಯಿರಿ.

ಮೂಲ : Calculate the distance between Mysore and Bangalore.

ಭಾಷಾಂತರ : ಮೈಸೂರು ಮತ್ತು ಬೆಂಗಳೂರು ನಡುವಿನ ದೂರ ಕಂಡುಹಿಡಿಯಿರಿ.

ಟೀಕೆ : 'ಕಂಡುಹಿಡಿ' ಎನ್ನುವ ಪದ ಹೇಗೆ ಇಲ್ಲಿ ಕಿವಿಗೆ ಗುಂಡು ಬಡಿವುದೆಂಬುದನ್ನು ಗಮನಿಸಿ. ಇಷ್ಟೇ ಅಲ್ಲ. Discover, invent, find, calculate ಎಂಬವು ನಿರ್ದಿಷ್ಟ ಬಗೆಯ ಕ್ರಿಯೆಗಳನ್ನು ಸೂಚಿಸುವ ಇಂಗ್ಲಿಷ್ ಪದಗಳು. ಆದ್ದರಿಂದ ಕನ್ನಡದಲ್ಲಿ ಕೂಡ ಈ ಕ್ರಿಯೆಗಳ ವೈವಿಧ್ಯ ಎದ್ದುಕಾಣುವಂತೆ ಯುಕ್ತ ಪದಗಳನ್ನು ಆಯ್ದು, ಅವು ಇಲ್ಲವಾದಲ್ಲಿ ಭಾಷಾ ಮರ್ಯಾದೆಗೆ ಭಂಗ ಬರದಂತೆ ಯೋಗ್ಯ ಪದಗಳನ್ನು ಸೃಷ್ಟಿಸಿ, ಬಳಸಬೇಕು. ಇವೆರಡು ಹಾದಿಗಳೂ ಸಮರ್ಪಕವಾಗದಲ್ಲಿ ಇಂಗ್ಲಿಷ್ ಪದವನ್ನು ಹಾಗೆಯೇ, ಇಲ್ಲವೇ ಉಚ್ಚಾರಣೆಯ ದೃಷ್ಟಿಯಿಂದ ಅಲ್ಪಸ್ವಲ್ಪ ಬದಲಾವಣೆ ಮಾಡಿ, ಕನ್ನಡಕ್ಕೆ ಆಮದುಮಾಡಿಕೊಳ್ಳಬೇಕು. ಪ್ರಕೃತದ ನಾಲ್ಕೂ ಉದಾಹರಣೆಗಳಲ್ಲಿ ನಾವು ಬಳಸಬಹುದಾದ ಕನ್ನಡ ಪದಗಳು ಈ ಕೆಳಗಿನಂತಿವೆ :

discover = ಆವಿಷ್ಕರಿಸು, invent = ಉಪಜ್ಞಿಸು, find = ಶೋಧಿಸು, calculate = ಗಣಿಸು.

ಅಂದಮಾತ್ರಕ್ಕೆ ಇಂಗ್ಲಿಷಿನ ಒಂದು ಪದಕ್ಕೆ ಸಂವಾದಿಯಾಗಿ ಕನ್ನಡದ ಒಂದು ಪದ ಇರಲೇಬೇಕು ಎಂಬ ತೀರ್ಮಾನಕ್ಕೆ ಬರುವುದು ಸಾಧುವಾಗದು. ಯಾವ ಎರಡು ಜೀವಂತ ಭಾಷೆಗಳೂ ಇಂಥ ಒಂದು-ಒಂದು ಸಂಕೋಲೆಯಿಂದ ಬಂಧಿತವಾಗಿರುವುದಿಲ್ಲ. ಉದಾಹರಣೆಗೆ ಬಿತ್ತು = fell, sow ; ಹರಿ = tear, flow; fret = ರೇಖಾಲಂಕಾರ, ಅಗಿ, ಸಾರಿಕೆ; put = ಇಡು, ಗಾಂಪ.

ಪಾರಿಭಾಷಿಕ ಪದಗಳ ಸೃಷ್ಟಿ, ಹಾಗೂ ಉಪಯೋಗದಲ್ಲಿ ಸಾಕಷ್ಟು ಗೊಂದಲ ತಲೆದೋರಿದೆ. ಕಾರಣ, ಈ ಸಮಸ್ಯೆಯನ್ನು ನಾವು (ಕನ್ನಡಿಗರು) ಇಂದಿನ ತನಕವೂ ವ್ಯವಸ್ಥಿತವಾಗಿ ಸ್ವೀಕರಿಸಿ ಪರಿಹರಿಸಲು ಪ್ರಯತ್ನಿಸಿಲ್ಲ.* ರಾಜ್ಯದ ಪ್ರಮುಖ ವಿಜ್ಞಾನ ಗ್ರಂಥೋತ್ಪಾದಕ ಸಂಸ್ಥೆಗಳು ಐದು : ನಾಲ್ಕು ವಿಶ್ವವಿದ್ಯಾಲಯಗಳು ಮತ್ತು ಶಿಕ್ಷಣ ನಿರ್ದೇಶನಾಲಯ. (ಈಗ ೨೦೦೪, ಈ ಸಂಖ್ಯೆ ಗಮನಾರ್ಹವಾಗಿ ವೃದ್ಧಿಸಿದೆ.) ಈ ಒಂದೊಂದು "ಸಾಮ್ರಾಜ್ಯ"ದ ಒಳಗೆ ಕೂಡ ಯಾವುದೇ ಪ್ರಯತ್ನ ನಡೆದಿಲ್ಲ. ಅಂದರೇನಾಯಿತು? ಆಯಾ ಲೇಖಕ/ಭಾಷಾಂತರಕಾರ ತನಗೆ ಆಯಾ ಸಂದರ್ಭದಲ್ಲಿ ಖುಷಿ ಕಂಡ ಪದವನ್ನು ಚಾಲೂ ಮಾಡುವ ದೀನ ಹೀನಸ್ಥಿತಿಗೆ ಈ ಸಮಸ್ಯೆ ಕೆಡೆದಿದೆ. ಪಾರಿಭಾಷಿಕ ಪದಗಳ ಗೊಂದಲವನ್ನು ನಿವಾರಿಸಲು ರಾಜ್ಯಮಟ್ಟದಲ್ಲಿ ವ್ಯವಸ್ಥಿತ ಪ್ರಯತ್ನ ಮಾಡದಿದ್ದರೆ ಯಾವ ವಿಜ್ಞಾನದ ಗಹನ ಪರಿಕಲ್ಪನೆಗಳ ಖಚಿತ ಸಂವಹನತೆಗಾಗಿ ಆ ಪದಗಳ ಸೃಷ್ಟಿ ಆಗಿದೆಯೋ ಆ ವಿಜ್ಞಾನವನ್ನೇ ಪ್ರಥಮಾಹುತಿಯಾಗಿ ಬೇಡುವ ಭಸ್ಮಾಸುರರೂಪಿಗಳು ಅವು ಆಗುವು

---

* ನವಕರ್ನಾಟಕ ಪ್ರಕಾಶನದ 'ಕನ್ನಡ ವಿಜ್ಞಾನ ಪದವಿವರಣ ಕೋಶ' ೨೦೦೧ ಬಲುಮಟ್ಟಿಗೆ ಈ ಕೊರತೆಯನ್ನು ನಿವಾರಿಸಿದೆ. ಇದರ ಪ್ರಸ್ತಾವನೆ ಗಮನಿಸಬೇಕು.

ದಂತೂ ಖರೆ. ಭೌತವಿಜ್ಞಾನದ ಒಂದೇ ಗ್ರಂಥದಲ್ಲಿ force ಎಂಬ ಪರಿಕಲ್ಪನೆಗೆ 'ಬಲ,' 'ತ್ರಾಣ,' 'ಶಕ್ತಿ,' 'ಸಾಮರ್ಥ್ಯ' ಎಂಬ ನಾಲ್ಕು ಪರ್ಯಾಯ ಪದಗಳ ಬಳಕೆ ಆಗಿದೆ. "ಇಂದ್ರಾಯ ಭಸ್ಮಯೇ ಸ್ವಾಹಾ" ಎನ್ನುವುದರ ಬದಲಾಗಿ "ಇಂದ್ರಾರಿ ಭಸ್ಮಯೇ ಸ್ವಾಹಾ" ಎಂದು ಹೇಳಿದಾಗ ಏನು ಅನಾಹುತ ಘಟಿಸಿತೊ ತತ್ಸದೃಶ ಅನಾಹುತ ಬೌದ್ಧಿಕ ವಾಗಿ ಇಲ್ಲಿ ಘಟಿಸಿದೆ ಎಂಬ ಅರಿವು ಈ 'ಗ್ರಂಥ'ದ ಕರ್ತೃವಿಗೆ ಇದ್ದಂತಿಲ್ಲ. (ವಾಸ್ತವ ವಾಗಿ force ಪರಿಕಲ್ಪನೆಯೇ ಈತನಿಗೆ ಅರ್ಥವಾಗಿಲ್ಲವೊ ಏನೊ!)

ಸಾರ್ವತ್ರಿಕವೂ ಸರ್ವಸಮ್ಮತವೂ ಆದ ವಿಜ್ಞಾನಪಾರಿಭಾಷಿಕಕೋಶ ಜರೂರಾಗಿ ಸಿದ್ಧ ವಾಗಬೇಕು. ರಾಜ್ಯಸರ್ಕಾರ ಈ ದಿಶೆಯಲ್ಲಿ ಪ್ರವರ್ತನಶೀಲವಾಗಬೇಕು. ಹಾಗೆಂದು ಆ ಕೆಲಸ ಮುಗಿಯುವತನಕ (?) ಭಾಷಾಂತರಕಾರ್ಯವನ್ನು ತಡೆಹಿಡಿಯುವುದು ಅಸಾಧ್ಯ ಮತ್ತು ಅನಪೇಕ್ಷಣೀಯವಾದ್ದರಿಂದ ಸದ್ಯದಲ್ಲಿ ಭಾಷಾಂತರಕಾರರು ಅನುಸರಿಸಬಹು ದಾದ ಪ್ರಾಯೋಗಿಕ ವಿಧಾನಗಳಿವು :

೧. ಮೂಲಗ್ರಂಥದಲ್ಲಿ ಬರುವ ಸಮಸ್ತ ಪಾರಿಭಾಷಿಕ ಪದಗಳನ್ನೂ ಪದಪುಂಜ ಗಳನ್ನೂ ಇಂಗ್ಲಿಷ್ ವರ್ಣಮಾಲೆಯ ಅನುಕ್ರಮದಲ್ಲಿ ಪಟ್ಟಿಮಾಡಿ ಅವನ್ನು ಅಲಾಯಿದ ಚೀಟಿಗಳ ಮೇಲೆ ಬರೆದಿಡಬೇಕು.

೨. ಭಾರತ ಸರ್ಕಾರ ಪ್ರಕಟಿಸಿರುವ ವಿವಿಧ ವಿಜ್ಞಾನ ಪಾರಿಭಾಷಿಕ ಕೋಶಗಳು, ಕನ್ನಡ ವಿಶ್ವಕೋಶದ ಲಭ್ಯ ಸಂಪುಟಗಳು, ಕನ್ನಡದಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಪ್ರಕಟ ವಾಗಿರುವ ಪ್ರಸಿದ್ಧ ವಿಜ್ಞಾನ ಗ್ರಂಥಗಳು, ಪತ್ರಿಕಾಲೇಖನಗಳು ಮೊದಲಾದವನ್ನು ಅವಲೋಕಿಸಿ ಸಮಾನ ಕನ್ನಡ ಪಾರಿಭಾಷಿಕ ಪದಗಳನ್ನು ಆಯ್ದು ಆಯಾ ಚೀಟಿಯ ಮೇಲೆ ನಮೂದಿಸಬೇಕು.

೩. ಪ್ರತಿಯೊಂದು ಇಂಗ್ಲಿಷ್ ಪಾರಿಭಾಷಿಕ ಪದಕ್ಕೂ ಸಮಾನವಾದ ಒಂದು ಪಾರಿ ಭಾಷಿಕ ಪದವನ್ನು ಹುಡುಕಲೇಬೇಕು ಯಾ ಸೃಷ್ಟಿಸಲೇಬೇಕು ಎನ್ನುವ ಹಠ ಸರ್ವತ್ರ ಸಲ್ಲದು. ಇಂಥ ದುಸ್ಸಾಹಸಕ್ಕೆ ಆರಂಭದಲ್ಲೇ ವೈಫಲ್ಯ ಶತಸ್ಸಿದ್ಧ. ಭಾಷಾಂತರಕಾರನ ವಿದ್ವತ್ತು, ಅನುಭವ ಮೊದಲಾದವನ್ನು ಅವಲಂಬಿಸಿ ಒಂದೊಂದು ಹಂತದಲ್ಲಿಯೂ ಶಿಷ್ಟೀಕರಣ ಸಾಧ್ಯವಿದೆ. ಅಂತಾರಾಷ್ಟ್ರೀಯ ಚಲಾವಣೆ ಮತ್ತು ಮನ್ನಣೆ ಪಡೆದಿರುವ ಹಾಗೂ ಭಾರತೀಯ ಹವೆಯಲ್ಲಿ ಈ ತನಕ ನೆಲೆ ಪಡೆಯದಿದ್ದ ಪರಿಕಲ್ಪನೆಯನ್ನು ಪ್ರತಿನಿಧಿಸುವ ಪಾರಿಭಾಷಿಕ ಪದಗಳು, ಪ್ರತೀಕಗಳು ಮುಂತಾದವನ್ನು ಹಾಗೆಯೇ ಇರ ಗೊಡಿಸಬೇಕು. ಅವನ್ನು ಕನ್ನಡಿಸುವುದು ವ್ಯರ್ಥಶ್ರಮ. ಉದಾಹರಣೆಗೆ

(i) transistor = ಟ್ರಾನ್ಸಿಸ್ಟರ್ ಆಗಬೇಕೇ ಹೊರತು TRANsfer + reSISTOR = TRANSISTOR ಎಂಬುದು ಅದರ ಧಾತುರೂಪವಾದ್ದರಿಂದ ಅನುರೂಪವಾಗಿ ಕನ್ನಡದಲ್ಲಿ ವರ್ಗಾವಣೆ+ರೋಧಕ=ವರ್ಗಾಧಕ ಆಗಬಾರದು. ಇಂಥ ಒಂದು ವಿಕೃತರೂಪ ಕನ್ನಡದಲ್ಲಿ ತಯಾರಾಗಿಲ್ಲ ನಿಜ. ಆದರೆ ಅನರ್ಥ ಅಪಾರ್ಥಗಳಲ್ಲಿ ಇದನ್ನು ಮೀರಿಸುವ ವಿಕೃತರೂಪಗಳು ಸಾಕಷ್ಟು ಬೇರೆ ಬೇರೆ ಪ್ರಕಟಿತ ಗ್ರಂಥಗಳಲ್ಲಿ ಕಂಡುಬರುತ್ತಿವೆ.

(ii) $\cos^2 x + \sin^2 x = 1$ ಎಂಬುದು ತದ್ವತ್ತಾಗಿ ಕನ್ನಡಕ್ಕೆ ಆಮದಾಗಬೇಕು. ಅಂತೆಯೇ $E = mc^2$, $2NaCl + H_2SO_4 \rightarrow Na_2SO_4 + 2HCl$ ರಾಸಾಯನಿಕ ಕ್ರಿಯಾಸೂಚಕ ವಿವಿಧ

ಸಮೀಕರಣಗಳು ಎಲ್ಲವೂ ಯಾವ ಬದಲಾವಣೆಯೂ ಇಲ್ಲದೆ ಕನ್ನಡಕ್ಕೆ ಸ್ವೀಕೃತವಾಗ ಬೇಕು. ಅಂಕಿತನಾಮಗಳನ್ನು ತದ್ವತ್ತು ಸ್ವೀಕರಿಸಬೇಕು.

ಈ ತೆರನಾದ ಚಿಂತನ ಮಂಥನಗಳಿಂದ ಪಾರಿಭಾಷಿಕ ಪದಗಳ ಸಮಗ್ರ ಯಾದಿ ಸಿದ್ಧವಾದ ಬಳಿಕ ಮಾತ್ರವೇ ಭಾಷಾಂತರಕಾರ ಕಾರ್ಯೋದ್ಯುಕ್ತನಾಗತಕ್ಕದ್ದು. ಮುಂದಿನ ನೌಕಾಯನದ (navigation) ವೇಳೆ ಇಂಥ ಒಂದು ಯಾದಿ ಅವನಿಗೆ ಅದೆಂಥ ಉಪ ಯುಕ್ತ ನಾವಿಕ ದಿಕ್ಸೂಚಿ ಆಗಬಲ್ಲದು ಎಂಬ ಸಂಗತಿ ಈ ರೀತಿಯಾಗಿ ಶ್ರಮಿಸಿರುವವರಿ ಗೆಲ್ಲ ತಿಳಿದಿದೆ.

II. ಹೀಗೆ ಸರ್ವಸಜ್ಜಿತನಾಗಿ ನಮ್ಮ ಪರಿಣತ ಇಂಗ್ಲಿಷ್ ಹೊಲದಿಂದ ಕನ್ನಡ ನೆಲಕ್ಕೆ (ಬಲುಪಾಲು ಇದಿನ್ನೂ ಕನ್ನೆನೆಲ, ೨೦೦೪ರಲ್ಲಿ ಕೂಡ) ಜಿಗಿಯಲು ಸಿದ್ಧನಾಗುತ್ತಾನೆ. ಅವನ ಜಿಗಿತ ಇಳಿತಗಳಲ್ಲಿ ಒಟ್ಟಾಗಿ ಐದು ಪ್ರತ್ಯೇಕ ಹಂತಗಳಿವೆ.

೧. ಇಂಗ್ಲಿಷಿನಲ್ಲಿ ವಾಕ್ಯವನ್ನೂ ವಾಕ್ಯಪುಂಜವನ್ನೂ ಓದಿ ಅರ್ಥಲೀನನಾಗುತ್ತಾನೆ. ಆ ಸ್ಥಿತಿಯಲ್ಲಿ ಆತನ ಅನುಭವ ಭಾಷಾತೀತವಾಗಿರುತ್ತದೆ—ಉತ್ತಮ ಸಂಗೀತವನ್ನು ಆಲಿಸಿ ದಾಗ ಸಾಹಿತ್ಯಾತೀತವಾದ ನಾದರಸಾನಂದಾನುಭೂತಿ ಒದಗುವಂತೆ. ಒಂದು ಉದಾ ಹರಣೆ ನೋಡಿ :

The scientist does not study nature because it is useful; he studies it because he delights in it, and he delights in it because it is beautiful. If nature were not worth knowing, life would not be worth living. Of course I do not here speak of that beauty that strikes the senses, the beauty of qualities and appearances; not that I undervalue such beauty, far from it, but it has nothing to do with science; I mean that profounder beauty which comes from the harmonious order of the parts, and which a pure intelligence can grasp.

ಆನ್ರೀ ಪ್ವಾನ್‌ಕ್ಯಾರೇ (೧೮೫೪-೧೯೧೨) ಎಂಬ ಶ್ರೇಷ್ಠಗಣಿತವಿದನ ಮಾತುಗಳಿವು. ಇವನ್ನು ಮತ್ತೆ ಮತ್ತೆ ಓದಿ ಮನನ ಮಾಡಿಕೊಂಡು ಧ್ಯಾನಸ್ಥಿತಿಗೇರಿದಾಗ ಮನಸ್ಸಿನಲ್ಲಿ ಭಾಷಾತೀತವಾದ ಕಲಾತ್ಮಕ ಪ್ರತಿರೂಪವೊಂದು ಮೂಡುತ್ತದೆ. ಇದೊಂದು ವಿಧದ ತುರಿಯಾವಸ್ಥೆ. ಪರಕಾಯ (ಪರಮನ) ಪ್ರವೇಶವೆಂದರೆ ಇದೇ.

೨. ಎರಡನೆಯ ಹಂತದಲ್ಲಿ ಭಾಷಾಂತರಕಾರ ಈ ಮಾನಸಿಕ ಭಾಷಾತೀತ ಮತ್ತು ಭಾವಗಮ್ಯ ಪ್ರತಿರೂಪಕ್ಕೆ ಪ್ರಜ್ಞಾಪೂರ್ವಕವಾಗಿ ಕನ್ನಡದ ಉಡುಪನ್ನು ತೊಡಿಸಲು ತೊಡಗುತ್ತಾನೆ. ಈಗ ಅವನ ಚಿಂತನೆ ಕನ್ನಡ ಭಾಷೆಯಲ್ಲಿ ಸಾಗಿರುತ್ತದೆ. ಮಕರಂದ ಜೇನಾಗುವ ಈ ಪ್ರಕ್ರಿಯೆಯಲ್ಲಿ ಭಾವನೆ ಮತ್ತು ಭಾಷೆ ಎರಡೂ ಸಮಶ್ರುತಿ ಮತ್ತು ಸಮಗತಿಯಲ್ಲಿ ಸ್ಪಂದಿಸುತ್ತಿರುತ್ತವೆ. ವಾಸ್ತವಿಕ ಭಾಷಾಂತರಕಾರ್ಯ ಇಲ್ಲಿಗೇ ಮುಗಿದು ಹೋಗುತ್ತದೆ.

೩. ಹೀಗೆ ಮಾನಸಿಕವಾಗಿ ಕನ್ನಡದಲ್ಲಿ ಮೈದಳೆದ ಪ್ರತಿರೂಪವನ್ನು ಅವನೀಗ ಪ್ರತ್ಯಕ್ಷ ಲಿಪಿಗೆ ಇಳಿಸಿ ಅದಕ್ಕೊಂದು ಆಕಾರ ಒದಗಿಸುತ್ತಾನೆ. ಇದೇನಿದ್ದರೂ ಯಾಂತ್ರಿಕ ಕ್ರಿಯೆ,

ಸೃಜನಾತ್ಮಕ ಕ್ರಿಯೆ ಅಲ್ಲ. ಆದರೆ ಹಾಗೆಂದು ಇದನ್ನು ಉಡಾಫೆಯಿಂದ ಕಾಣಬಾರದು. "ಇದೇನು ಮಹಾ" ಎಂದು ಕಡೆಗಣಿಸಲಾಗದು. ನೌಕಾಯಾನದಲ್ಲಿ ದಡತಲಪುತ್ತಿದ್ದಂತೆ ಹೆಚ್ಚಿನ ಎಚ್ಚರ ವಹಿಸದಿದ್ದರೆ ಸರ್ವನಾಶ ಖಾತ್ರಿ. ಭಾಷಾಂತರಕಾರನ ಅಗೋಚರ ಅಂತರಂಗದ ಪ್ರಕಟಿತ ರೂಪ ಈ ಬರೆವಣಿಗೆ. ಇದು ಸರಿ ಆಗಿರದಿದ್ದರೆ ಅಥವಾ ಹೊಲಸಾಗಿದ್ದರೆ ಅವನ ವಿದ್ವತ್ತು ಸಾಧನೆ ಪ್ರತಿಭೆ ಎಲ್ಲವೂ ಹೆಜ್ಜೇನು ಗೂಡಿನ ಎರಿಗಳಂತೆ ಉಪಯೋಗಿಸಲು ಅಲಭ್ಯವಾಗುತ್ತವೆ. ಈ ಹಂತದಲ್ಲಿ ನಡೆವ ಪ್ರಕ್ರಿಯೆಗೆ ಉದಾಹರಣೆಯಾಗಿ ಮೇಲೆ ನಮೂದಿಸಿರುವ ಇಂಗ್ಲಿಷ್ ಪರಿಚ್ಛೇದದ ಕಚ್ಚಾ ಅನುವಾದ ವನ್ನು ಪರಿಶೀಲಿಸೋಣ :

ಭಾಷಾಂತರ : ನಿಸರ್ಗ ಉಪಯುಕ್ತವಾಗಿದೆ ಎಂಬ ಕಾರಣದಿಂದ ವಿಜ್ಞಾನಿ ಅದನ್ನು ಅಭ್ಯಸಿಸುವು ದಲ್ಲ: ಅಂಥ ಅಭ್ಯಾಸ ಆತನಿಗೆ ಸಂತೋಷ ಕೊಡುವುದರಿಂದ ಆತ ಅದರಲ್ಲಿ ಉದ್ಯುಕ್ತನಾಗುತ್ತಾನೆ. ಆತನಿಗೆ ಅದು ಸಂತೋಷಕೊಡುವುದು ನಿಸರ್ಗ ಚೆಲುವಾಗಿರುವುದರಿಂದ. ನಿಸರ್ಗ ಚೆಲುವಾಗಿರ ದಿದ್ದಲ್ಲಿ ಅದನ್ನು ತಿಳಿಯುವುದು ವ್ಯರ್ಥವಾಗುತ್ತಿತ್ತು; ನಿಸರ್ಗವನ್ನು ತಿಳಿಯುವುದು ವ್ಯರ್ಥವಾಗಿದ್ದರೆ ಬದುಕು ವ್ಯರ್ಥವಾಗುತ್ತಿತ್ತು. ಅಂದಮಾತ್ರಕ್ಕೆ ನಾನಿಲ್ಲಿ ಇಂದ್ರಿಯಗೋಚರ ಸೌಂದರ್ಯವನ್ನು —ಗುಣಗಳೂ ಆಕಾರಗಳೂ ಒದಗಿಸುವ ಸೌಂದರ್ಯವನ್ನು—ಕುರಿತು ಪ್ರಸ್ತಾವಿಸುತ್ತಿಲ್ಲ. ಇಂಥ ಸೌಂದರ್ಯವನ್ನು ಕಡೆಗಣಿಸುವುದು ಎಂದೂ ನನ್ನ ಉದ್ದೇಶ ಅಲ್ಲ. ಆದರೆ ಇದಕ್ಕೆ ವಿಜ್ಞಾನದೊಡನೆ ಯಾವ ಸಂಬಂಧವೂ ಇಲ್ಲ. ನಾನು ಪ್ರಸ್ತಾವಿಸುತ್ತಿರುವ ಸೌಂದರ್ಯ ಶುದ್ಧ ಬುದ್ಧಿಗಮ್ಯವಾದದ್ದು; ಭಾಗಗಳ ಸಂಗತ ಹೊಂದಾಣಿಕೆಯಿಂದ ಲಭಿಸುವ ಸೌಂದರ್ಯವದು.

೪. ನಾಲ್ಕನೆಯ ಹಂತದಲ್ಲಿ ಆತ ಕಚ್ಚಾ ಭಾಷಾಂತರ ಸಾಮಗ್ರಿಯನ್ನು ನಾನಾ ವಿಧದ ಪರೀಕ್ಷೆಗಳಿಗೆ ಒಳಪಡಿಸಿ—ಮುಖ್ಯವಾಗಿ ಮೂಲಪಾಠದೊಡನೆ ಸವಿವರ ಅರ್ಥತುಲನೆ, ಪಾರಿಭಾಷಿಕ ಪದಗಳ ಶಿಷ್ಟೀಕರಣ, ಪ್ರತೀಕ ಮುಂತಾದವುಗಳ ತಪಾಸಣೆ, ಹಾಗೂ ಕನ್ನಡ ಗದ್ಯಲಯ—ಮತ್ತೆ ಅದಕ್ಕೆ ಮೆರುಗು ನೀಡಿ ಪೂರ್ಣ ಹಾಗೂ ಸುಂದರ ವಸ್ತುವಾಗಿ ಒಪ್ಪ ಓರಣ ನೀಡುತ್ತಾನೆ. ಕಂಬಳಿ ಹುಳು ಈಗ ಪೂರ್ಣ ಪತಂಗವಾಗಿ ರೂಪಾಂತರಣ ಗೊಂಡಿರುವುದು. ಇದಕ್ಕೆ ನಿದರ್ಶನವಾಗಿ ಮೂರನೆಯ ಹಂತದಲ್ಲಿ ಬರೆದಿರುವ ಕಚ್ಚಾ ಸಾಮಗ್ರಿಯ ಒಪ್ಪರೂಪ ನೋಡಿ :

ನಿಸರ್ಗ ಪ್ರಯೋಜನಕಾರಿ ಎಂಬುದಕ್ಕಾಗಿ ವಿಜ್ಞಾನಿ ಅದನ್ನು ಅಭ್ಯಸಿಸುವುದಲ್ಲ; ಅವನು ಅದನ್ನು ಅಭ್ಯಸಿಸುವುದು ಅದರಲ್ಲಿ ಅವನಿಗೆ ಆನಂದ ಒದಗುವುದರಿಂದ; ಅದರಲ್ಲಿ ಅವನಿಗೆ ಆನಂದ ಒದಗುವುದು ಅದು ಸುಂದರವಾಗಿರುವುದರಿಂದ. ನಿಸರ್ಗ ಸುಂದರವಾಗಿರದಿದ್ದರೆ ಅದನ್ನು ತಿಳಿಯು ವುದು ನಿಷ್ಪ್ರಯೋಜಕವಾಗಿರುತ್ತಿತ್ತು; ನಿಸರ್ಗವನ್ನು ತಿಳಿಯುವುದು ನಿಷ್ಪ್ರಯೋಜಕವಾಗಿದ್ದರೆ ಬದುಕು ಅರ್ಥಹೀನವಾಗಿರುತ್ತಿತ್ತು. ಇಂದ್ರಿಯಗಳಿಗೆ ಎದ್ದು ಕಾಣುವ ಸೌಂದರ್ಯವನ್ನು, ಅಂದರೆ ಗುಣಗಳ ಮತ್ತು ತೋರಿಕೆಗಳ ಸೌಂದರ್ಯವನ್ನು, ಕುರಿತು ನಾನಿಲ್ಲಿ ಪ್ರಸ್ತಾವಿಸುತ್ತಿಲ್ಲ ಎಂಬುದು ಸ್ಪಷ್ಟ. ಆ ಸೌಂದರ್ಯವನ್ನು ಕಡೆಗಣಿಸುವೆನೆಂದಲ್ಲ, ಅದೆಂದೂ ನನ್ನ ಉದ್ದೇಶ ಅಲ್ಲ; ಆದರೆ ಅದಕ್ಕೆ ವಿಜ್ಞಾನದೊಡನೆ ಏನೂ ವ್ಯವಹಾರವಿಲ್ಲ. ಬದಲು, ನನ್ನ ಮನದಲ್ಲಿರುವುದು ಭಾಗಗಳ ಸುಸಂಗತ ಮೇಳನದಿಂದ ಲಭಿಸುವ ಮತ್ತು ಶುದ್ಧ ಪ್ರತಿಭೆ ಮಾತ್ರ ಗ್ರಹಿಸಬಲ್ಲ ಆ ಗಭೀರ ಸೌಂದರ್ಯ.

೫. ಕೊನೆಯ ಹಂತದಲ್ಲಿ ಭಾಷಾಂತರಕಾರ ಪ್ರತಿಯೊಂದು ಪರಿಚ್ಛೇದವನ್ನೂ ಆಯಾ ಅಧ್ಯಾಯದ ಮುನ್ನೆಲೆಯಲ್ಲಿ ಮತ್ತು ಪ್ರತಿಯೊಂದು ಅಧ್ಯಾಯವನ್ನೂ ಸಮಗ್ರ ಪುಸ್ತಕದ

ಮುನ್ನೆಲೆಯಲ್ಲಿ ತಾಳೆಮಾಡಿ ತೂಗಿನೋಡಿ ಒರೆಹಚ್ಚಿ ಪುತ್ಥಳಿತನವನ್ನು ಗಟ್ಟಿಮಾಡಿಕೊಂಡು ಭಾವಶುದ್ಧಿ ಲಯಶುದ್ಧಿ ಎಲ್ಲವನ್ನೂ ಸಾಧಿಸಿ "ಇದೊ ಮುಗಿಸಿ ತಂದಿಹೆನ್" ಎನ್ನುವ ನಿವೇದನಭಾವದಿಂದ ಪ್ರಕಟಣೆಗೆ ಒಪ್ಪಿಸುತ್ತಾನೆ. ಮುದ್ರಣದ ವೇಳೆ ಕೂಡ ಇದನ್ನು ಇನ್ನಷ್ಟು ಶುದ್ಧೀಕರಿಸುವುದು ಸಾಧ್ಯ ಎಂಬುದು ಅವನಿಗೆ ತಿಳಿದಿದೆ.

III. ಭಾಷಾಂತರಕಾರ ತನ್ನ ಕೃತಿಯಲ್ಲಿ ಈ ಮುಂದಿನ ಹತ್ತು ಮುಖ್ಯ ದೋಷಗಳು ನುಸುಳದಂತೆ ವಿಶೇಷ ಕಾಳಜಿ ವಹಿಸಬೇಕು. ಏಕೆಂದರೆ ಇವುಗಳ ಪೈಕಿ ಯಾವುದೇ ಒಂದು ಕೂಡ ಭಾಷಾಂತರ ಕೃತಿಯಲ್ಲಿ ವ್ಯಾಪಕವಾಗಿ ಕಂಡುಬಂದದ್ದೇ ಆದರೆ ಅದರ ದುರಸ್ತಿ ವ್ಯರ್ಥಶ್ರಮ; ಅದು ಭಾಷಾಂತರಕಾರನ ಮಿದುಳಿನ ಪ್ರತಿಸ್ಥಾಪನೆಗೆ ಸಮಾನವಾಗುತ್ತದೆ. ಈ ಅಸಾಧ್ಯ ಕಾರ್ಯವನ್ನು ಕೈಬಿಟ್ಟು ಇತರ ಸಮರ್ಥ ಭಾಷಾಂತರಕಾರರಿಂದ ತರ್ಜುಮೆ ಮಾಡಿಸುವುದೊಂದೇ ಸಫಲ ಪ್ರಾಯೋಗಿಕ ಮಾರ್ಗ.

೧. ಸಂಕಲನ ದೋಷ : ಮೂಲದಲ್ಲಿ ಇಲ್ಲದುದನ್ನು ಅನುವಾದದಲ್ಲಿ ಸೇರಿಸುವುದು.

೨. ವ್ಯವಕಲನ ದೋಷ : ಮೂಲದಲ್ಲಿ ಇದ್ದುದನ್ನು ಅನುವಾದದಲ್ಲಿ ಬಿಡುವುದು.

೩. ಮಕ್ಕಿಕಾಮಕ್ಕಿ ದೋಷ : ಮೂಲದ ಒಂದು ಪದಕ್ಕೆ ಅನುವಾದದಲ್ಲಿ ಒಂದು ಪದ ಇರಲೇಬೇಕು, ಪದಗಳು ಬರುವ ಅನುಕ್ರಮವೂ ಹೆಚ್ಚು ಕಡಿಮೆ ಒಂದೇ ಆಗಿರಬೇಕು ಎನ್ನುವ ಮೂರ್ಖಶ್ರದ್ಧೆ. ಒಂದು ಉದಾಹರಣೆ ನೋಡಿ :

ಮೂಲ : The cloud chamber is a device for letting charged atomic particles, too small to be seen, reveal their paths by producing a vapour trail in a chamber. This tool of nuclear physics was invented by Professor C. T. R. Wilson.

ಭಾಷಾಂತರ ೧ : ಮೇಘಮಂದಿರ ನೋಡಲಾಗದಷ್ಟು ಸಣ್ಣಗಿರುವ ವಿದ್ಯುದಾವಿಷ್ಟ ಕಣಗಳು ಕೂಡ ಒಂದು ಕುಹರದಲ್ಲಿ ಬಾಷ್ಪ ಹಿಂಜೋಲನ್ನು ಉಂಟು ಮಾಡಿ ಪಥಗಳನ್ನು ತೋರಲು ಅವಕಾಶ ಮಾಡಿಕೊಡುವ ಒಂದು ನಿರ್ಮಾಣ. ನ್ಯೂಕ್ಲಿಯರ್ ಭೌತವಿಜ್ಞಾನದ ಈ ಸಾಧನವನ್ನು ಪ್ರೊಫೆಸರ್ ಸಿ. ಟಿ. ಆರ್. ವಿಲ್ಸನ್ ಉಪಜ್ಞೆಗೊಳಿಸಿದನು.

ಭಾಷಾಂತರ ೨ : ಕಣ್ಣಿಗೆ ಕಾಣದಷ್ಟು ಅನಂತಾಲ್ಪ ಗಾತ್ರದ ವಿದ್ಯುದಾವಿಷ್ಟ ಪರಮಾಣವಿಕ ಕಣಗಳು ಬಾಷ್ಪಹಿಂಜೋಲನ್ನು ಉತ್ಪಾದಿಸುವುದರ ಮೂಲಕ ತಮ್ಮ ಜಾಡುಗಳನ್ನು ಪ್ರಕಟಪಡಿಸಲೋಸ್ಕರ ವಿಶೇಷವಾಗಿ ನಿರ್ಮಿಸಲಾಗಿರುವ ಸಾಧನವೇ ಮೇಘಕೋಷ್ಠ. ನ್ಯೂಕ್ಲಿಯರ್ ಭೌತ ವಿಜ್ಞಾನದ ಈ ಹತ್ಯಾರನ್ನು ಉಪಜ್ಞಿಸಿದಾತ ಪ್ರೊಫೆಸರ್ ಸಿ. ಟಿ. ಆರ್. ವಿಲ್ಸನ್.

ಅಂದ ಹಾಗೆ ಇಲ್ಲಿಯ ಇಂಗ್ಲಿಷ್‌ಮೂಲವೇ, ಶೈಲಿಯ ದೃಷ್ಟಿಯಿಂದ, ದೋಷಪೂರ್ಣವಾಗಿದೆ. ಆದ್ದರಿಂದ ನೀತಿ: ಅಶುದ್ಧ ಶೈಲಿಯ ಇಂಗ್ಲಿಷ್ ಕೃತಿಯನ್ನು ಕನ್ನಡಕ್ಕೆ ಅನುವಾದಿಸುವುದು ವ್ಯರ್ಥ ಸಾಹಸ, ಒಂದು ಬಗೆಯ ವಂಚನೆ.

೪. ನಿಘಂಟುವಿನ ಅಂಧಾನುಕರಣೆ ದೋಷ : ವಿವೇಕರಹಿತವಾಗಿ (ಭಾಷಾಂತರ ಕಾರ್ಯದಲ್ಲಿ ವಿವೇಕ ಬರುವುದು ವಿಷಯಪ್ರಭುತ್ವ ಹಾಗೂ ಉಭಯ ಭಾಷಾಪರಿಜ್ಞಾನಗಳಿಂದ ಮಾತ್ರ) ನಿಘಂಟುವಿನ ಪದಗಳನ್ನು ಆಯ್ದು ಪೋಣಿಸುತ್ತ ಹೋಗುವುದು. ಕೆಲವು ಉದಾಹರಣೆಗಳನ್ನು ನೋಡಿ.

instruction to computer = ಗಣಕಕ್ಕೆ ಉಪದೇಶ ('ಗಣಕಕ್ಕೆ ಸೂಚನೆ' ಅಥವಾ 'ಗಣಕಕ್ಕೆ ನಿರ್ದೇಶನ')

function of life = ಬದುಕಿನ ಹಬ್ಬ ('ಬದುಕಿನ ಕ್ರಿಯೆ' ಅಥವಾ 'ಜೀವದ ಕ್ರಿಯೆ')

sugar dissolves in water = ಸಕ್ಕರೆ ನೀರಿನಲ್ಲಿ ಕರಗುತ್ತದೆ ('ಸಕ್ಕರೆ ನೀರಿನಲ್ಲಿ ಲೀನಿಸುತ್ತದೆ')

೫. ಅನ್ವಯ ದೋಷ : ಮೂಲದಲ್ಲಿ ಅಪಾನ್ವಯ ಮಾಡುವುದರಿಂದ ಘಟಿಸುವ ಅಪಚಾರ (ಮೇಣ-ಸೂಜಿ-ರೀಗೆ ದೋಷ). ಒಂದು ಉದಾಹರಣೆ ನೋಡಿ :

ಮೂಲ : In serving science and business, the mathematics of probability has attained a status far above its origins, which were slightly on the suspect side.

ಭಾಷಾಂತರ : ವಿಜ್ಞಾನ ಮತ್ತು ವಾಣಿಜ್ಯ ಅಷ್ಟೇನೂ ಸಾಚಾ ಕ್ಷೇತ್ರಗಳು ಆಗಿಲ್ಲದಿದ್ದಾಗ ಸಂಭಾವ್ಯತಾಗಣಿತ ಅವುಗಳಿಗೆ ಸೇವೆ ಒದಗಿಸಿ ತನ್ನ ಮೂಲ ಅಂತಸ್ತಿಗಿಂತ ಅದೆಷ್ಟೋ ಪಟ್ಟು ಹೆಚ್ಚಿನ ಅಂತಸ್ತನ್ನು ಪಡೆಯಿತು.

ಟೀಕೆ : Which were slightly on the suspect side ಎಂಬ ಗುಣವಾಚಕೋಪವಾಕ್ಯ origins ಪದಕ್ಕೆ ಅನ್ವಯವಾಗುತ್ತದೆ ಎಂಬ ಅಂಶ ಈ 'ಅಪೂರ್ವ' ಭಾಷಾಂತರಕಾರನಿಗೆ ಹೊಳೆಯದಿದ್ದುದರ ಕಾರಣ ಪ್ರಾಯಃ ಎರಡು : ಇಂಗ್ಲಿಷ್ ಭಾಷೆ ಸರಿಯಾಗಿ ತಿಳಿಯದಿರುವುದು, ವಿಷಯಪರಿಜ್ಞಾನ ಸಾಕಷ್ಟು ಇಲ್ಲದಿರುವುದು. ಸರಿಯಾದ ರೂಪ ಹೀಗಿರಬೇಕು: "ಸಂಭಾವ್ಯತಾಗಣಿತದ ಮೂಲ ಅಷ್ಟೇನೂ ಸಾಚಾ ಆಗಿರದಿದ್ದರೂ ವಿಜ್ಞಾನ ಹಾಗೂ ವಾಣಿಜ್ಯ ಕ್ಷೇತ್ರಗಳಿಗೆ ಅದು ಒದಗಿಸಿದ ಸೇವೆ ಅದಕ್ಕೆ ಅದೆಷ್ಟೋ ಪಟ್ಟು ಹೆಚ್ಚಿನ ಅಂತಸ್ತನ್ನು ನೀಡಿತು." ಅಥವಾ "ಸಂಭಾವ್ಯತಾಗಣಿತ ಅಷ್ಟೇನೂ 'ಮರ್ಯಾದೆ'ಯ ಹಿನ್ನೆಲೆಯಲ್ಲಿ ಉಗಮಿಸಿರಲಿಲ್ಲ. ಹಾಗಿದ್ದರೂ ವಿಜ್ಞಾನ ಮತ್ತು ಗಣಿತರಂಗಗಳಲ್ಲಿಯ ಅದರ ಉಪಯುಕ್ತತೆಯಿಂದಾಗಿ ಅದಕ್ಕೆ ಅದೆಷ್ಟೋ ಪಟ್ಟು ಹೆಚ್ಚಿನ ಅಂತಸ್ತು ಲಭ್ಯವಾಗಿದೆ."

೬. ಅರ್ಥ ದೋಷ : ಪದಗಳ ಸಾಂದರ್ಭಿಕಾರ್ಥವನ್ನು ಸರಿಯಾಗಿ ಗ್ರಹಿಸದಿರುವುದು. ಯಾವುದೇ ಭಾಷೆಯಲ್ಲಿ "ಒಂದು ಪದ = ಒಂದು ಅರ್ಥ" ಎನ್ನುವ ಸರಳ ಸಂಬಂಧ ಇಲ್ಲ. ಇನ್ನು ಯಾವುದೇ ಎರಡು ಭಾಷೆಗಳ ನಡುವೆ "ಒಂದರ ಒಂದು ಪದ = ಇನ್ನೊಂದರ ಒಂದು ಪದ" ಎನ್ನುವ ಅತಿ ಸರಳ ಸಂಬಂಧವೂ ಇಲ್ಲ. ಇಂಗ್ಲಿಷಿನಲ್ಲಿ power ಎನ್ನುವ ಪದಕ್ಕೆ ವಿಜ್ಞಾನದಲ್ಲೇ ಕನಿಷ್ಠ ಪಕ್ಷ ಮೂರು ಭಿನ್ನಾರ್ಥಗಳಿವೆ :

(i) The *power* of a point with respect to a circle

(ii) Horse *power*

(iii) Electric *power*

Grow ಮತ್ತು develop ಮೇಲುನೋಟಕ್ಕೆ ಪರ್ಯಾಯಪದಗಳಾಗಿ ತೋರುತ್ತವೆ. ಏಕೆಂದರೆ ಇವುಗಳಿಗೆ ನಿಘಂಟು ಕೊಡುವ ಅರ್ಥಗಳು ಹೀಗಿವೆ :

grow = to spring up and develop into maturity

develop = to set forth or make clear by degrees or in detail

ರೂಢಿಯ ಮಾತು ಬರವಣಿಗೆಗಳಲ್ಲಿ ಈ ಪದಗಳನ್ನು ಸಮಾನಾರ್ಥಕಗಳಾಗಿ ಬಳಸಿದಾಗ ಅರ್ಥಗ್ರಹಣಕ್ಕೆ ವಿಶೇಷ ತೊಂದರೆ ಏನೂ ಆಗುವುದಿಲ್ಲ. ಕನ್ನಡದಲ್ಲಿ ಸಾಧಾರಣವಾಗಿ 'ಬೆಳೆ' ಎಂಬ ಪದದಿಂದ grow ಮತ್ತು develop ಪದಗಳನ್ನು 'ಸುಧಾರಿಸುವುದು' ವಾಡಿಕೆ ಆಗಿಹೋಗಿದೆ. ಈಗ, as it grows the foetus develops new organs ಎಂಬ ವಾಕ್ಯವನ್ನು grow ಮತ್ತು develop ಪದಗಳ ನಡುವಿನ ಸ್ಪಷ್ಟ ವ್ಯತ್ಯಾಸ ತಿಳಿಯದಾತ ಅನುವಾದಿಸುವಾಗ ಆ ವಾಕ್ಯ ಹೀಗಿರುತ್ತದೆ:

ಭ್ರೂಣ ಬೆಳೆದಂತೆ ಅದರಲ್ಲಿ ಹೊಸ ಅಂಗಗಳು ಬೆಳೆಯುತ್ತವೆ. ಅಥವಾ, ಭ್ರೂಣ ಬೆಳೆದಂತೆ ಅದರಲ್ಲಿ ಹೊಸ ಅಂಗಗಳು ರೂಪುಗೊಳ್ಳುತ್ತವೆ.

ಸರಿಯಾದ ಅನುವಾದ ಹೀಗಿರಬೇಕು: ಭ್ರೂಣ ಬೆಳೆದಂತೆ ಅದರಲ್ಲಿ ಹೊಸ ಅಂಗಗಳು ಅಭಿವರ್ಧಿಸುತ್ತವೆ.

ಹೊಸ ಅಂಗಗಳ development ಎಂಬುದು growthನ (ಬೆಳವಣಿಗೆಯ) ವಿಶೇಷ ಬಗೆ ; ಎಂದೇ ಇದನ್ನು 'ಅಭಿವರ್ಧನೆ' (ಅಭಿವರ್ಧಿಸು) ಎಂಬ ಇತರ ಪದದಿಂದ ಸೂಚಿಸಲೇಬೇಕು. ಹೀಗೆ ಮಾಡಿದಾಗ ಮಾತ್ರ ಭಾಷೆಗೆ ಮೊನಚು ಒದಗುತ್ತದೆ.

೭. ಜಾಯಮಾನ ದೋಷ : ಭಾಷಾಂತರದಲ್ಲಿ ಕನ್ನಡತನದ ಗೈರುಹಾಜರಿ. ಕನ್ನಡದಲ್ಲಿ ಯೋಚನೆ ಮಾಡಿ, ಕನ್ನಡದಲ್ಲಿ ಗಟ್ಟಿಯಾಗಿ ನುಡಿದು, ತರುವಾಯ ಬರೆಯಲು ತೊಡಗುವುದರಿಂದ ಆ ದೋಷಕ್ಕೆ "ಶಾಂತಿ" ಮಾಡಬಹುದು. ಜೀವಂತ ಕನ್ನಡ ಸಾಹಿತ್ಯದಲ್ಲಿ ಆಳವಾದ ಆಸಕ್ತಿ, ಪ್ರವೇಶ ಮತ್ತು ಯಶಸ್ವಿಯಾಗಿ ಕೈ ಆಡಿಸಬಲ್ಲ ಸಾಮರ್ಥ್ಯ ಹಾಗೂ ಜನಜೀವನದಲ್ಲಿ ಮಿಳನ ತೀರ ಆವಶ್ಯಕ. ಒಂದು ಉದಾಹರಣೆ ನೋಡಿ :

ಮೂಲ : After years of intensive work examining all kinds of mosquitoes under a microscope, he discovered in one of them, a female Anopheles, an unusual kind of cell. On further investigation the cell was found to contain a few granules of black pigment, exactly like that of the malaria parasite in man.

ಭಾಷಾಂತರ ೧ : ಎಲ್ಲಾ ರೀತಿಯ ಸೊಳ್ಳೆಗಳನ್ನೂ ಸೂಕ್ಷ್ಮದರ್ಶಕದ ಕೆಳಗೆ ಪರೀಕ್ಷಿಸುತ್ತಾ ಹಲವಾರು ವರ್ಷಗಳು ಸತತವಾಗಿ ದುಡಿದನಂತರ ಒಂದು ಹೆಣ್ಣು ಅನಾಫಿಲಿಸ್ ಸೊಳ್ಳೆಯಲ್ಲಿ ಹಿಂದೆಂದೂ ಕಾಣದಿದ್ದ ಒಂದು ಜೀವಕೋಶವನ್ನು ಅವರು ಕಂಡರು. ಮುಂದೆ ನಡೆಸಿದ ಪರೀಕ್ಷೆಗಳ ಫಲವಾಗಿ, ಮನುಷ್ಯನಲ್ಲಿ ಕಂಡುಬರುವ ಮಲೇರಿಯಾ ಪರೋಪಜೀವಿಯಲ್ಲಿ ಹೇಗೋ ಹಾಗೆ ಈ ಜೀವಕೋಶದಲ್ಲಿ ಕಪ್ಪು ವರ್ಣದ್ರವ್ಯದ ಹಲವು ಕಣಗಳಿದ್ದುದು ಕಂಡುಬಂತು.

ಭಾಷಾಂತರ ೨ : [ಮಲೇರಿಯಕ್ಕೂ ಸೊಳ್ಳೆಗೂ ನಡುವೆ ಖಚಿತ ಕೊಂಡಿಯನ್ನು ಅರಸಲು ಸಾಕಷ್ಟು ಕಾಲವನ್ನೂ ಶಕ್ತಿಯನ್ನೂ ವ್ಯಯಿಸಿ] ಹಲವಾರು ವರ್ಷಗಳ ಕಾಲ ತೀವ್ರಾಧ್ಯಯನ ಮಾಡಿ ವಿವಿಧ ಬಗೆಯ ಸೊಳ್ಳೆಗಳನ್ನು ಸೂಕ್ಷ್ಮದರ್ಶಕದ ಮೂಲಕ ತಪಾಸಿಸಿದ. ಆಗ ಅವನಿಗೆ ಹೆಣ್ಣು ಅನಾಫಿಲೀಸ್ ಸೊಳ್ಳೆಯಲ್ಲಿ ವಿಶೇಷ ಬಗೆಯ ಕೋಶವಿರುವುದು ಕಂಡುಬಂದಿತು. ಈ ಕೋಶವನ್ನು ಮತ್ತಷ್ಟು ಸೂಕ್ಷ್ಮವಾಗಿ ಅನ್ವೇಷಿಸಿದಾಗ ಅದರಲ್ಲಿ ಕಪ್ಪು ವರ್ಣಕದ ಕೆಲವು ಹರಳುಗಳಿರುವುದು ಪತ್ತೆ ಆಯಿತು. ಇವು ಮನುಷ್ಯನನ್ನು ಪೀಡಿಸುತ್ತಿದ್ದ ಮಲೇರಿಯ ಪರೋಪಜೀವಿಗಳ ವರ್ಣಕಗಳಂತೆಯೇ ಇದ್ದುವು.

ಭಾಷಾಂತರ ೧ರ ಕನ್ನಡ ಜಾಯಮಾನಹೀನತೆಯ ಬಗ್ಗೆ ಟೀಕೆ ಅನಾವಶ್ಯಕ.

೮. ಪಾರಿಭಾಷಿಕ ಪದದೋಷ : ಒಂದೇ ಭಾಷಾಂತರದಲ್ಲಿ ಒಂದು ಇಂಗ್ಲಿಷ್ ಪಾರಿಭಾಷಿಕ ಪದಕ್ಕೆ ಹಲವು ಕನ್ನಡ ಪಾರಿಭಾಷಿಕ ಪದಗಳು ಬರುವಿಕೆ. ಇದಕ್ಕೆ ಪರಿಹಾರವೇನು ಎಂಬುದನ್ನು ಈ ಹಿಂದೆ ಚರ್ಚಿಸಲಾಗಿದೆ.

೯. ಉಷ್ಟ್ರಪಕ್ಷಿ ನಿಲವು ದೋಷ : ಆಧುನಿಕ ವಿಜ್ಞಾನ ನಮ್ಮ ನೆಲದಲ್ಲಿ ವಿಕಸಿಸಿಲ್ಲವಾದ್ದರಿಂದ ಖಚಿತ ಪಾರಿಭಾಷಿಕ ಪದಗಳು ಇಲ್ಲಿ ರೂಪುಗೊಂಡಿಲ್ಲ. ಇಂದು ವಿಜ್ಞಾನ ವಾಙ್ಮಯ ಬೆಳೆದು ಅಭಿವರ್ಧಿಸಬೇಕಾದರೆ ಯುಕ್ತ ಪಾರಿಭಾಷಿಕ ಪದಗಳ ಸೃಷ್ಟಿ ಹಾಗೂ ಬಳಕೆ ಅಗತ್ಯ, ಅನಿವಾರ್ಯ. ಭಾಷಾಂತರವಲ್ಲದ ವಿಜ್ಞಾನ ವಾಙ್ಮಯ ನಿರ್ಮಾಣದಲ್ಲಿ—ಅಂದರೆ ಸ್ವಂತ ರಚನೆಯಲ್ಲಿ—ಪಾರಿಭಾಷಿಕ ಪದಗಳನ್ನು ಕುರಿತಂತೆ ನಮ್ಮ ಧೋರಣೆ ಬಹುತೇಕ ಉಷ್ಟ್ರಪಕ್ಷಿ ನಿಲವು—ಅವು ಬೇಡ ಅರ್ಥಾತ್ ಅವುಗಳ ಅಗತ್ಯ ಕನ್ನಡಕ್ಕೆ ಇಲ್ಲ ಎಂಬಂಥ ಅಂಧದೃಷ್ಟಿ! ಹೀಗಾಗಿ ಪ್ರತಿ ಸಲವೂ ನಿರ್ದಿಷ್ಟ, ಪದಖಚಿತವಾಗಿಯೂ ಅಡಕವಾಗಿಯೂ ನಿರ್ವಹಿಸಬಲ್ಲ ಭಾವಸಂವಹನ ಕ್ರಿಯೆಯನ್ನು ನಾವು ಹಲವು ಪದಗಳ ವಿವರಣಾತ್ಮಕ ನಿರೂಪಣೆಯಿಂದ ಅಡ್ಡಹಾಯುತ್ತ ಬಂದಿದ್ದೇವೆ. ಬಹುಮಂದಿ ಬರೆಹಗಾರರು "ಇದು ಸರಳ ಕನ್ನಡ. ತಿಳಿಯುವ ಕನ್ನಡ" ಎಂಬುದಾಗಿ ಅಜ್ಞಾನದಿಂದ ಒದಗಿರುವ ತಮ್ಮ ಅವೈಜ್ಞಾನಿಕ ನಿಲವನ್ನು ಸಮರ್ಥಿಸಿಕೊಂಡಿರುವುದೂ ಉಂಟು; ಆಗ ಈಗ ಇಂಗ್ಲಿಷ್ ಪದಗಳನ್ನು ಆವರಣಗಳಲ್ಲಿ ಬರೆದು ಸಮಸ್ಯೆಯನ್ನು 'ಜಾರಿಸಿದ್ದೂ' ಉಂಟು. ಎರಡು ಉದಾಹರಣೆಗಳನ್ನು ನೋಡಿ :

ಮೂಲ : Any tangent to a circle cuts it in two coincident points.

ಭಾಷಾಂತರ ೧ : ಯಾವುದೇ ವೃತ್ತವನ್ನು ಸ್ಪರ್ಶಿಸಲೆಂದೆಳೆದ ಯಾವುದೇ ಸರಳರೇಖೆ ಅದನ್ನು ಒಂದೇ ಆಗಿರುವ ಎರಡು ಬಿಂದುಗಳಲ್ಲಿ ಛೇದಿಸುತ್ತದೆ.

ಭಾಷಾಂತರ ೨ : ಯಾವುದೇ ವೃತ್ತದ ಸ್ಪರ್ಶರೇಖೆ ಅದನ್ನು ಎರಡು ಐಕ್ಯಬಿಂದುಗಳಲ್ಲಿ ಛೇದಿಸುತ್ತದೆ.

ಮೂಲ : Pigments are responsible for the colour of skin.

ಭಾಷಾಂತರ ೧ :ಚರ್ಮಕ್ಕೆ ಬಣ್ಣ ಕೆಲಬಗೆಯ ಕಣಗಳಿಂದ ಬರುವುದಾಗಿದೆ.

ಭಾಷಾಂತರ ೨ : ವರ್ಣಕಗಳು ಚರ್ಮದ ಬಣ್ಣಕ್ಕೆ ಕಾರಣ.

ಟೀಕೆ : ಭಾಷೆ ಸುಪುಷ್ಟವಾಗಿ ವಿಕಸಿಸಬೇಕಾದರೆ "ಪರಿಕಲ್ಪನೆಗಳನ್ನು ವಿವರಿಸಿ ಪರಿಹರಿಸುವ ನಿಲವ"ನ್ನು ಮೊದಲು ನಾವು ತೊರೆಯಬೇಕು. ನಾವು ಬಳಸಿದ ಪ್ರತಿಯೊಂದು ಹೊಸ ಪಾರಿಭಾಷಿಕ ಪದಕ್ಕೂ ವಿವರಣೆಯನ್ನೂ ಮತ್ತು/ಅಥವಾ ಇಂಗ್ಲಿಷ್ ಸಮಾನ ಪದವನ್ನೂ ಅದು ಮೊದಲ ಬಾರಿಗೆ ಬಂದಾಗ ಅಲ್ಲಲ್ಲೇ ಕೊಡುವುದು ಅಪೇಕ್ಷಣೀಯ. ಪುಸ್ತಕದ ಕೊನೆಯಲ್ಲಿ ಕೋಷ್ಟಕವನ್ನು ಸಹ ಸೇರಿಸಬಹುದು.

೧೦. ಉಚ್ಚಾರಣಾದೋಷ : ಹಲವಾರು ಇಂಗ್ಲಿಷ್ ಪಾರಿಭಾಷಿಕ ಪದಗಳನ್ನೂ ಎಲ್ಲ ಅಂಕಿತನಾಮಗಳನ್ನೂ ತದ್ವತ್ತಾಗಿ ಕನ್ನಡಕ್ಕೆ ಸಾಗಹಾಕಬೇಕಾಗುತ್ತದೆ. ಈ ಕೆಲಸದಲ್ಲಿ ನಮ್ಮ ವೈಯಕ್ತಿಕ ವಕ್ರತೆಗಳು ನುಸುಳದಂತೆ ಎಚ್ಚರ ವಹಿಸಬೇಕು. ಶಿಷ್ಟ ನಿಘಂಟುಗಳ ಆಧಾರದಿಂದ ಲಿಪ್ಯಂತರಣ ಮಾಡುವುದೊಂದೇ ಸರಿಯಾದ ಕ್ರಮ. ಕೆಲವು ಉದಾಹರಣೆಗಳನ್ನು ನೋಡಿ :

| ಇಂಗ್ಲಿಷ್ | ತಪ್ಪು ಲಿಪ್ಯಂತರಣ | ಸರಿಲಿಪ್ಯಂತರಣ |
|---|---|---|
| Henri Poincare | ಹೆನ್ರಿ ಪಾಯ್ಂಕಾರೇ | ಆನ್ರೀ ಪ್ವಾನ್‌ಕ್ಯಾರೇ |
| Erwin Schrodinger | ಎರ್ವಿನ್ ಶ್ರೋಡಿಂಗರ್ | ಎರ್ವಿನ್ ಶ್ರೇಡಿಂಗರ್ |
| radar | ರಾಡಾರ್ | ರೇಡಾರ್ |
| trinitro-toluene | ಟ್ರೈನೈಟ್ರೊ ಟಾಲಿನ್ | ಟ್ರೈನೈಟ್ರೊ-ಟಾಲ್ವೀನ್ |

IV. ಮೂಲಗ್ರಂಥದಲ್ಲಿ ವ್ಯಾಕರಣ ದೋಷಗಳೂ ತರ್ಕದೋಷಗಳೂ ಎದುರಾಗಬಹುದು; ಭಾಷೆ ತೀರ ನೀರಸವಾಗಿ ಸಾಗುತ್ತಿರಬಹುದು. ಇಂಥ ಸನ್ನಿವೇಶಗಳಲ್ಲಿ ಭಾಷಾಂತರಕಾರನ ಪಾತ್ರವೇನು? ಇವನ್ನೆಲ್ಲ ಸಮರ್ಥವಾಗಿ ನಿವಾರಿಸಿ ತರ್ಕಶುದ್ಧ ಹಾಗೂ ಆಕರ್ಷಕ ಸಂವಹನತೆ ಕನ್ನಡಾನುವಾದದಲ್ಲಿ ಒದಗುವಂತೆ ಎಚ್ಚರ ವಹಿಸುವುದು ಆತನ ನೈತಿಕ ಹೊಣೆ. ಅಂತಿಮವಾಗಿ ಜ್ಞಾನವೊಂದೇ ಸತ್ಯವಾದದ್ದು, ಅದರ ಮುಂದೆ ಮೂಲ ಕರ್ತೃವೂ ಭಾಷಾಂತರಕಾರನೂ ಶಿಶುಗಳು ಎಂಬುದನ್ನು ಮರೆಯಬಾರದು.

ಪರಿಕಲ್ಪನಾತ್ಮಕ ಸ್ಪಷ್ಟತೆ (conceptul clarity) ಎಂಬುದರ ಬಗ್ಗೆ ಇಲ್ಲಿ ಪ್ರಸ್ತಾವಿಸುವುದು ಅಗತ್ಯ.

ಒಂದು ಉದಾಹರಣೆ ನೋಡಿ. ನಮ್ಮ ದೇಹಕ್ಕೆ ದವಸ, ಧಾನ್ಯ, ಹಾಲು, ಮೊಟ್ಟೆ, ತರಕಾರಿ, ಹಣ್ಣು ಮುಂತಾದವು ಮಾತ್ರ ಆಹಾರ ಆಗಬೇಕು ಏಕೆ? ಕಲ್ಲು, ಮಣ್ಣು, ಮರ, ಲೋಹ, ಬಟ್ಟೆ ಕಾಗದ ಏಕಾಗಬಾರದು? "ದೇಹ ಮತ್ತು ಆಹಾರ" ಎಂಬುದನ್ನು ಕುರಿತ ಯಾವುದೇ ಲೇಖನ ಈ ಪ್ರಶ್ನೆಗಳಿಗೆ ಸ್ಪಷ್ಟವಾದ ಉತ್ತರ ಕೊಡುವುದು ಆದ್ಯ ಆವಶ್ಯಕತೆ. "ಆಹಾರ ಬದುಕಿಗೆ ಅವಶ್ಯ. ಅದಿಲ್ಲದಿದ್ದರೆ ನಮ್ಮ ಚಟುವಟಿಕೆಗಳಿಗೆ ಬೇಕಾಗುವ ಶಕ್ತಿ ಒದಗದು. ದೇಹ ಸೊರಗುತ್ತದೆ..." ಈ ಧಾಟಿಯಲ್ಲಿ ಹೋಗುವ ಲೇಖನ ಎಷ್ಟೇ ಸರಳವಾಗಿದ್ದರೂ ಆಕರ್ಷಕವಾಗಿದ್ದರೂ ಅದು ಕೇವಲ ಪದಗಳ ಅಪವ್ಯಯವಾದೀತು ಅಷ್ಟೆ. ಮೂಲತಃ ಈ ಲೇಖನ ಆಹಾರವೆಂದರೇನು ಎಂಬುದನ್ನು ಸ್ಪಷ್ಟಪಡಿಸಲೇಬೇಕು.

ರಾಸಾಯನಿಕವಾಗಿ ನಮ್ಮ ದೇಹ ನೀರು, ಸಸಾರಜನಕ ಪದಾರ್ಥಗಳು, ಶರ್ಕರಗಳು ಹಾಗೂ ಕೆಲವೊಂದು ಲವಣಗಳು—ಇವುಗಳ ಕ್ರಮಬದ್ಧ ಸಂಯೋಜನೆ. ಇದೊಂದು ರಾಸಾಯನಿಕ ಕಾರ್ಖಾನೆ. ಈ ಕಾರ್ಖಾನೆ ಕಾರ್ಯವೆಸಗಲು ಇಂಧನ ಅವಶ್ಯ. ಇವೇ ಪದಾರ್ಥಗಳನ್ನು ಒದಗಿಸುವ ವಸ್ತುಗಳು ಮಾತ್ರ ದೇಹಕಾರ್ಖಾನೆಗೆ ಇಂಧನವಾಗಬಲ್ಲವು. ಎಂದೇ ಸಸ್ಯ ಹಾಗೂ ಪ್ರಾಣಿಗಳು ಮಾತ್ರ ಮನುಷ್ಯದೇಹಕ್ಕೆ ಇಂಧನವಾಗಲು, ಅಂದರೆ ಆಹಾರವಾಗಲು, ಅರ್ಹತೆ ಪಡೆದಿರುವುದಾಗಿದೆ.

ಲೇಖನದಲ್ಲಿ ಈ ತೆರನಾಗಿ ಪರಿಕಲ್ಪನಾತ್ಮಕ ಸ್ಪಷ್ಟತೆಯನ್ನು ಮೊದಲು ಸಾಧಿಸಿ ತದನಂತರವೇ ಉಳಿದ ವಿವರಗಳತ್ತ ಲಕ್ಷ್ಯ ಹರಿಸಬೇಕು. ಇಂಥ ಲೇಖನ ಮಾತ್ರ ಗಟ್ಟಿ ನೆಲದ ಮೇಲೆ ಭದ್ರವಾಗಿ ನಿಂತಿರಬಲ್ಲದು.

ಭಾಷಾಂತರಕಾರನಾದರೂ ಮಾಡಬೇಕಾದದ್ದು ಪ್ರಧಾನತಃ ಇದೇ ಕಾರ್ಯವನ್ನು. ಮೂಲದ ಪರಿಕಲ್ಪನೆ ಅನುವಾದದಲ್ಲಿ ಅಷ್ಟೇ ಖಚಿತವಾಗಿ ಸ್ಪಷ್ಟವಾಗಿ ಪಡಿಮೂಡುವಂತೆ ಎಚ್ಚರ ವಹಿಸುವುದು ಅವನ ಹೊಣೆ. ಅನುವಾದಗ್ರಂಥವಿರುವುದು ಮೂಲವನ್ನು ಓದಿ ತಿಳಿಯಲಾರದವರಿಗೆ ಎಂದಮೇಲೆ ಭಾಷಾಂತರಕಾರನ ಮೇಲೆ ಎಂಥ ಗುರುತರ ಜವಾಬ್ದಾರಿಕೆ ಇದೆ ಎಂಬುದು ಸ್ಪಷ್ಟವಾಗುತ್ತದೆ. ಉದ್ದಿಷ್ಟ ಭಾಷೆಯ ಸೀಮಿತತೆಯಿಂದಾಗಿ

ಪರಿಕಲ್ಪನಾತ್ಮಕ ಸ್ಪಷ್ಟತೆಗೆ ಊನವಾದೀತೆಂದು ಈತನಿಗೆ ಅನ್ನಿಸಿದಲ್ಲೆಲ್ಲ ಸ್ವಲ್ಪ ಸ್ವಾತಂತ್ರ್ಯ ವಹಿಸಿ ಭಾಷಾಂತರವನ್ನು ಲಂಬಿಸುವುದು ಅಪೇಕ್ಷಣೀಯ.

ಪರಿಕಲ್ಪನಾತ್ಮಕ ಸ್ಪಷ್ಟತೆ ಎಂಬುದು ಲೇಖನದ/ಗ್ರಂಥದ ಭದ್ರ ಕಂಕಾಲ. ಇದರ ಸುತ್ತ ಹೆಣೆದ ವಿವರಣೆ ಮಾತ್ರ ಚೆಲುವನ್ನು ಪಡೆಯುತ್ತದೆ, ಓದುಗನಿಗೆ ಉಪಯುಕ್ತವಾಗುತ್ತದೆ. ಪರಿಕಲ್ಪನಾತ್ಮಕ ಸ್ಪಷ್ಟತೆ ಇಲ್ಲದ ಲೇಖನ/ಗ್ರಂಥ ಸ್ವತಂತ್ರ ರಚನೆಯೇ ಇರಲಿ, ಭಾಷಾಂತರ ಕೃತಿಯೇ ಇರಲಿ—ಅಂತಿಮವಾಗಿ ಅದೊಂದು ಗೊಂದಲದ ಸಂತೆ, ವ್ಯರ್ಥಾಲಾಪ ಪ್ರಲಾಪಗಳ ಬೊಂತೆ.

V. ಯಂತ್ರಾನುವಾದ: ನಾವಿಂದು ಎಲೆಕ್ಟ್ರಾನಿಕ್ ಯುಗದಲ್ಲಿದ್ದೇವೆ (೨೧ನೆಯ ಶತಮಾನ). ಯಾವುದೇ ಭಾಷೆಯಲ್ಲಿರುವ ವಾಙ್ಮಯವನ್ನು ಗಣಕಕ್ಕೆ ಊಡಿ ಉದ್ದಿಷ್ಟ ಭಾಷೆಗೆ ಅನುವಾದಿಸಲು ಯುಕ್ತ ಆದೇಶವಿತ್ತರೆ ದಿಢೀರನೆ ಭಾಷಾಂತರ ಪ್ರದಾನಿಸುವ ಮಾಯಾಯಂತ್ರ ನಮಗೆ ಸಿದ್ಧಿಸಿದೆ. ಇಂಥ ನೀರಸ ಯಾಂತ್ರಿಕ ನಿಲವಿನಿಂದ ಘಟಿಸಿರುವ ಭಾಷಾಂತರಾವಾಂತರಕ್ಕೆ ಒಂದು ನಿದರ್ಶನ :

ಇಂಗ್ಲಿಷಿನ ನುಡಿಕಟ್ಟು: spirit is willing, but flesh is weak—ಇದನ್ನು ಮೊದಲು ರಶ್ಯನ್ ಭಾಷೆಗೆ ಯಂತ್ರಾನುವಾದ ಮಾಡಿ ಈ ರಶ್ಯನ್ ಅನುವಾದವನ್ನು ಪುನಃ ಇಂಗ್ಲಿಷಿಗೆ ಯಂತ್ರಾನುವಾದಗೈದಾಗ ದೊರೆತ ವಾಕ್ಯ : Vodka is strong, but meat is rotten!

ನೀತಿ: ಮಾನವಸೃಜನಶೀಲತೆಯ ನಿರ್ಮಿತಿಯಾಗಿರುವ ಯಂತ್ರ ಖುದ್ದು ಅದರ ನಿರ್ಮಾಪಕನಿಗೆ ಸಹಾಯಕ ಸಲಕರಣೆ ಆದೀತೇ ವಿನಾ ಪರ್ಯಾಯ 'ವ್ಯಕ್ತಿ' ಎಂದೂ ಆಗದು.

## ಮುಕ್ತಾಯ

ಈ ತನಕದ ವಿಶ್ಲೇಷಣೆಯನ್ನು ಓದಿದ ನಿಮ್ಮಲ್ಲಿ ಒಂದು ಭಾವನೆ ಸ್ಫುರಿಸಿರಬಹುದು: ಆದರ್ಶ ಸನ್ನಿವೇಶದಲ್ಲಿ ಇದು ಸರಿಹೋದೀತೂ ಏನೊ ; ಸದ್ಯ ಅತಿ ತುರ್ತಾಗಿ ಕನ್ನಡದಲ್ಲಿ ಆಧುನಿಕ ವಿಜ್ಞಾನ ವಾಙ್ಮಯದ ಭಾಷಾಂತರ ಮೈದಳೆಯಬೇಕಾಗಿದೆ; ಇಲ್ಲಿ ನಾವು ತುಂಬ ಬಿಗಿ ಯಾ ಜಿಗುಟಾದರೆ ತಪ್ಪು ಹುಡುಕಲು ಕೂಡ ಭಾಷಾಂತರ ಸಾಹಿತ್ಯ ದೊರೆಯಲಾರದು; ಆದ್ದರಿಂದ ಅಲ್ಪಸ್ವಲ್ಪ ರಿಯಾಯಿತಿಯಿಂದ ಸಾಧಾರಣ ದರ್ಜೆಯವನ್ನು ಮಂಜೂರು ಮಾಡಿ ಕ್ರಮೇಣ ಪರಿಪೂರ್ಣತೆಯತ್ತ ಸಾಗುವುದು ಸಾಧು ಅಲ್ಲವೇ?

ಈ ಪ್ರಶ್ನೆಗೆ ನನ್ನ ಉತ್ತರವಿದು. ಇವೆಲ್ಲ ಸಂದೇಹಾತಂಕಗಳೂ ಅತೀತಶೈಕ್ಷಣಿಕವಾದವು (extra-academic), ನಾನು ಚರ್ಚೆಗೆ ಆಯ್ದುಕೊಂಡಿರುವ ವಿಷಯದ ಪರಿಧಿಯೊಳಗೆ ಬರದವು. ಆದರೂ ಒಂದು ಎಚ್ಚರಿಕೆಯ ಮಾತು ಹೇಳಬಯಸುತ್ತೇನೆ. ಐತಿಹಾಸಿಕ ಕಾರಣಗಳಿಂದ ಕನ್ನಡ ಈ ತನಕ ಆಧುನಿಕ ವಿಜ್ಞಾನದ ಮಾಧ್ಯಮವಾಗಿ ಪಳಗಿರುವುದಿಲ್ಲ. ಸಮರ್ಥರ ಶಾಸ್ತ್ರೀಯ ಕೃಷಿಯಿಂದ ಕ್ರಮೇಣ ಈ ಪಳಗುವಿಕೆ ಸಾಧಿತವಾಗಬೇಕೇ ವಿನಾ ಬೇರೆ ಯಾವುದೇ ಒಳ ಯಾ ದಿಢೀರ್ ಕ್ರಮಗಳಿಂದ ಅಲ್ಲ. ಇದನ್ನು ಗಂಭೀರವಾಗಿ ಗಮನಿಸಿ ಅರಿತು ವೈಜ್ಞಾನಿಕವಾಗಿ ಕಾರ್ಯೋದ್ಯುಕ್ತರಾದೆವೊ ಕನ್ನಡ ಖಂಡಿತ ಸರ್ವಾಂಗ ಸುಂದರವಾಗಿ ಮೈತುಂಬಿ ವಿಕಸಿಸುತ್ತದೆ. ಹಾಗಲ್ಲದೆ ಭಾವುಕತೆ ರಾಗ ಭಾವಗಳಿಗೆ ಮತ್ತು

ಇತರ ಅತೀತಶೈಕ್ಷಣಿಕ ಕಾರಣಗಳಿಗೆ ಪಕ್ಕಾಗಿ ಸಾಕಷ್ಟು ಹಣವನ್ನೂ ಪ್ರಕಟಣ ವ್ಯವಸ್ಥೆಯನ್ನೂ ಒದಗಿಸಿ "ಭಾಷಾಂತರಗಳು ಮೈದಳೆಯಲಿ" ಎಂಬುದಾಗಿ ಸುಗ್ರೀವಾಜ್ಞೆ ಹೊರಡಿಸಿದೆವೊ "ವೆಚ್ಚಕ್ಕೆ ಹೊನ್ನುಂಟು, ಅಚ್ಚುಸಾಲೆಗಳುಂಟು—ಕಚ್ಚಡವ ಪೇರಿಡಲು ಪತ್ತಾಯ ಹಿರಿದುಂಟು!" ಎಂಬುದಂತೂ ತಿಳಿದದ್ದೇ. ವೈಜ್ಞಾನಿಕ ವಿಧಾನ ಸ್ವತಃ ವಿಜ್ಞಾನಕ್ಕಿಂತಲೂ ವಿಜ್ಞಾನ ವಾಙ್ಮಯ ಭಾಷಾಂತರಕ್ಕೆ ಅತ್ಯಗತ್ಯ, ಅನಿವಾರ್ಯ ಕೂಡ. ಸಾವಿರ ವಿಕೃತಿಗಳಿಂದ ಎಂದೂ ಯಾವ ಸತ್ಕೃತಿಯೂ ರೂಪುಗೊಳ್ಳದು; ವಿಕೃತಿಗಳು ಉತ್ಪಾದಿಸುವ ವಿಪುಲ ಮಲಿನ ರಕ್ತ, ಸತ್ಕೃತಿಗಳು ಉತ್ಪಾದಿಸುವ ಅಲ್ಪ ಶುದ್ಧ ರಕ್ತವನ್ನು ಕೆಡಿಸುವುದು ಇಲ್ಲವೇ ಹೊರತಳ್ಳಿಬಿಡುವುದು ನಿಸರ್ಗನಿಯಮ. ಸತ್ಕೃತಿಯ ಅವತಾರ ಆಗಬೇಕಾದರೆ ಮೊದಲಾಗಿ ಭಾಷಾಂತರಕಾರರು ತಪಸ್ಸು ಎಸಗಿ ಅರ್ಹತೆಯನ್ನು ಗಳಿಸಿಕೊಳ್ಳಬೇಕು. ಎರಡನೆಯದಾಗಿ ಅವರು ಕಠಿಣ ಪರಿಶ್ರಮ ವಹಿಸಿ ಶ್ರದ್ಧಾಪೂರ್ವಕವಾಗಿ ಭಾಷಾಂತರವೆಂಬ ಪವಿತ್ರ ಕಾರ್ಯ ನಿರ್ವಹಿಸಬೇಕು. ಹೀಗೆ ಮಾಡಿದಾಗ ಮಾತ್ರ ಭಾಷಾಂತರಕಾರ ಮೂಲ ಲೇಖಕನ ವಿಶ್ವಾಸ ಉಳಿಸಿಕೊಳ್ಳುತ್ತಾನೆ, ಒಂದಿಗೆ ಉದ್ದಿಷ್ಟ ಓದುಗನ ಕೃತಜ್ಞತೆಗೆ ಪಾತ್ರನಾಗುತ್ತಾನೆ.

**ನಾಗವಲ್ಲಿ**, ಶ್ರೀ ನಾಗೇಗೌಡ ಗೌರವ ಗ್ರಂಥದಿಂದ ಉದ್ಧೃತ (೧೯೭೯)<br>
ಸಂಪಾದಕರು: ಡಾ. ಜೀ. ಶಂ. ಪರಮಶಿವಯ್ಯ<br>
ಹ. ಕ. ರಾಜೇಗೌಡ<br>
ಪ್ರಧಾನ್ ಗುರುದತ್ತ

# ವಿಜ್ಞಾನದ ವಿದ್ಯಾರ್ಥಿ ದೃಷ್ಟಿಯಲ್ಲಿ ಸ್ವಾಮಿ ವಿವೇಕಾನಂದರು

ಸ್ವಾಮಿ ವಿವೇಕಾನಂದರು (೧೮೬೩-೧೯೦೨) ತಮ್ಮ ಮಾತು ಮತ್ತು ಕೃತಿಗಳಿಂದ ನಾವೆಲ್ಲರೂ ಅನುಷ್ಠಾನಕ್ಕೆ ತರಬಹುದಾದ ಒಂದು ಆದರ್ಶವನ್ನು ನಮ್ಮೆದುರು ಕಡೆದಿಟ್ಟಿದ್ದಾರೆ. ಇದು ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ, ಮತ್ತು ಪ್ರೇಮಶೀಲತೆಗಳ ಮಧುರ ರಸಪಾಕ. ಎಂದೇ ಇವರು ವಿಚಾರವಂತನಿಗೆ ಅನುಸರಣೀಯ ನಿದರ್ಶನಗಳ ಅಕ್ಷಯ ಭಂಡಾರ, ವಿಜ್ಞಾನಿಗೆ ವೈಜ್ಞಾನಿಕ ಮನೋಧರ್ಮದ ಹರಿಕಾರ, ನೀತಿವಂತನಿಗೆ ಜೀವನ ಮೌಲ್ಯಗಳ ಸಮೃದ್ಧ ಆಕರ, ಮತ್ತು ಭಕ್ತನಿಗೆ ಭಗವದಾರಾಧನೆಯ ಸಾಕಾರ. ಇಲ್ಲಿ 'ಭಗವಂತ' ಎನ್ನುವುದು ಸಕಲ ಶಕ್ತಿಗಳ ಮೂಲವಾಗಿರುವ ನಿಸರ್ಗವನ್ನು ಪ್ರತೀಕಿಸುತ್ತದೆ. ಮಾನವಸೃಷ್ಟಿಯಾಗಿರುವ ಯಾವುದೇ ಶಕ್ತಿಯನ್ನಲ್ಲ.

ಲೌಕಿಕ ಅಥವಾ ಸಾಧಾರಣ ನೆಲೆಯಲ್ಲಿ ನಾವು ವೈಚಾರಿಕತೆ ಮುಂತಾದ ವಿಭಿನ್ನ ಮನಃಸ್ಥಿತಿಗಳನ್ನು ಉಲ್ಲೇಖಿಸುವುದುಂಟು. ಈ ವಿಭೇದೀಕರಣ ನಮ್ಮ ಸೀಮಿತ ಸಾಮರ್ಥ್ಯದ ದ್ಯೋತಕವೇ ವಿನಾ ವಸ್ತುಸ್ಥಿತಿಯ ಯಥಾ ಲಕ್ಷಣವಲ್ಲ ಎಂಬುದನ್ನು ಸ್ವಾಮೀಜಿಯವರು ತಮ್ಮ ನಡೆ ನುಡಿ ಬಗೆಗಳಿಂದ ತೋರಿಸಿಕೊಟ್ಟಿದ್ದಾರೆ. ಎಂದೇ ಅವರ ಸಮಗ್ರ ಕೃತಿಗಳು ಒಬ್ಬ ಮಾನವಿಕ ವಿದ್ಯಾರ್ಥಿಗೆ ಎಷ್ಟೋ ಅಷ್ಟೇ ಒಬ್ಬ ವಿಜ್ಞಾನ ವಿದ್ಯಾರ್ಥಿಗೂ ಉದ್ಬೋಧಕಗಳಾಗಿವೆ. ಇರುವುದೊಂದೇ ಬೆಟ್ಟ—ಜ್ಞಾನಗಿರಿ; ಅದರ ಶೃಂಗಕಿವೆ ಪಥಗಳು ಹಲವು !

ನಮ್ಮ ಶೃಂಗಾಭಿಯಾನ ಸುಗಮವಾಗುವ ಸಲುವಾಗಿ ಈಗ ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ, ಪ್ರೇಮಶೀಲತೆ ಎಂಬ ಚತುರ್ಗುಣಗಳ ಅರ್ಥವ್ಯಾಪ್ತಿಯನ್ನು ಗಮನಿಸೋಣ.

**ವೈಚಾರಿಕತೆ (rationalism)**

ಸೃಷ್ಟಿಯಲ್ಲಿ ಘಟಿಸುವ ಪ್ರತಿಯೊಂದು 'ಕಾರ್ಯ'ದ ಹಿನ್ನೆಲೆಯಲ್ಲಿ ಒಂದು 'ಕಾರಣ' ಇದೆ, ಮತ್ತು ಪ್ರತಿಯೊಂದು 'ಕಾರಣ'ದ ಫಲವಾಗಿ ಒಂದು 'ಕಾರ್ಯ'ವಿದೆ ಎಂಬ ಕಾರ್ಯ-ಕಾರಣ ಸಂಬಂಧದ ಅರಿವಿಗೆ ವೈಚಾರಿಕತೆ ಎಂದು ಹೆಸರು. ಮಾನವನ ಸಮಸ್ತ ಕ್ರಿಯಾಕಲಾಪಗಳನ್ನೂ ಕಾರ್ಯ-ಕಾರಣ ಪಾತಳಿಯಲ್ಲಿ ಅರ್ಥವಿಸುವುದು ಸಾಧ್ಯವಿದೆ ಎಂಬುದು ವೈಚಾರಿಕತೆಯ ನಿಲವು. ಸದ್ಯ ಯಾವುದೇ ಗೋಚರ ಕಾರ್ಯದ ಹಿನ್ನೆಲೆ-ಕಾರಣ ನಮ್ಮ ಅರಿವಿಗೆ ಬಂದಿರದಿದ್ದರೆ, ಅಂತೆಯೇ ಯಾವುದೇ ಕಾರಣಫಲವಾದ ಕಾರ್ಯವನ್ನು ನಮಗೆ ಪತ್ತೆ ಮಾಡಲಾಗದಿದ್ದರೆ, ಆಯಾ ಕಾರಣದ ಅಥವಾ ಕಾರ್ಯದ ಶೋಧನೆಗೆ ಯುಕ್ತ ಪ್ರಯತ್ನವನ್ನು ಪ್ರಯುಕ್ತಿಸಬೇಕೇ ಹೊರತು, ಮೊದಲನೆಯದನ್ನು ಕಾರಣರಹಿತ ಕಾರ್ಯವೆಂದೂ ಎರಡನೆಯದನ್ನು ಕಾರ್ಯರಹಿತ ಕಾರಣವೆಂದೂ ತೀರ್ಮಾನಿಸುವುದು ಸಲ್ಲ ಎಂದು ವೈಚಾರಿಕತೆಗೆ ಗೊತ್ತಿದೆ. ತರ್ಕ ವಿಧಿಸುವ ಮಾರ್ಗವೇ ವೈಚಾರಿಕತೆ.

**ವೈಜ್ಞಾನಿಕತೆ (scientism)**

ಮಾನವಮತಿ ನಿಸರ್ಗದ ಜೊತೆ ಕಾರ್ಯ-ಕಾರಣ ಪಾತಳಿಯಲ್ಲಿ, ಅಂದರೆ ವೈಚಾರಿಕವಾಗಿ, ವರ್ತಿಸುವಾಗ ಆರು ವಿವಿಕ್ತ ಸೋಪಾನಗಳು ಏರ್ಪಡುತ್ತವೆ: ಸಮಸ್ಯಾನಿರೂಪಣೆ,

ಮಾಹಿತಿ ಸಂಗ್ರಹಣೆ, ವಿಶ್ಲೇಷಣೆ, ವಾದರೂಪಣೆ, ಪ್ರಾಯೋಗಿಕ ತಪಾಸಣೆ, ಮತ್ತು ಸಿದ್ಧಾಂತ ಮಂಡನೆ. ಈ ವಿವಿಧ ಹಂತಗಳಲ್ಲಿ ತರ್ಕದಷ್ಟೇ ಪ್ರಧಾನ ಪಾತ್ರವನ್ನು ಪ್ರಯೋಗವೂ ವಹಿಸುತ್ತದೆ. ತರ್ಕ ಎಷ್ಟೇ ಸಮಂಜಸವಾಗಿದ್ದರೂ ಪ್ರಯೋಗದಲ್ಲಿ ವಾದ ಉತ್ತೀರ್ಣವಾಗದಿದ್ದರೆ ಇದರ ನೆಲೆ ಕಸದ ಬುಟ್ಟಿ! ಬೇರೆಯೇ ವಾದವನ್ನು ರೂಪಿಸಿ ಮತ್ತೆ ಇದನ್ನು ತರ್ಕದ ನಿಕಷಕ್ಕೆ ಒರೆ ಹಚ್ಚಬೇಕಾಗುತ್ತದೆ. ಹೀಗೆ ಪ್ರಾಯೋಗಿಕ ಪರೀಕ್ಷೆಯಲ್ಲಿ ಅಂತಿಮವಾಗಿ ತೇರ್ಗಡೆಯಾಗುವ ವಾದಕ್ಕೆ ಸಿದ್ಧಾಂತವೆಂದು ಹೆಸರು: ಮಾನವನ ಎದುರು ನಿಸರ್ಗ ಒಡ್ಡುವ ವಿಶಿಷ್ಟ ಸಮಸ್ಯೆಗೆ ಈ ಸಿದ್ಧಾಂತ ನಿರ್ದಿಷ್ಟ ಪರಿಹಾರ. ಈ ತೆರನಾಗಿ ಮುನ್ನಡೆಯುವಾಗ ಸಂಚಿತವಾಗುವ ಅರಿವಿಗೆ ವಿಜ್ಞಾನ ಎಂದು ಹೆಸರು. ನೈಸರ್ಗಿಕ ವಿದ್ಯಮಾನಗಳಿಗೆ ಮಾನವಮತಿ ವೀಕ್ಷಣೆ-ತರ್ಕ-ಪ್ರಯೋಗಾಧಾರಿತವಾಗಿ ಬರೆಯುವ ಭಾಷ್ಯವಿದು. ವಿಜ್ಞಾನಕಾರ್ಯದಲ್ಲಿ ವ್ಯಕ್ತಿ ಮಗ್ನನಾಗಿರುವಾಗ ಆತನ ಮನಸ್ಸು ತಳೆಯುವ ಸ್ಥಿತಿಗೆ ವೈಜ್ಞಾನಿಕ ಮನೋಧರ್ಮ (scientific temper), ಅಥವಾ ಸಂಕ್ಷೇಪವಾಗಿ, ವೈಜ್ಞಾನಿಕತೆ ಎನ್ನುತ್ತೇವೆ. ವೈಚಾರಿಕತೆ ವಿಧಿಸುವ ಪ್ರಾಯೋಗಿಕ ಮಾರ್ಗವೇ ವೈಜ್ಞಾನಿಕತೆ.

**ನೈತಿಕತೆ (ethics)**

ಮನುಷ್ಯ ಸಮಾಜಜೀವಿ. ವ್ಯಕ್ತಿಗಳ ನಡುವಿನ ನಿರಂತರ ಅಂತರಕ್ರಿಯೆಗಳ ಜೇನುಗೂಡೇ ಸಮಾಜ. ಇಲ್ಲಿ ವ್ಯಕ್ತಿ (ವ್ಯಷ್ಟಿ) ಸಮಾಜದ (ಸಮಷ್ಟಿ) ಸಮಗ್ರತೆಯನ್ನೂ ಸಮಾಜ ವ್ಯಕ್ತಿಯ ಹಿತವನ್ನೂ ಸದಾ ಪೋಷಿಸುತ್ತಿರಬೇಕು. ಸುಖೀ ಜೀವನದ ಪ್ರಮುಖ ಆವಶ್ಯಕತೆ ವ್ಯಷ್ಟಿ-ಸಮಷ್ಟಿ ಪರಸ್ಪರ ಅವಲಂಬನೆ. ಈ ಭಾವವನ್ನು ವ್ಯಕ್ತಿಯಲ್ಲಿ ಪ್ರೇರಿಸುವ ಮೂಲ ಬಲಕ್ಕೆ ಧರ್ಮ ಎಂದು ಹೆಸರು. ಇದೊಂದು ಅಮೂರ್ತ ಗುಣ. ಇದರ ಪ್ರಕಟಿತ ರೂಪ ನೈತಿಕತೆ. ವ್ಯಕ್ತಿಯ ನಡವಳಿಕೆಗಳಲ್ಲಿ ನೈತಿಕತೆ ಸದಾ ಮುಂಚೂಣಿಯಲ್ಲಿರಬೇಕು. ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಬರೆದಿದ್ದಾರೆ (೧೯೫೦): "ನಮ್ಮ ಕ್ರಿಯೆಗಳಲ್ಲಿ ನೈತಿಕ ಪಾರಿಶುದ್ಧ್ಯ ಕಾಪಾಡಿಕೊಳ್ಳಲು ಶ್ರಮಿಸುವುದೇ ಅತ್ಯಂತ ಪ್ರಮುಖ ಮಾನವ ಸಾಹಸ. ನಮ್ಮ ಆಂತರಿಕ ಸಮತೋಲ, ಮತ್ತು ಖುದ್ದು ನಮ್ಮ ಅಸ್ತಿತ್ವ ಕೂಡ, ಅದನ್ನು ಅವಲಂಬಿಸಿವೆ. ನಾವೆಸಗುವ ಕ್ರಿಯೆಗಳಲ್ಲಿಯ ನೈತಿಕ ಪಾರಿಶುದ್ಧ್ಯವೊಂದೇ ಜೀವನಕ್ಕೆ ಸೌಂದರ್ಯವನ್ನೂ ಗಾಂಭೀರ್ಯವನ್ನೂ ಆವಾಹಿಸಬಲ್ಲದು."

ವೈಚಾರಿಕತೆ, ವೈಜ್ಞಾನಿಕತೆಗಳಲ್ಲಿ ಬುದ್ಧಿಯ ಪಾತ್ರ ಪ್ರಧಾನ. ಇದೊಂದೇ ಆದರೆ ವೈಚಾರಿಕತೆ ನಿಷ್ಕ್ರಿಯತೆಯಾಗಿಯೂ ವೈಜ್ಞಾನಿಕತೆ ಶೋಷಕತೆಯಾಗಿಯೂ ವಿಕೃತಿಸುತ್ತವೆ. ಹೀಗಾಗದಂತೆ ಮಾಡಲು ಇವೆರಡಕ್ಕೂ ನೈತಿಕತೆಯ ವಿವೇಕ ಸಿಂಚನ ಅತ್ಯಗತ್ಯ. ಆದ್ದರಿಂದ ವೈಚಾರಿಕತೆ-ವೈಜ್ಞಾನಿಕತೆಗಳಿಗೆ ಪ್ರಸ್ತುತತೆಯನ್ನು ಆವಾಹಿಸುವ ಮತ್ತು ತನ್ಮೂಲಕ ಸಮಾಜಜೀವನವನ್ನು ಸುಖಮಯವಾಗಿಸುವ ಸ್ನೇಹನವೇ ನೈತಿಕತೆ.

**ಪ್ರೇಮ (love)**

ನೈತಿಕತೆಯ ಆಧಾರಶ್ರುತಿ ಪ್ರೇಮ—ಅಹೇತುಕ ಪ್ರೀತಿ. "ಪ್ರೇಮವಿಲ್ಲದ ಗಾನ ಕೇಳನೋ ಹರಿ," ಎನ್ನುವಲ್ಲಿ ಪುರಂದರದಾಸರು ಪ್ರೇಮ ಪದದ ವ್ಯಾಖ್ಯಾನ ಮಾಡಿದ್ದಾರೆ.

*ಪ್ರೇಮ ತ್ರಿಕೋನ* ಎನ್ನುವ ಲೇಖನದಲ್ಲಿ (*ಸ್ವಾಮಿ ವಿವೇಕಾನಂದರ ಸಮಗ್ರ ಕೃತಿಗಳು,* ಮೂರನೆಯ ಸಂಪುಟ) ಸ್ವಾಮೀಜಿಯವರು ಪ್ರೇಮ ತ್ರಿಕೋನ ಕುರಿತು ನೀಡಿರುವ ವಿವರಣೆ ಮನನೀಯವಾಗಿದೆ. ಸಾರಾಂಶವಿದು :

ಮೂರು ಕೋನಗಳು ಇಲ್ಲದೇ ತ್ರಿಕೋನಕ್ಕೆ ಹೇಗೋ ಹಾಗೆ ಮೂರು ವೈಲಕ್ಷಣ್ಯಗಳಿಲ್ಲದೇ ಪ್ರೇಮಕ್ಕೆ ಅಸ್ತಿತ್ವವಿಲ್ಲ. ಮೊದಲನೆಯ ಕೋನ ನಿರ್ಮೋಹ. ಪ್ರೇಮವೆಂಬುದು ಕೊಟ್ಟು ಪಡೆದುಕೊಳ್ಳುವ ವ್ಯಾಪಾರ ವಸ್ತುವಲ್ಲ! ಯಾರು ತಮ್ಮ ಇಚ್ಛಿತ ಕಾಮನೆಗಳು ಈಡೇರಬೇಕೆಂಬ ಬಯಕೆಯಿಂದ, ಪರಿಶುದ್ಧ ಆದರ್ಶವಾದ ಭಗವಂತನನ್ನು [=ಶಕ್ತಿ ಸಮಷ್ಟಿ ಆಗಿರುವ ವಿಶ್ವ] ಪ್ರೇಮಿಸಿ ಆರಾಧಿಸುವರೋ ಅವರ ಲಕ್ಷ್ಯ ದೇವರಲ್ಲ, ಬದಲು, ವರ ಮತ್ತು ಇದರಿಂದ ಪ್ರಾಪ್ತವಾಗುವ ಅಂತಸ್ತು. ಆದರೆ ಭಿಕ್ಷಾಟನೆ ಅಥವಾ ದೈನ್ಯ ಎಂದೂ ನೈಜ ಪ್ರೇಮದ ಭಾಷೆ ಅಲ್ಲ. ಭಗವಂತ ಪ್ರೇಮಪಾತ್ರನಾದ್ದರಿಂದ ಭಕ್ತ ಆತನನ್ನು ಪ್ರೇಮಿಸುತ್ತಾನೆ. ಇಲ್ಲಿ ಪ್ರೇಮದ ಸಲುವಾಗಿಯೇ ಪ್ರೇಮ ಕ್ರಿಯಾಶೀಲವಾಗಿರುತ್ತದೆ. ಸುಂದರ ದೃಶ್ಯವನ್ನು ವೀಕ್ಷಿಸಿದಾಗ ನಮ್ಮಲ್ಲಿ ತಂತಾನೇ ಸ್ಫುರಿಸುವ ಆನಂದದಂತೆ ಈ ಪ್ರೇಮವಿರುವುದು; ವೀಕ್ಷಕನಿಂದ ಈ ದೃಶ್ಯ ಏನೂ ಶುಲ್ಕವನ್ನು ಅಪೇಕ್ಷಿಸುವುದಿಲ್ಲ, ಹೇಗೋ ಹಾಗೆ.

ಎರಡನೆಯ ಕೋನ ನಿಶ್ಶರ್ತು. ಪರಿಶುದ್ಧ ಪ್ರೇಮಕ್ಕೆ ವೈರಿಗಳೇ ಇಲ್ಲ. ಒಬ್ಬ ಪ್ರೇಮಿಯ ಅತ್ಯುನ್ನತ ಲಕ್ಷ್ಯವಿದು. ನಾವು ಪ್ರೇಮಿಸುವ ವಸ್ತು ನಮ್ಮ ಪರಮೋನ್ನತ ಆದರ್ಶವಾಗುವ ತನಕ ನೈಜ ಪ್ರೇಮವೆಂದೂ ಮೊಳೆಯದು, ಹೊಳೆಯದು ಕೂಡ. ಪ್ರತಿಯೊಬ್ಬನಲ್ಲಿಯ ಇಂಥ ಮಹೋನ್ನತ ಆದರ್ಶಕ್ಕೆ ದೇವರು ಎಂದು ಹೆಸರು. ನಾವು ಪ್ರೇಮಿಸುವ ಮತ್ತು ಪ್ರೇಮಿಸಬಲ್ಲ ದೇವರ ಬಗೆಗಿನ ಪರಿಪೂರ್ಣ ಚಿತ್ರವನ್ನು ಸೌಂದರ್ಯ, ತಾದಾತ್ಮ್ಯ ಅಧಿಕಾರ ಮುಂತಾದ ಸಮಸ್ತ ಭಾವಗಳ ಸಂಶ್ಲೇಷಣೆ ಮಾತ್ರ ನೀಡಬಲ್ಲದು.

ಮೂರನೆಯ ಕೋನ ನಿರ್ಭಯ. ಪ್ರೇಮಕ್ಕೆ ಭಯವೆಂದರೇನೆಂದೇ ಗೊತ್ತಿಲ್ಲ. ನೇಸರು ಕತ್ತಲೆಯನ್ನು ಬಣ್ಣಿಸಬಲ್ಲನೇ? ಭಯಾಧಾರಿತ ದೇವರ ಆರಾಧಕರು ಅಭಿವೃದ್ಧಿ ಶ್ರೇಣಿಯಲ್ಲಿ ತೀರ ಕೆಳಗಿನ ಮೆಟ್ಟಿಲಿನಲ್ಲಿರುವವರು. ಭಗವಂತನಿಗೆ ಹೆದರಿ ಯಾವುದೇ ಕೆಲಸದಲ್ಲಿ ತೊಡಗುವ ಮನಃಸ್ಥಿತಿಗಿಂತ ಶ್ರೇಯಸ್ಕರವಾದದ್ದು ಆತನನ್ನು ಪ್ರೇಮಿಸುತ್ತ ಕಾರ್ಯೋದ್ಯುಕ್ತವಾಗುವ ನಿಲವು. ಹೃದಯದಲ್ಲಿ ಭಯ ಹುದುಗಿರುವತನಕ ಪ್ರೇಮ ಜಿನುಗದು. ವಿಶ್ವ ಬೇರೆ, ನಾನು ಬೇರೆ ಎಂಬ ಸ್ವಾರ್ಥಚಿಂತನೆಯೇ ಭಯದ ಮೂಲ.

ನಾನು, ನನ್ನದು, ನನಗೆ, ನನ್ನಿಂದ ಮುಂತಾದ ಯೋಚನೆಗಳನ್ನು ನಿರ್ಮೂಲಿಸಿದಾಗ ಭಯವಿಲ್ಲವಾಗುತ್ತದೆ. ಅಲ್ಲಿ ಪ್ರೇಮದ ಸೆಲೆ ಜುಳುಜುಳಿಸುತ್ತದೆ:

> ಪ್ರೇಮತ್ರಿಕೋನಕ್ಕೆ ಶೃಂಗಗಳು ಮೂರಿಹವು :
> ನಿರ್ಮೋಹ, ನಿಶ್ಶರ್ತು, ನಿರ್ಭಯಂ—ಪ್ರತಿಫಲದ
> ಕಾಮನೆಯ ತೊರೆ, ಮೈತ್ರಿಯನು ಮೆರೆ, ಸದಾ ಧೀರ
> ಧೀಮಂತನಾಗಿರಲು ಕದವ ತೆರೆ ಅತ್ರಿಸೂನು

ಒಬ್ಬ ಸಭ್ಯ ಪುರುಷನಲ್ಲಿ ಬೆಸುಗೆಗೊಂಡಿರುವ ನಾಲ್ಕು ಗುಣಗಳ—ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ, ಪ್ರೇಮಶೀಲತೆ—ಸಂಯುಕ್ತ ಫಲಕ್ಕೆ ಮಾನವೀಯತೆ (com-

passion) ಎಂದು ಹೆಸರು. ಮಾನವೀಯತೆಯಲ್ಲಿ ಉತ್ತುಂಗ ಶಿಖರ ತಲಪಿ ಜನಕೋಟಿಗೆ ಸದಾ ದಾರಿದೀಪವಾಗಿರುವವರನ್ನು ಸಂತರೆನ್ನುತ್ತೇವೆ. ಉದಾಹರಣೆಗೆ, ಬುದ್ಧ, ಏಸು, ಶಂಕರ, ಬಸವಣ್ಣ, ಸ್ವಾಮಿ ವಿವೇಕಾನಂದ, ಗಾಂಧಿ ಮೊದಲಾದ ಮಾನ್ಯರು. ಇವರೆಲ್ಲರೂ ಮೂರ್ತಿವೆತ್ತ ಶ್ರೇಷ್ಠ ಮಾನವೀಯತೆಗಳು. ಸಂತವಾಣಿ ನಿತ್ಯಸತ್ಯ ಮತ್ತು ಸದಾ ಪ್ರಸ್ತುತ. ಏಕೆಂದರೆ ಅವರು ತತ್ಕಾಲದಲ್ಲಿ ಸಾರ್ವಕಾಲಿಕತೆಯನ್ನೂ ತದ್ದೇಶದಲ್ಲಿ ಸಾರ್ವದೈಶಿಕತೆಯನ್ನೂ ಸಾಂತದಲ್ಲಿ ಅನಂತವನ್ನೂ ದರ್ಶಿಸಬಲ್ಲ ದ್ರಷ್ಟಾರರು :

ಏಕದಿಂದಲನೇಕ ಮತ್ತನೇಕದಿನೇಕ-<br>
ವೀ ಕ್ರಮವೆ ವಿಶ್ವದಂಗಾಂಗ ಸಂಬಂಧ<br>
ಲೋಕದಲಿ ಜಾತಿಯಲಿ ವ್ಯಕ್ತಿಯಲಿ ಸಂಸ್ಥೆಯಲಿ<br>
ಸಾಕಲ್ಯದರಿವಿರಲಿ ಮಂಕುತಿಮ್ಮ

ಸ್ವಾಮಿ ವಿವೇಕಾನಂದರ ಜೀವನದಲ್ಲಿ ಹೇಗೆ ಮಾನವೀಯತೆಯ ಎಲ್ಲ ಲಕ್ಷಣಗಳೂ ಪ್ರಕಟವಾಗುತ್ತವೆ ಎಂಬುದನ್ನೀಗ ಕೆಲವು ನಿದರ್ಶನಗಳ ಮೂಲಕ ಪರಿಶೀಲಿಸೋಣ.

೧. **ವೈಚಾರಿಕತೆ** : ಸಂಪುಟ ೫ರಲ್ಲಿ **ಪವಾಡಗಳು** ಎಂಬ ಅಧ್ಯಾಯವಿದೆ. ಅದರ ಸಾರಾಂಶವಿದು. ಅಮೆರಿಕದಲ್ಲಿದ್ದ (೧೮೯೪) ಸ್ವಾಮೀಜಿಯವರನ್ನು ಮಾಟ (ದುಷ್ಟ ಶಕ್ತಿಗಳ ಆವಾಹನೆಯಿಂದ ಇಷ್ಟ ಸಿದ್ಧಿಸಿಕೊಳ್ಳುವ ವಾಮತಂತ್ರ), ವಾಯುಲಘಿಮಾ (ಅವಲಂಬನರಹಿತವಾಗಿ ಗಾಳಿಯಲ್ಲಿ ತೇಲುವುದು), ಚಿರಕಾಲ ನಿಶ್ಚೇಷ್ಟತೆ (ಗುಹೆ ಹೊಕ್ಕು ಅನ್ನ ನೀರಿಲ್ಲದೇ ದೀರ್ಘಕಾಲ ನಿಶ್ಚಲಿಯಾಗಿರುವುದು) ಮುಂತಾದ ಪವಾಡಗಳ ಬಗ್ಗೆ ಪ್ರಶ್ನಿಸಲಾಯಿತು. ಅವರ ಉತ್ತರ ನೇರವಾಗಿತ್ತು, ಖಚಿತವಾಗಿತ್ತು: ಪವಾಡಗಳನ್ನು ತಾವು ನಂಬುವುದಿಲ್ಲ.

ಸ್ವಾಮೀಜಿಯವರ ವೈಚಾರಿಕ ಮನೋಧರ್ಮ ಕುರಿತಂತೆ ಈ ಮುಂದಿನ ಸೂಕ್ತಿಗಳನ್ನು ಗಮನಿಸಬೇಕು :

- ಮೂಢನಂಬಿಕೆ ಅಥವಾ ಅಂಧಶ್ರದ್ಧೆ ಮನುಷ್ಯನ ಪರಮಶತ್ರು, ಅಂಧಾಭಿಮಾನ ಇನ್ನೂ ಅಪಾಯಕಾರಿ (ಸಂಪುಟ ೧, **ಹಿಂದೂ ಧರ್ಮ** ಕುರಿತ ಲೇಖನ).
- ದೆವ್ವಗಳನ್ನು ತಾವು ನಂಬುವುದಿಲ್ಲ ಎನ್ನುವ ವ್ಯಕ್ತಿಗಳನ್ನು ನೀವು ನೋಡಿದ್ದೀರಿ. ಆದರೆ ಅದೇ ವೇಳೆ ಕಗ್ಗತ್ತಲೆಯಲ್ಲಿ ಒಂಟಿಯಾಗಿ ನಡೆಯುವಾಗ ಒಂದು ಬಗೆಯ ಭೀತಿಕಂಪನ ಆವರಿಸದ ವ್ಯಕ್ತಿಗಳು ತೀರ ಕಡಿಮೆ. ಅಂಧಶ್ರದ್ಧೆಯ ಫಲವಿದು (ಸಂಪುಟ ೨, **ಆತ್ಮನ ಸ್ವಾತಂತ್ರ್ಯ**).
- ಮತ್ಸರದ ಗೈರುಹಾಜರಿಯೇ ಅಹಿಂಸೆಯ ವಜ್ರಪರೀಕ್ಷೆ. ಆ ಕ್ಷಣದ ಉದ್ರೇಕದಲ್ಲಿ ಅಥವಾ ಯಾವುದೋ ಅಂಧಶ್ರದ್ಧೆಯ ಹಿಡಿತದಲ್ಲಿ ಅಥವಾ ಪುರೋಹಿತ ವರ್ಗದ ಒತ್ತಡದಲ್ಲಿ ಒಬ್ಬಾತ ಏನೋ ಒಂದು ಒಳ್ಳೆಯ ಕೆಲಸ ಮಾಡಬಹುದು, ಇಲ್ಲವೇ ದಾನವೀಯಬಹುದು. ಆದರೆ ಋಜು ಜನ ಮತ್ತು ಜೀವನಪ್ರೇಮಿ ಸದಾ ಮತ್ಸರ-ವಿದೂರಿ.

ಸಮಗ್ರಕೃತಿಗಳಲ್ಲಿ ಯಾದೃಚ್ಛಿಕವಾಗಿ ಯಾವುದೇ ಪುಟ ತೆರೆಯಿರಿ: ನಿಮಗೆ ಅಲ್ಲಿ ಕಾದಿದೆ ಹೊಸ ಉದಾಹರಣೆ! ಸಂಪುಟ ೪ರಲ್ಲಿ ಯಾದೃಚ್ಛಿಕವಾಗಿ ಒಂದು ಪುಟ

ಮಗುಚಿದೆ: **ಬ್ರಹ್ಮವಿದ್ಯೆ ಬಗ್ಗೆ ಕೆಲವು ಟೀಕೆಗಳು** ಲೇಖನ ಎದುರಾಯಿತು. ಈ ವಿನೂತನ ಪಾಶ್ಚಾತ್ಯ ಚಿಂತನೆ ಕುರಿತಂತೆ ಸ್ವಾಮೀಜಿಯವರ ನಿಲವು ಸ್ಪಷ್ಟ ಸಕಾರಣ ನಿರಾಕರಣೆ. ಇವರು ಬರೆದಿದ್ದಾರೆ: "ವಿಶ್ವ ಕುರಿತ ಮೂಲ ದೈವಿಕಜ್ಞಾನ ತಮಗಿದೆಯೆಂದು ಬ್ರಹ್ಮವಿದ್ಯಾವಾದಿಗಳು ಹೇಳಿಕೊಳ್ಳುತ್ತಾರೆ. ಈ ಸಂಗತಿ ತಿಳಿಯಲು ನಮಗೆ (ಹಿಂದೂಗಳಿಗೆ) ಸಂತಸವಾಗಿದೆ. ಇದನ್ನೊಂದು ಚಿರನಿಗೂಢ ರಹಸ್ಯವಾಗಿ ರಕ್ಷಿಸಿಕೊಂಡು ಬರಲು ಅವರು ಉದ್ದೇಶಿಸಿರುವರೆಂಬುದನ್ನು ಕೇಳಿ ಇನ್ನಷ್ಟು ಆನಂದವಾಗಿದೆ. ಈ ಎಲ್ಲ ಗೂಢಾದ್ಗೂಢತರ ಜ್ಞಾನವನ್ನು ಒಮ್ಮೆಗೇ ಅನಾವರಣಿಸಿ ನಮ್ಮ ಮೇಲೆ—ರಿಕ್ತ ಮರ್ತ್ಯ ಹಿಂದೂಗಳ ಮೇಲೆ—ಹರಿಯಬಿಟ್ಟರೆ ಸರ್ವನಾಶವೇ ನಮ್ಮ ಗತಿ!" ಸ್ವಾಮೀಜಿಯವರ ಸಕಾರಣ ಕಟಕಿಯನ್ನು ಗಮನಿಸಬೇಕು.

**೨. ವೈಜ್ಞಾನಿಕತೆ** : ಸ್ವಾಮಿ ವಿವೇಕಾನಂದರ ವೈಜ್ಞಾನಿಕ ಚಿಂತನೆಗೆ ಉತ್ಕೃಷ್ಟ ನಿದರ್ಶನ ಸಂಪುಟ ೮ರಲ್ಲಿದೆ. **ಸ್ವಂತ ಅದೃಷ್ಟದ ನಿರ್ಮಾಪಕ ಮಾನವ** ಎನ್ನುವ ಲೇಖನದ ಉದ್ಧೃತಾಂಶ :

ದಕ್ಷಿಣ ಭಾರತದಲ್ಲಿ ಅತಿ ಪ್ರಬಲವಾದ ಒಂದು ವಂಶವಿತ್ತು. ಬೇರೆ ಬೇರೆ ಕಾಲಗಳಲ್ಲಿ ಬಾಳಿದ ಗಣ್ಯ ವ್ಯಕ್ತಿಗಳ ಜನನ ಮುಹೂರ್ತಗಳನ್ನು ಆಧರಿಸಿ ಅವರ ಜಾತಕಗಳನ್ನು ತಯಾರಿಸುವುದು ಈ ವಂಶಜರ ವೃತ್ತಿ. ಇವನ್ನು 'ಓದಿ' ಇವರು ಆ ಜಾತಕನ ಬಗೆಗಿನ ಪ್ರಮುಖ ಸಂಗತಿಗಳನ್ನು ಮುನ್ನುಡಿದರು ಮತ್ತು ಇವುಗಳ ದಾಖಲೆಗಳನ್ನು ರಚಿಸಿದರು. ಕಾಲಾಂತರದಲ್ಲಿ ಘಟನೆಗಳು ಸಂಭವಿಸಿದಂತೆ, ಇವನ್ನು ದಾಖಲೆಗಳಲ್ಲಿಯ ವಿವರಗಳೊಂದಿಗೆ ಹೋಲಿಸಿ ನೋಡಿದರು. ಸಾವಿರ ವರ್ಷಪರ್ಯಂತ ಈ ತುಲನೆ ಮುಂದುವರಿದಾಗ, ಅಲ್ಲಿ ಹಲವಾರು ಹೊಂದಾಣಿಕೆಗಳು ಕಂಡುಬಂದುವು. ಇವನ್ನು ಸಾರ್ವತ್ರೀಕರಿಸಿ ಬೃಹತ್ಸಂಪುಟವೊಂದರಲ್ಲಿ ಕಲೆ ಹಾಕಿದರು. ಮುಂದೆ ಈ ವಂಶ ನಶಿಸಿಹೋಯಿತು. ಆದರೆ ಫಲಜ್ಯೋತಿಷಿಗಳ ದಂಡು ಮಾತ್ರ ಉಳಿಯಿತು. ಆ ಬೃಹತ್ಸಂಪುಟ ಇವರ ಸೊತ್ತು. ಫಲಜ್ಯೋತಿಷ (astrology) ಈ ತೆರನಾಗಿ ಅಸ್ತಿತ್ವಕ್ಕೆ ಬಂದಿರುವುದು ಸಾಧ್ಯ. ಹಿಂದೂಗಳನ್ನು ತೀವ್ರವಾಗಿ ಗಾಸಿಗೊಳಿಸಿರುವ ಕುರುಡುನಂಬಿಕೆಗಳ ಪೈಕಿ ಅವರು ಫಲಜ್ಯೋತಿಷದ ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಗೆ ಅತ್ಯಧಿಕ ಲಕ್ಷ್ಯ ಹರಿಸಿದುದೂ ಒಂದಾಗಿದೆ.

ನಮ್ಮ ಚಿಂತನೆಯ ಪ್ರಕಾರ ಭಾರತಕ್ಕೆ ಫಲಜ್ಯೋತಿಷ ತಂದವರು ಗ್ರೀಕರು. ಇವರು ಹಿಂದೂಗಳಿಂದ ಖಗೋಳವಿಜ್ಞಾನ ಪಡೆದು ಇದನ್ನು ತಮ್ಮ ಜೊತೆ ಒಯ್ದು ಯೂರೋಪಿಗೆ ತಲಪಿಸಿದರು. ಈ ಪರಸ್ಪರ ಪ್ರಭಾವವನ್ನು ಭಾರತದ ಪ್ರಾಚೀನ ಪವಿತ್ರ ಮಂದಿರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು: ಇವು ನಿರ್ದಿಷ್ಟ ಜ್ಯಾಮಿತೀಯ ಆಲೇಖ್ಯಾನುಸಾರ ರಚಿತವಾಗಿವೆ, ಮತ್ತು ನಕ್ಷತ್ರಗಳು ನಿರ್ದಿಷ್ಟ ಸ್ಥಾನಗಳಿಗೆ ಬಂದಾಗ ನಿರ್ದಿಷ್ಟ ವಿಧಿಗಳನ್ನು ಆಚರಿಸಲು ಬದ್ಧವಾಗಿವೆ.

ಭವಿಷ್ಯವನ್ನು ಅತ್ಯದ್ಭುತವಾಗಿ ಕಣಿನುಡಿದಿರುವ ಹಲವಾರು ಫಲಜ್ಯೋತಿಷಿಗಳನ್ನು ನೋಡಿದ್ದೇನೆ. ಆದರೆ ಅವರು ನಕ್ಷತ್ರಗಳನ್ನು ಆಧರಿಸಿ ಅಥವಾ ತತ್ಸದೃಶ ಕ್ರಿಯೆ ನಡೆಸಿ, ಈ ಯಶಸ್ಸು ಗಳಿಸಿರಬಹುದೆಂಬ ಪೊಳ್ಳನ್ನು ನಾನಂತೂ ನುಂಗಲಾರೆ. ಹಲವಾರು ಸಂದರ್ಭಗಳಲ್ಲಿ ತೀರ ಸ್ಪಷ್ಟವಾಗಿಯೇ ಅದು ಮನೋವಾಚನವಾಗಿತ್ತು. ಮುಂದೆ

ಸಂಭವಿಸಲಿರುವ ಘಟನೆಗಳನ್ನು ಕೆಲವೊಮ್ಮೆ ಪರಮಾಶ್ಚರ್ಯಕರವಾಗಿ ಮುನ್ನುಡಿದಿರುವುದೂ ಉಂಟು. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಅದು ಬರಿದೆ ಒಣಗುಲ್ಲು.

ಲಂಡನ್ನಿನಲ್ಲಿ ಒಬ್ಬ ತರುಣ ನನ್ನಲ್ಲಿಗೆ ಬಂದು "ಮುಂದಿನ ವರ್ಷ ನನ್ನ ಗತಿ ಏನಾದೀತು?" ಎಂದು ಕೇಳುತ್ತಿದ್ದ. "ಹಾಗೆಂದರೇನರ್ಥ?" ಎಂದು ಅವನನ್ನು ಪ್ರಶ್ನಿಸಿದಾಗ, "ನಾನು ಹಣ ಪೂರ್ತಿ ಕಳೆದುಕೊಂಡು ದಟ್ಟದರಿದ್ರನಾಗಿದ್ದೇನೆ," ಎಂದ.

ಅನೇಕ ಮಂದಿಗೆ ದೇವರೆಂದರೆ ಹಣವೊಂದೇ. ದುರ್ಬಲ ವ್ಯಕ್ತಿಗಳು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ತಾವು ನಿರ್ಗತಿಕರಾಗಿರುವೆವೆಂದು ತಿಳಿದಾಗ ಸಂಶಯಾಸ್ಪದ ವಿಧಾನಗಳಿಂದಾದರೂ ಹಣಮಾಡಲು ಹಿಂಜರಿಯುವುದಿಲ್ಲ. ಇಂಥವರು ಫಲಜ್ಯೋತಿಷ ಹಾಗೂ ಇದೇ ತೆರನಾದ ನಯವಂಚನೆಯ ವಿಧಾನಗಳಿಗೆ ಶರಣಾಗುತ್ತಾರೆ. ಸಂಸ್ಕೃತದಲ್ಲಿ ಒಂದು ಗಾದೆ ಇದೆ. ಹೇಡಿ ಮತ್ತು ಮುಟ್ಠಾಳ ಮಾತ್ರ 'ಇದು ನನ್ನ ವಿಧಿ' ಎಂದು ಕೊರಗುತ್ತಾರೆ; ದೃಢಮನಸ್ಕರಾದರೋ, 'ನನ್ನ ವಿಧಿಯನ್ನು ನಾನೇ ಬರೆಯುತ್ತೇನೆ,' ಎಂದು ಪಣ ತೊಡುತ್ತಾರೆ.

ಮುದುಕತನಕ್ಕೆ ಕಾಲಿಡುತ್ತಿರುವ ಬಲಹೀನರು ಮಾತ್ರ ಅದೃಷ್ಟದ ಬಗ್ಗೆ ಮಾತಾಡುತ್ತಾರೆ. ಸಾಧಾರಣವಾಗಿ ಯುವಜನರು ಎಂದೂ ಫಲಜ್ಯೋತಿಷದ ಹತ್ತಿರ ಕೂಡ ಸುಳಿಯುವುದಿಲ್ಲ. ನಾವು ಯಾವುದೋ ಗ್ರಹದ ಪ್ರಭಾವಕ್ಕೆ ಒಳಗಾಗಿರುವುದು ನಿಜವೇ 'ಇರಬಹುದು.' ಆದರೆ ಈ ಸಂಗತಿ ನಮ್ಮನ್ನೇನೂ ಬಾಧಿಸಬೇಕಾಗಿಲ್ಲ.

ಬುದ್ಧ ವಿಧಿಸಿದ್ದಾನೆ, "ವಂಚಕ ವಿಧಾನಗಳಿಂದ ಮತ್ತು ಮಿಥ್ಯಾಚಮತ್ಕಾರಗಳಿಂದ ನಕ್ಷತ್ರಗಳನ್ನು ಕುರಿತ ಗಣನೆ ಮಾಡಿ ಉದರಂಭರಣೆ ಗೈಯುವವರನ್ನು ಹತ್ತಿರ ಸೇರಿಸತಕ್ಕದ್ದಲ್ಲ." ಬುದ್ಧನಿಗೆ ತಾನೇನು ಹೇಳುತ್ತಿದ್ದೇನೆ ಎಂಬುದು ತಿಳಿದಿರಲೇಬೇಕು. ಏಕೆಂದರೆ ಹಿಂದೂಗಳಲ್ಲೆಲ್ಲ ಆತ ಪರಮಶ್ರೇಷ್ಠ.

ನಕ್ಷತ್ರಗಳು ಬರಲಿ, ನಮಗೇಕೆ ಚಿಂತೆ? ನಕ್ಷತ್ರವೊಂದು ನನ್ನ ಬದುಕನ್ನು ಕಲಕುವುದಾದರೆ ನಾನದಕ್ಕೆ ದುಗ್ಗಾಣಿ ಕಿಮ್ಮತ್ತೂ ಕೊಡಲಾರೆ. ಫಲಜ್ಯೋತಿಷ ಮತ್ತು ಇಂಥ ಎಲ್ಲ ನಿಗೂಢ ವಿಷಯಗಳು ಸಾಧಾರಣವಾಗಿ ದುರ್ಬಲ ಮನಸ್ಸಿನ ವ್ಯಾಧಿ ಚಿಹ್ನೆಗಳೆಂಬುದು ನಿಮ್ಮ ಗಮನಕ್ಕೆ ಬರದಿರದು. ಆದ್ದರಿಂದ ನಮ್ಮ ಮನಗಳಲ್ಲಿ ಇವು ವರ್ಧಿಸುತ್ತಿವೆಯೆಂಬ ಅರಿವು ಮೂಡಿದಾಗ ನಾವು ವೈದ್ಯರನ್ನು ನೋಡಬೇಕು, ಯೋಗ್ಯ ಆಹಾರ ಮತ್ತು ವಿಶ್ರಾಂತಿ ಪಡೆಯಬೇಕು.

ಯಾವುದೇ ವಿದ್ಯಮಾನ ಕುರಿತು ವಿವರಣೆ ಅದರ ಸ್ವಭಾವದ ಒಳಗಡೆಯೇ ಒದಗುವುದಾದರೆ ಬಾಹ್ಯ ಮೂಲಗಳಲ್ಲಿ ಅದನ್ನು ಅರಸುವುದು ಅವಿವೇಕ. ಜಗತ್ತು ತನ್ನನ್ನು ತಾನೇ ವಿವರಿಸುವುದಾದರೆ ಈ ವಿವರಣೆಯನ್ನು ಹೊರಗೆಲ್ಲೋ ಹುಡುಕುವುದು ಪರಮ ಮೂರ್ಖತೆ. ವ್ಯಕ್ತಿಯ ಜೀವನದಲ್ಲಿ ಘಟಿಸುವ ಯಾವುದೇ ವಿದ್ಯಮಾನವನ್ನು ಮಾನವ ಸ್ವಂತ ಸಾಮರ್ಥ್ಯದ ನೆರವಿನಿಂದ ವಿವರಿಸಲಾಗದಂಥ ದೃಷ್ಟಾಂತ ಎಲ್ಲಿಯಾದರೂ ಇದೆಯೇ? ಅಂದಮೇಲೆ ಇಲ್ಲಿಯ ವಿದ್ಯಮಾನ ಕುರಿತಂತೆ ನಕ್ಷತ್ರಗಳಲ್ಲಿಗೋ ಇನ್ನೆಲ್ಲಿಗೋ ಬುದ್ಧಿ ಹರಿಸುವುದರ ಔಚಿತ್ಯವಾದರೂ ಏನು?

ಇದೊಂದು ಹಳೆಯಕತೆ. ನಾಡಿನ ದೊರೆಯಲ್ಲಿಗೆ ಒಬ್ಬ ಫಲಜ್ಯೋತಿಷಿ ಹೋಗಿ,

"ಇನ್ನು ಆರು ತಿಂಗಳ ಒಳಗೆ ನೀನು ಸಾಯಲಿರುವೆ," ಎಂದು ಭವಿಷ್ಯ ನುಡಿದ.

ಸಹಜವಾಗಿಯೇ ಅರಸ ಭಯವಿಹ್ವಲನಾದ—ಆ ಗಳಿಗೆಯೇ ಸತ್ತುಹೋಗುವನೋ ಎಂಬಂಥ ಸ್ಥಿತಿ. ಈತನ ಬುದ್ಧಿವಂತ ಮಂತ್ರಿ, "ಫಲಜ್ಯೋತಿಷಿಗಳೆಲ್ಲರೂ ಮುಟ್ಠಾಳರು," ಎಂದು ಘೋಷಿಸಿದರೂ ರಾಜನಲ್ಲಿ ನೆಮ್ಮದಿ ಮೂಡಲಿಲ್ಲ. ಇನ್ನೇನು ಹಾದಿ ಎಂದು ಯೋಚಿಸಿದ ಆ ಸಚಿವ, ಫಲಜ್ಯೋತಿಷಿಯನ್ನು ಅರಮನೆಗೆ ಮರುಕರೆಸಿ ಪ್ರಶ್ನಿಸಿದ, "ನಿನ್ನ ಗಣನೆಗಳೆಲ್ಲವೂ ನಿಖರವಾಗಿವೆಯೇ?"

ಫಲಜ್ಯೋತಿಷಿ, "ಹೌದು, ಇಲ್ಲಿ ಯಾವ ದೋಷವೂ ನುಸುಳಿರಲು ಸಾಧ್ಯವಿಲ್ಲ."

ಆದರೂ ಮಂತ್ರಿಯ ಸಮಾಧಾನಾರ್ಥ ಅವೇ ಗಣನೆಗಳನ್ನು ಮಗುದೊಮ್ಮೆ ಮಾಡಿ, "ಗಣನೆಗಳು ಸರಿಯಾಗಿವೆ. ಭವಿಷ್ಯವಾಚನ ಕರಾರುವಾಕ್ಕಾಗಿದೆ," ಎಂದು ದೃಢೀಕರಿಸಿದ.

ಅರಸನ ಮುಖ ಬಿಳಿಚಿಕೊಂಡಿತು. ಫಲಜ್ಯೋತಿಷಿಗೆ ಮಂತ್ರಿ ಸವಾಲೆಸೆದ, "ನಿನ್ನ ಮರಣ ಎಂದು ಸಂಭವಿಸಲಿದೆ ಎಂಬುದನ್ನು ಗಣೆಸಿರುವೆಯಾ?"

"ಹೌದು, ಇನ್ನು ಹನ್ನೆರಡು ವರ್ಷಗಳಲ್ಲಿ."

ಆ ಕ್ಷಣ ಸಚಿವ ಒರೆಯಿಂದ ತನ್ನ ಕರವಾಲ ಹಿರಿದು, ಜ್ಯೋತಿಷಿಯ ತಲೆ ತರಿದು, ರಾಜನಿಗೆ ಹೇಳಿದ, "ಈ ಸುಳ್ಳನನ್ನು ನೋಡಿದೆಯಾ? ಈ ಗಳಿಗೆಯೇ ಈತ ಮಡಿದಿದ್ದಾನೆ!"

ನಿಮ್ಮ ರಾಷ್ಟ್ರ ನಳನಳಿಸಬೇಕಾದರೆ ಈ ಎಲ್ಲ ಮೌಢ್ಯಗಳಿಂದ ನೀವು ದೂರವಾಗಿರಬೇಕು. ನಮ್ಮನ್ನು ಬಲಿಷ್ಠರಾಗಿ ಮಾಡುವಂಥವು ಮಾತ್ರ ಒಳ್ಳೆಯ ವಿಷಯಗಳು. ಇವು ನಮ್ಮ ಬಲವನ್ನು ಸಂವರ್ಧಿಸುವುವೇ ಎಂಬುದು ಮಾತ್ರ ಇವನ್ನು ಕುರಿತ ಏಕೈಕ ಪರೀಕ್ಷೆ. ವಾಸ್ತವವಾಗಿ, ಒಳಿತೇ ಬದುಕು, ಕೆಡುಕೇ ಸಾವು.

ಇನ್ನೊಮ್ಮೆ ಸ್ವಾಮೀಜಿ ಹೇಳಿದರು, "ವಾಸ್ತವ ಸಂಗತಿಗಳ ಶೋಧನೆ ಭೌತಿಕವಿಜ್ಞಾನ. ಆಧಿಭೌತಿಕ ಅಥವಾ ಅಧ್ಯಾತ್ಮ ವಿಜ್ಞಾನವಾದರೋ ಪುಷ್ಪಗಳನ್ನು ಗುಚ್ಛವಾಗಿ ಬಂಧಿಸುವ ಸೂತ್ರ. ಪ್ರತಿಯೊಂದು ಅಮೂರ್ತೀಕರಣವೂ ಆಧಿಭೌತಿಕ. ಮರದ ಬೇರಿಗೆ ಗೊಬ್ಬರ ಊಡುವ ಕಾರ್ಯವೂ ಅಮೂರ್ತೀಕರಣ ಪ್ರಕ್ರಿಯೆಯನ್ನು ಒಳಗೊಂಡಿರುತ್ತದೆ." (ಸಂಪುಟ ೭)

**೩. ನೈತಿಕತೆ**: ವಿಜ್ಞಾನದ ಪರಿಭಾಷೆಯಲ್ಲಿ ಭೌತ ಬಲಗಳ ಸ್ವರಮೇಳವೇ ವಿಶ್ವ—ಒಂದು ಶ್ರುತಿ, ಅಸಂಖ್ಯ ಸ್ವರಗಳು. ಸ್ವಾಮಿ ವಿವೇಕಾನಂದರು **ದಿವ್ಯಮಾತೆಯ ಆರಾಧನೆ** (ಸಂಪುಟ ೮) ಎಂಬ ಲೇಖನದಲ್ಲಿ ಈ ಭೌತ ಚಿಂತನೆಯ ಆಧ್ಯಾತ್ಮಿಕ ಮುಖವನ್ನು ಪ್ರಸ್ತಾವಿಸುತ್ತಾರೆ : ವಿಶ್ವದ ಸಮಸ್ತ ವಿದ್ಯಮಾನಗಳೂ ಏಕಶಕ್ತಿಯ ವಿವಿಧ ಲಾಸ್ಯಗಳು (ಈ ಶಕ್ತಿಯನ್ನು ಅವರು ಅಮೂರ್ತ ಗುಣವಾದ ಮಾತೃಶಕ್ತಿಯೆಂದು ಪ್ರತೀಕಿಸುತ್ತಾರೆ; ಸಾಮಾನ್ಯವಾಗಿ ದೇವರು ಎನ್ನುವ ಪರಿಕಲ್ಪನೆ ಮಾನವಚಿಂತನೆಯ ಮೂರ್ತ ಪರಿಮಿತಿಯಿಂದ ಕುಂಠಿತವಾಗುತ್ತದೆ; ಉದಾಹರಣೆಗೆ, ಅತಿಮಾನುಷ ಸಾಮರ್ಥ್ಯವಿರುವ ಭಗವಂತ. ಶಕ್ತಿ ಪರಿಕಲ್ಪನೆಯಲ್ಲಿ ಈ ಮಾನವಸಹಜ ಪರಿಮಿತಿ ಇಲ್ಲ). ಭಗವದ್ಗೀತೆಯಲ್ಲಿ, "ನಾನು ವಾಸ್ತವ, ನಾನು ಅವಾಸ್ತವ. ನಾನು ಒಳ್ಳೆಯದನ್ನು ತರುತ್ತೇನೆ, ನಾನು ಕೆಟ್ಟದ್ದನ್ನು ತರುತ್ತೇನೆ," ಎನ್ನುವಲ್ಲಿ ಈ ಏಕಶಕ್ತಿ ಪರಿಕಲ್ಪನೆ ನಿಹಿತವಾಗಿದೆ. ಆದರೆ ಇದು ಮುಂದೆ ಪ್ರವರ್ಧಿಸಲಿಲ್ಲ, ಬದಲು, "ಈ ವಿಶ್ವ ಒಳ್ಳೆಯದರ ಮತ್ತು ಕೆಟ್ಟದರ ಒಂದು ಸಂಕೀರ್ಣ ವಾಸ್ತವತೆ. ಒಂದೇ

ಶಕ್ತಿ ಇವೆರಡೂ ಆಗಿ ಮೈದಳೆಯುತ್ತದೆ." ಎನ್ನುವ ದ್ವೈತತತ್ವದ ಚಿಂತನೆ ಅಭಿವರ್ಧಿಸಿತು. ಇಂಥ ಒಂದು ಪರಿಕಲ್ಪನೆಯ ಮೇಲೆ ರಚಿಸಿದ ನೈತಿಕತೆಯಲ್ಲಿ ಪಾಪಿಯನ್ನು ಪುಣ್ಯವಂತ ದ್ವೇಷಿಸುವುದನ್ನೂ ಪುಣ್ಯವಂತನ ಎದುರು ಪಾಪಿ ಹೋರಾಡುವುದನ್ನೂ ಕಾಣುತ್ತೇವೆ. ಏಕಶಕ್ತಿಯನ್ನು ಆಧರಿಸಿ ಕಟ್ಟಿದ ನೈತಿಕತೆ ಮಾತ್ರ ನಮಗೆ ಚಿತ್ತಸ್ವಾಸ್ಥ್ಯ ನೀಡಬಲ್ಲದು.

ವಿಜ್ಞಾನಿ ಸಂತರಾಗಿದ್ದ ಐನ್‌ಸ್ಟೈನರ ಚಿಂತನೆಯನ್ನು ಗಮನಿಸಬೇಕು. ೧೯೩೫ರಲ್ಲಿ ಇವರು ತಮ್ಮ ತಂಗಿಗೆ ಬರೆದ ಪತ್ರದಲ್ಲಿ ನೈತಿಕತೆಯ ಅಗತ್ಯವನ್ನು ಒತ್ತಿಹೇಳಿದ್ದಾರೆ: "ವರ್ತಮಾನ ಕಾಲದ ಭಾರೀ ರಾಜಕೀಯ ಕೋಲಾಹಲಗಳು ಎದೆ ಒಡೆಯುವಂತಿವೆ. ಇವುಗಳ ನಡುವೆ ನಮ್ಮ ತಲೆಮಾರಿನ ಒಬ್ಬಾತನಿಗೆ ತಾನು ಪೂರ್ತಿ ಒಂಟಿಗನಾಗಿರುವೆ ನೆಂಬ ಭಾವ ಮೂಡುವುದು ಸಹಜ. ಜನರು ನ್ಯಾಯ ಮತ್ತು ಘನತೆ ಬಗೆಗಿನ ಗಾಢ ಅನುರಕ್ತಿಯನ್ನು ಕಳೆದುಕೊಂಡಿರುವರೋ, ನಮ್ಮದಕ್ಕಿಂತ ಮೇಲುಮಟ್ಟದ ತಲೆಮಾರಿನ ವರು ಅಸಾಧಾರಣ ತ್ಯಾಗ ತಪಸ್ಸುಗಳಿಂದ ಗಳಿಸಿದ ಮೌಲ್ಯಗಳನ್ನು ಕಡೆಗಣಿಸಿರುವರೋ ಎಂಬಂತೆ ತೋರುತ್ತಿದೆ.... ನಿಜಕ್ಕೂ ಮಾನವೀಯ ಮೌಲ್ಯವೆಲ್ಲವುಗಳ ಅಡಿಪಾಯ ವಾದರೂ ಏನು? ನೈತಿಕತೆ."

ನೈತಿಕತೆಯ ಮಹತ್ತ್ವವನ್ನು ಅಧ್ಯಾತ್ಮದ ಮಾರ್ಗವಾಗಿ ಸ್ವಾಮಿ ವಿವೇಕಾನಂದರೂ ವಿಜ್ಞಾನದ ಮಾರ್ಗವಾಗಿ ಐನ್‌ಸ್ಟೈನರೂ ಗುರುತಿಸಿರುವ ಪರಿಯಲ್ಲಿ ಎದ್ದು ಕಾಣುವ ಸಾದೃಶ್ಯ, ಸ್ವಾಮೀಜಿಯವರೇ ಬೇರೆ ಒಂದು ಸಂದರ್ಭದಲ್ಲಿ ಉದ್ಗರಿಸಿದ ಸೂಕ್ತಿಗೆ ಒಂದು ಉಜ್ಜ್ವಲ ನಿದರ್ಶನ: ಅಧ್ಯಾತ್ಮಮಾರ್ಗವೂ ವಿಜ್ಞಾನಮಾರ್ಗವೂ ಅದೇ ಋತವನ್ನು ಅರ್ಥವಿಸಲು ಪ್ರಯತ್ನಿಸುತ್ತಿರುವ ಎರಡು ಬಗೆಗಳು ಮಾತ್ರ. (ನೋಡಿ ಪುಟ ೭೯ ಡಿವಿಜಿ ದರ್ಶನ)

**೪. ಕಾರಣ, ವಿಶ್ವಾಸ ಮತ್ತು ಪ್ರೇಮ** ಎಂಬ ಕವನದಲ್ಲಿ (ಸಂಪುಟ ೫) ಸ್ವಾಮೀಜಿ ಯವರು ಕಾರಣ-ಭರವಸೆ-ಪ್ರೇಮ ಸಂಬಂಧವನ್ನು ಸೂತ್ರರೂಪದಲ್ಲಿ ವಿವರಿಸಿದ್ದಾರೆ :

ಕಾರಣಕ್ಕೆ ಅದರದೇ ಪರಿಮಿತಿಗಳಿವೆ, ತಳವಿದೆ, ವಿಕೃತಿಯೂ ಇದೆ. ಅದನ್ನು ಸುತ್ತುವರಿದಿರುವ ಭಿತ್ತಿಗಳು ಅಜ್ಞೇಯತಾವಾದ, ನಿರೀಶ್ವರವಾದ. ಹಾಗೆಂದು ಅಲ್ಲಿಗೇ ನಿಲ್ಲತಕ್ಕದ್ದಲ್ಲ. ಅತೀತವಾದದ್ದು ಪ್ರತಿಕ್ಷಣವೂ ನಮ್ಮನ್ನು ಪ್ರಭಾವಿಸುತ್ತಿದೆ, ಆಕಾಶ ಮತ್ತು ತಾರೆಗಳು ನಮ್ಮ ಮೇಲೆ ವರ್ತಿಸುತ್ತಿವೆ, ಕಾಣದಿರುವವು ಕೂಡ. ಎಂದೇ ಅದನ್ನು ಉತ್ಕ್ರಮಿಸಲೇಬೇಕು. ಕಾರಣವೊಂದೇ ಇದನ್ನು ಸಾಧಿಸ ಲಾರದು: ಸಾಂತದಿಂದ ಅನಂತವನ್ನು ಹಿಡಿದಿಡಲಾಗದು.

ಭರವಸೆ ಒಂಟಿಯಾಗಿರುವಾಗ ವಿಕೃತಿಸುತ್ತದೆ : ಅಂಧಾಭಿಮಾನ, ಮತಾಂಧತೆ, ಪಂಥಮೌಢ್ಯ. ಎಂದೇ ಸಾಂತವನ್ನು ಸಂಕೋಚಿಸಿ ಅನಂತವನ್ನೈದಲಾರೆವು. ಕೆಲವೇಳೆ ತೀವ್ರತೆ ಅಧಿಕವಾಗಬಹುದು, ಆದರೆ ವಿಸ್ತಾರ ಕುಂಠಿತವಾಗುತ್ತದೆ, ಮತ್ತು ಅಂಧಾಭಿಮಾನಿಗಳು ಹಾಗೂ ಮತಾಂಧರು ಸ್ವಂತ ಹಮ್ಮು ಬಿಮ್ಮುಗಳ ದಾಸರಾಗುತ್ತಾರೆ. ಬೇರೇನೂ ಹಾದಿಯಿಲ್ಲವೇ ? ಇದೆ—ಪ್ರೇಮ. ಇದೆಂದೂ ವಿಕೃತವಾಗದು, ಇದು ಶಾಂತ, ಮೃದುಕಾರಿ ಮತ್ತು ಸದಾ ವಿಸ್ತರಣಶೀಲ. ಇದರ ಅಧಿವ್ಯಾಪನೆಗೆ ವಿಶ್ವವೇ ಬಲು ಚಿಕ್ಕದು.

ನಾವಿದನ್ನು ವ್ಯಾಖ್ಯಾನಿಸಲಾರೆವು. ಇದರ ಅಭಿವರ್ಧನೆ ಗಮನಿಸಿ ಮಾತ್ರ ಇದನ್ನು ಗುರುತಿಸಿ ಇದರ ಪರಿವೇಷವನ್ನು ವಿವರಿಸಬಲ್ಲೆವು.

ಪ್ರಥಮತಃ, ಬಾಹ್ಯ ಪ್ರಪಂಚಕ್ಕೆ ಗುರುತ್ವಾಕರ್ಷಣೆಯ ತೆರದಲ್ಲಿ ಪ್ರೇಮ ಸಂಯೋಜಕ ಪ್ರವೃತ್ತಿಯದು. ರೂಪ, ವಿಧಿ, ನಿಯಮಗಳು ಇದರ ಮೃತ್ಯು : ರೂಪ, ವಿಧಾನ, ವಿಧಿ ನಿಷೇಧಗಳ ಮೂಲಕ ಆರಾಧನೆ ಆಗುವಲ್ಲಿ ಪ್ರೇಮವಿರದು. ಪ್ರೇಮ ಸೂಸಿದಾಗ ವಿಧಾನ ಮಡಿಯುತ್ತದೆ. ಮಾನವಜೀವ ತನ್ನ ಪೂರಕವನ್ನೂ ಸ್ಥಿರ ಸಮತೋಲವನ್ನೂ ತನ್ನ ಅನಂತ ವಿಶ್ರಾಂತಿಯನ್ನೂ ಅನ್ವೇಷಿಸಲು ಪ್ರಯುಕ್ತಿಸುವ ಹೋರಾಟವೇ ಪ್ರೇಮ.

ಗಂಧವನ್ನು ತೇದರೂ ಹೆರೆದರೂ ಕೊಯ್ದರೂ ಸುಟ್ಟರೂ ಅಥವಾ ಹಾಗೆಯೇ ಇಟ್ಟರೂ ಅದರ ಗುಣ ಒಂದೇ—ಪರಿಮಳ ಬೀರುವುದು. ಅಂದರೆ ವೈಚಾರಿಕತೆ, ವೈಜ್ಞಾನಿಕತೆ, ನೈತಿಕತೆ ಮತ್ತು ಪ್ರೇಮ ಇವುಗಳ ಸಂಯುಕ್ತ ಫಲ ಮಾನವೀಯತೆ ಎಂಬ ಶ್ರೀಗಂಧ. ಸ್ವಾಮಿ ವಿವೇಕಾನಂದರ ಕೃತಿಗಳಲ್ಲಿ ಯಾವ ಪುಟವನ್ನು ತೆರೆದು ನೋಡಿದರೂ ಅಲ್ಲಿ ತೊಟ್ಟಿಕ್ಕುವ ಒರತೆ ಮಾನವೀಯತೆ. ಪರೀಕ್ಷಾರ್ಥ ನಾನು ಯಾದೃಚ್ಛಿಕವಾಗಿ ಸಂಪುಟ ೨ರ ಪುಟ ಮಗುಚಿದೆ: **ನೈಜ ಹಾಗೂ ತೋರಿಕೆಯ ಮಾನವ** ಲೇಖನ ಕಂಡಿತು. ಅದರಲ್ಲಿರುವ ಈ ವಾಕ್ಯಗಳನ್ನು ಗಮನಿಸಿ : "ಈ ಪ್ರಪಂಚದಲ್ಲಿ ಬಾಳುತ್ತಿರುವ ಸ್ತ್ರೀ ಪುರುಷರ ಪೈಕಿ ದಶಲಕ್ಷನೆಯ ಒಂದು ಅಂಶ (೧÷೧೦,೦೦,೦೦೦) ಸುಮ್ಮನೆ ಕುಳಿತು ಕ್ಷಣಕಾಲ, 'ನೀವೆಲ್ಲರೂ ದೇವರ್ರೇ! ಮನುಷ್ಯರೇ, ಓ ಪ್ರಾಣಿಗಳೇ ಮತ್ತು ಜೀವಿಗಳೇ! ನೀವೆಲ್ಲರೂ ಜೀವಂತ ಏಕ ಚಿಚ್ಛಕ್ತಿಯ ಪ್ರಕಟಿತ ರೂಪಗಳು' ಎಂದು ಸಾರಿದ್ದಾದರೆ ಸಮಸ್ತ ಪ್ರಪಂಚವೂ ಅರ್ಧಗಂಟೆಯಲ್ಲೇ ಪರಿವರ್ತನೆಗೊಂಡುಬಿಡುವುದು." ಸ್ವಾಮೀಜಿಯವರ ಮಾನವೀಯತೆಗೆ ಬೇರೆ ನಿದರ್ಶನ ಬೇಕೇ?

ಇದೇ ಕೇಂದ್ರೀಯ ಪರಿಕಲ್ಪನೆ ವಿಜ್ಞಾನದ ಪರಿಭಾಷೆಯಲ್ಲಿ : "ಈ ಪ್ರಪಂಚದಲ್ಲಿ ಬಾಳುತ್ತಿರುವ ಸ್ತ್ರೀಪುರುಷರ ಪೈಕಿ ದಶಲಕ್ಷನೆಯ ಒಂದು ಭಾಗ ನಿರ್ಯೋಚನೆಯಿಂದ ಕುಳಿತು, ಹಲವು ನಿಮಿಷಗಳ ಕಾಲ, 'ನೀವೆಲ್ಲರೂ ಶಕ್ತಿ ಸ್ವರೂಪರು, ಓ ಮನುಜರೇ ಪ್ರಾಣಿಗಳೇ ಎಲ್ಲ ಜೀವಿಗಳೇ! ನೀವೆಲ್ಲರೂ ಅದೇ ಜೀವಂತ ವಿಶ್ವಶಕ್ತಿಯ ವಿಭಿನ್ನರೂಪಿಗಳು,' ಎಂದುದಾದರೆ ಸಮಸ್ತ ಪ್ರಪಂಚವೂ ಕೇವಲ ಅರ್ಧ ಗಂಟೆಯಲ್ಲಿಯೇ ಬದಲಾಗಿ ಬಿಡಬಲ್ಲದು."

ವಿಜ್ಞಾನದ ಪುರೋಗಮನದಲ್ಲಿ ಇಂಥ ವ್ಯತ್ಯಯಗಳು ಸದಾ ಸಂಭವಿಸುತ್ತಲೇ ಇರುವುವು: ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ 'ನವಗ್ರಹಗಳು' ಸ್ಥಿರ ಭೂಮಿಯ ಸುತ್ತ ನಿರಂತರ ಪರಿಭ್ರಮಣೆಯಲ್ಲಿವೆ ಎಂಬ ವಿಶ್ವಚಿತ್ರವನ್ನು ವಿಜ್ಞಾನ ಒಂದು ಕಾಲದಲ್ಲಿ ಬಿತ್ತರಿಸಿತ್ತು. ಆದರೆ ಇಂದು ? ವಿಜ್ಞಾನ ಸೀಮಾಪುರುಷರ ತಪಸ್ಸಿನ ಫಲವಾಗಿ ನಮಗೆ ತಿಳಿದಿದೆ: ಈ ಗೋಚರ ಚಿತ್ರದ ತಳದಲ್ಲಿರುವ ಶಾಶ್ವತ ಚಿತ್ರ ಬೇರೆಯೇ ಎಂದು.

ಸಮಾರೋಪವಾಗಿ ಒಂದು ಮಾತು. ಆಧುನಿಕ ಭೌತವಿಜ್ಞಾನದ ತಾರ್ಕಿಕ ಚಿಂತನೆಯ ಪ್ರಕಾರ ಸಮಸ್ತ ಭೌತವಿಶ್ವವೂ ನಾಲ್ಕು ವಿವಿಕ್ತ ಬಲಗಳ "ಗೊಂಬೆಯಾಟವಯ್ಯಾ!" ಅವು ಗುರುತ್ವಾಕರ್ಷಣಬಲ, ವಿದ್ಯುತ್ಕಾಂತಬಲ, ದುರ್ಬಲ ಬೈಜಿಕಬಲ ಮತ್ತು ಪ್ರಬಲ ಬೈಜಿಕ ಬಲ. ಮೊದಲನೆಯದು ವಿಶ್ವದ ಬೃಹದಸ್ತಿತ್ವವನ್ನು ನಿಯಂತ್ರಿಸುವ ಮತ್ತು ಜಗತ್ತುಗಳ ಹುಟ್ಟು ಸಾವುಗಳಿಗೆ ಕಾರಣವಾಗುವ "ಪ್ರೇಮ" ಬಲ. ಮೂರು ಮತ್ತು ನಾಲ್ಕನೆಯವು

ಪರಮಾಣುಗಳ ಸ್ಥಿರತೆ ಹಾಗೂ ವಿಘಟನೆಗಳಿಗೆ ಕಾರಣವಾಗುವ "ಬಂಧುಕ-ಭೇದಕ" ಬಲಗಳು. ಎರಡನೆಯದು ವಿಶ್ವ ಸರ್ವತ್ರ ಮಾಹಿತಿ ಒಯ್ಯುವ "ಪ್ರಸಾರ" ಬಲ. ಇವೆಲ್ಲವೂ ಮೂಲ ಏಕ ಬಲವೊಂದರ ವಿಭಿನ್ನ ಅಭಿವ್ಯಕ್ತಿಗಳಾಗಿರಬೇಕು. ಆ "ಎಲ್ಲ ಬಲಗಳಿಗೆ ತಾ ಮೂಲದ ಬಲ ಸಕಲ ತಪೋತರು ಪರಮಫಲ"ವನ್ನು (ಕುವೆಂಪು) ತಾವು ಅನ್ವೇಷಿಸಬೇಕೆಂಬುದು ಮುಂಚೂಣಿ ವಿಜ್ಞಾನಿಗಳ ಆಶಯ. ಈ ದಿಶೆಯಲ್ಲಿ ವಿದ್ಯುತ್ಕಾಂತ ಬಲ ಹಾಗೂ ದುರ್ಬಲ ಬೈಜಿಕಬಲಗಳ ಸೈದ್ಧಾಂತಿಕ ಸಂಯೋಜನೆ ಮತ್ತು ಪ್ರಾಯೋಗಿಕ ಸ್ಥಿರೀಕರಣ ಕೈಗೂಡಿವೆ : ಆ ಸಂಯೋಜಿತ ಬಲಕ್ಕೆ ಎಲೆಕ್ಟ್ರೊ ವೀಕ್ (ವಿದ್ಯುದ್ದುರ್ಬಲ) ಬಲವೆಂದು ಹೆಸರು. ಅಂದರೆ ಸದ್ಯ, ೨೦ಂಳನೆಯ ಇಸವಿ, ವಿಶ್ವದ ಮೂಲ ಘಟಕಗಳು ಮೂರು ವಿವಿಕ್ತ ಬಲಗಳೆಂದಾಯಿತು. ಇವನ್ನು ಏಕೀಕರಿಸಬಲ್ಲ ವಿಜ್ಞಾನಿ-ದ್ರಷ್ಟಾರನ ಆಗಮನಕ್ಕೆ ವೇದಿಕೆ ಸಿದ್ಧವಾಗಿದೆ. ಪಥಿಕ ಎಲ್ಲಿರುವನೋ ಎಂದು ಬರುವನೋ ಯಾವ ನೂತನ ದಿಶೆ ಆಯುವನೋ ಭವಿಷ್ಯವೇ ನಿರ್ಧರಿಸಬೇಕು.

ಈ ಸಂಗತಿಯನ್ನು ಇಲ್ಲಿ ಪ್ರಸ್ತಾವಿಸಿರುವುದರ ಉದ್ದೇಶವಿದು. ತತ್ತ್ವಶಾಸ್ತ್ರವನ್ನು ವಿಜ್ಞಾನಗಳ ಮಾತಾಮಹಿ ಎಂದೂ ಖಗೋಳವಿಜ್ಞಾನವನ್ನು ಮಾತೆ ಎಂದೂ ಗಣಿತವನ್ನು ರಾಜ್ಞಿ ಎಂದೂ ಹೇಳುವುದುಂಟು. ಈ ರೂಪಕದ ಅರ್ಥ : ತತ್ತ್ವಶಾಸ್ತ್ರ ಗುರಿ ತೋರಿಸುತ್ತದೆ, ವಿಜ್ಞಾನ ಆ ಗುರಿಯತ್ತ ನಡೆಯಲು ಹಾದಿ ಕಟ್ಟುತ್ತದೆ. ಗಣಿತವಾದರೋ ಪಥದ ದೃಢತೆಯನ್ನು ಸ್ಥಿರೀಕರಿಸುತ್ತದೆ. "ಪಥಿಕಾ! ಪಥ ದತ್ತವಾಗಿಲ್ಲ—ನೀ ನಡೆದು ಪಥವನ್ನು ನಿರ್ಮಿಸಬೇಕು" ಎಂಬ ಸೂಕ್ತಿ ಇದೇ ಭಾವವನ್ನು ಸೂಚಿಸುತ್ತದೆ. ಸ್ವಾಮಿ ವಿವೇಕಾನಂದರು ತಮ್ಮ ಕೃತಿಯಿಂದ ಗುರಿ—ಅಂದರೆ ಏಕೀಕೃತ ಲಕ್ಷ್ಯ—ತೋರಿಸಿದ್ದಾರೆ, ವಿಜ್ಞಾನಿ ಅದರತ್ತ ನಡೆದು ದಾರಿ ರೂಪಿಸುತ್ತಿದ್ದಾನೆ. ಧರ್ಮ ಈ ಪಥಗಮನವನ್ನು ನಿಯಂತ್ರಿಸುತ್ತದೆ.

ಚಿಂತನೆಯ ಕಡಲಿನೊಳಗುಲ್ಲಾಸ ನಾವೆಯಲಿ
ಸಂತತಮಹಾಯಾನ ಗೈದಿರುವ ಧೀಶಕ್ತಿ !
ಅಂತವಿಲ್ಲದ ಸಂತಸವ ಧಾರೆಯೆರೆವ ಪ್ರ-
ಶಾಂತಮತಿ ನಿನಗಿದೋ ಚಿರನಮನ ಅತ್ರಿಸೂನು

ವಿಜ್ಞಾನ ಮೂಲವನು ಕಾಣ್ ತತ್ತ್ವಶಾಸ್ತ್ರದಲಿ
ತತ್ತ್ವಶಾಸ್ತ್ರದ ಸೆಲೆಯನರಸು ವಿಜ್ಞಾನದಲಿ
ಸೃಷ್ಟಿವೈಚಿತ್ರ್ಯವೀ ದ್ವಂದ್ವ, ಪರಿಕಿಪೊಡೆ ಅಂ-
ತರ್ಬೋಧೆಗಿದು ಗೋಚರಿಪುದು ತಿಳಿ ಅತ್ರಿಸೂನು

**ಹೊಸತು** ಮಾರ್ಚ್ ೨೦೦೧
ಪ್ರಧಾನ ಸಂಪಾದಕರು : ಜಿ. ರಾಮಕೃಷ್ಣ
ನವಕರ್ನಾಟಕ ಪ್ರಕಾಶನ

# ವಿಜ್ಞಾನಸಂವಹನ ಮಾಧ್ಯಮವಾಗಿ ಕನ್ನಡ

ಒಮ್ಮೆ ಸ್ನೇಹಿತನೊಬ್ಬನ ಮನೆಯಲ್ಲಿ ನನಗೆ ಅಕಸ್ಮಾತ್ತಾಗಿ ಸ್ವಾಮಿ ಚಿನ್ಮಯಾನಂದರ ಭೇಟಿಯಾಯಿತು. ಆತ ನನ್ನನ್ನು ಅವರಿಗೆ ಕನ್ನಡ ವಿಶ್ವಕೋಶದ ವಿಜ್ಞಾನಸಂಪಾದಕನೆಂದು ಪರಿಚಯಿಸಿದ. ಒಡನೆ ನನ್ನಲ್ಲಿ ವಿಶೇಷ ಆಸಕ್ತಿ ತಳೆದ ಸ್ವಾಮೀಜಿ ಅಂದರು (ಮಾತುಕತೆ ನಡೆದದ್ದು ಇಂಗ್ಲಿಷಿನಲ್ಲಿ), "ಈ ಕೆಲಸ ನೀವು ಹೇಗೆ ಮಾಡುತ್ತೀರಿ—ಇಂಗ್ಲಿಷಿನಿಂದ ಕನ್ನಡಕ್ಕೆ ಲೇಖನಗಳನ್ನು ಅನುವಾದಿಸುವ ಮೂಲಕವೇ?"

"ಅಲ್ಲ ಸ್ವಾಮೀಜಿ! ವಿಷಯತಜ್ಞರಿಂದ ನಾವು ಕನ್ನಡದಲ್ಲೇ ಲೇಖನಗಳನ್ನು ಆಹ್ವಾನಿಸಿ ಸಂಪಾದಿಸಿ ಮುದ್ರಿಸುತ್ತೇವೆ. ಕನ್ನಡಕ್ಕೆ ಈ ಸಾಮರ್ಥ್ಯವಿದೆ, ಅಲ್ಲದೇ ಲೇಖಕರಿಗೆ ತಮ್ಮ ವಿಜ್ಞಾನಚಿಂತನೆಗಳನ್ನು ಕನ್ನಡದಲ್ಲಿ ಪುನಸ್ಸೃಷ್ಟಿಸಲು ಸಾಕಷ್ಟು ಉತ್ಸಾಹವೂ ಇದೆ."

ತುಸು ಅಪ್ರತಿಭರಾದ ಸ್ವಾಮೀಜಿ ನುಡಿದರು, "ಸರಿ ಹಾಗಾದರೆ ಥಿಯೊರಿ ಆಫ್ ರಿಲೆಟಿವಿಟಿಯನ್ನು (theory of relativity) ಹೇಗೆ ಕನ್ನಡದಲ್ಲಿ ಬರೆಯಿಸುತ್ತೀರಿ?"

"ಸಾಪೇಕ್ಷತಾಸಿದ್ಧಾಂತವೆಂದು ಅದರ ಹೆಸರು. ಅದನ್ನು ಸಾಕ್ಷಾತ್ಕರಿಸಿಕೊಂಡ ಆಲ್ಬರ್ಟ್ ಐನ್‌ಸ್ಟೈನ್(೧೮೭೯-೧೯೫೫) ತಮ್ಮ ಚಿಂತನೆಗಳನ್ನು ಸ್ವಂತ ಮಾತೃಭಾಷೆ ಜರ್ಮನ್‌ನಲ್ಲಿ ಅಭಿವ್ಯಕ್ತಿಸಿದರು. ಈ ನೂತನ ಸಿದ್ಧಾಂತದ ನವೀನತೆಗೂ ಸೌಂದರ್ಯಕ್ಕೂ ಮಾರು ಹೋದ ಇತರ ವಿಜ್ಞಾನಿಗಳು, ಅನ್ಯ ಭಾಷಿಕರಾಗಿದ್ದರೆ ಜರ್ಮನ್ ಕಲಿತು, ತಿರುಳನ್ನು ಸ್ವಾಂಗೀಕರಿಸಿ, ಬಳಿಕ ತಮ್ಮ ತಮ್ಮ ಭಾಷೆಗಳಲ್ಲಿ ಪುನಸ್ಸೃಷ್ಟಿಸಿದರು. ಭಾವನೆಗಳು ಅಮೂರ್ತ ಮತ್ತು ಸಾರ್ವದೈಶಿಕ, ಅಭಿವ್ಯಕ್ತಿಗಳಾದರೋ ಮೂರ್ತ ಮತ್ತು ಸ್ಥಳೀಯ, ಅಲ್ಲವೇ ಸ್ವಾಮೀಜಿ?"

ಕನ್ನಡವರಿಯದ ಅವರೇಕೆ ಅಂಥ ಅಭಿಪ್ರಾಯ ತಳೆದಿದ್ದರು? ಕನ್ನಡಿಗರಲ್ಲಿ (ವ್ಯಾಪಕ ವಾಗಿ ಭಾರತೀಯರಲ್ಲಿ ಕೂಡ) ಖುದ್ದು ತಮ್ಮ ಮಾತೃಭಾಷೆಯ ಬಗ್ಗೆ ಗಾಢವಾಗಿ ಬೇರು ಬಿಟ್ಟಿರುವ ಅಗಾಧ ಅಜ್ಞಾನ ಮತ್ತು ಅವಜ್ಞೆಗಳ ಫಲವಿದು! ದೀರ್ಘಕಾಲ ನಾವು ಇಂಗ್ಲಿಷ್ ಜನರಿಗೂ ಅವರ ಭಾಷೆಗೂ ದಾಸರಾಗಿದ್ದು ಸ್ವಾಭಿಮಾನಶೂನ್ಯರಾಗಿರುವುದೇ ಇದರ ಕಾರಣ. ಹುಟ್ಟಿನಿಂದಲೇ ನಾವು ಅಂಥ ಮಿಥ್ಯಾಭಾವನೆಗೆ ವಶರಾಗಿದ್ದೇವೆ. ಕನ್ನಡದ ತ್ರಾಣ ತಿಳಿಯುವತ್ತ ನಮಗೆ ಇನಿತೂ ಆಸಕ್ತಿಯಿಲ್ಲ—ಮನೆಯಲ್ಲಿ, ಶಾಲೆಯಲ್ಲಿ ಮತ್ತು ಸಮಾಜ ದಲ್ಲಿ ಕೂಡ. ನಿಜಕ್ಕೂ ಸಕಲ ದಾಸ್ಯಗಳಲ್ಲಿ ಬೌದ್ಧಿಕ ದಾಸ್ಯವೇ ನಿಕೃಷ್ಟವಾದದ್ದು.

ವಾಸ್ತವವಾಗಿ ಯಾವ ಭಾಷೆಯೂ ಸ್ವತಃ ಬಲಿಷ್ಠವೂ ಅಲ್ಲ, ಬಲಹೀನವೂ ಅಲ್ಲ. ಅದನ್ನು ಬಳಸುವವರು ಆ ಭಾಷೆಯಲ್ಲಿ ಹೇಗೆ ಹೇಗೆ ತಮ್ಮ ಹೊಸ ಹೊಸ ಚಿಂತನೆಗಳನ್ನು ನಿರೂಪಿಸುತ್ತಾರೋ ಹಾಗೆ ಹಾಗೆ ಅದು ತ್ರಾಣ ಗಳಿಸುತ್ತದೆ. ನೂತನ ಮಾರ್ಗಪ್ರವರ್ತಕ ರಿಗೆ ಈ ದಿಶೆಯಲ್ಲಿ ವ್ಯವಹರಿಸಲು ಆಂತರಿಕ ತುಡಿತವೂ (obsession) ಬಾಹ್ಯ ಹಿಡಿತವೂ (possession) ಇರುವಾಗ ಅವರು ಕ್ರಿಯಾಶೀಲರಾಗುತ್ತಾರೆ. ಇಂದು ಪ್ರಪಂಚಭಾಷೆ ಯಾಗಿ ವಿಜೃಂಭಿಸುತ್ತಿರುವ ಇಂಗ್ಲಿಷಿನ ಇತಿಹಾಸವನ್ನು ಅವಲೋಕಿಸಿದರೆ ಇದು ಸ್ಪಷ್ಟ ವಾಗುತ್ತದೆ. ಅಂದು ಕುಲೀನರ ಭಾಷೆಯೆಂದು ಇಂಗ್ಲೆಂಡಿನಲ್ಲಿ ಮೆರೆಯುತ್ತಿದ್ದ ಲ್ಯಾಟಿನ್ನಿನ ಸಾರ್ವಭೌಮತ್ವವನ್ನು ವಿಸ್ಥಾಪಿಸಿದುದು ವಿಲಿಯಮ್ ಶೇಕ್‌ಸ್ಪಿಯರ್ (೧೫೬೪-೧೬೧೬),

ಮೈಖೇಲ್ ಫ್ಯಾರಡೇ (೧೭೯೧-೧೮೬೭) ಮೊದಲಾದ ಯುಗಪ್ರವರ್ತಕರು ತಮ್ಮ ಮೂಲಭೂತ ಸೃಜನಶೀಲ ಚಿಂತನೆಗಳನ್ನು ಇಂಗ್ಲಿಷಿನಲ್ಲಿ ಅಭಿವ್ಯಕ್ತಿಸಲು ತೊಡಗಿದ ಬಳಿಕವೇ. ಎಂದೇ ಈ ಮುಂದಿನ ಸಾರ್ವತ್ರಿಕ ನಿಯಮ: ಉಪಯೋಗಿಸಿದಂತೆ ಭಾಷೆ, ಬಳಸಿದಂತೆ ಸ್ನೇಹ, ನಿಯೋಜಿಸಿದಂತೆ ಆಯುಧ, ಇತ್ಯಾದಿ.

ಕನ್ನಡದಲ್ಲಿ ಬರೆಯುವ ಮೊದಲು ನಾವು ಕನ್ನಡದಲ್ಲಿ ಯೋಚಿಸಬೇಕು, ಆ ಮೊದಲು ಕನ್ನಡವನ್ನು ನಮ್ಮ ದೈನಂದಿನ ವ್ಯವಹಾರಗಳಲ್ಲಿ ಬಳಸಬೇಕು, ಕನ್ನಡ ಅಭಿಜಾತ ಸಾಹಿತ್ಯವನ್ನು ಓದಬೇಕು, ಗೋವಿಂದ ಪೈಗಳು ಹಾಡಿರುವಂತೆ "ತನು ಕನ್ನಡ, ನುಡಿ ಕನ್ನಡ, ಮನ ಕನ್ನಡವೆಮ್ಮವು" ಎಂಬ ಸೂತ್ರವನ್ನು ಪಾಲಿಸಬೇಕು. ಹೀಗೆ ಮಾಡುತ್ತಿದ್ದೇವೆಯೇ? ಇದಕ್ಕೆ ಮೊದಲು ಕನ್ನಡ ನಾಡಿನಲ್ಲಿ ಕನ್ನಡವೇ ಆಡಳಿತ ಭಾಷೆ ಆಗಬೇಕು, ಸರ್ವತ್ರ ಶಿಕ್ಷಣ ಮಾಧ್ಯಮವಾಗಬೇಕು—ಅಂದರೆ ನಮ್ಮ ಮಾತೃಭಾಷೆಗೆ ಅದರ ಸಹಜ ಸ್ಥಾನ ಪ್ರಾಪ್ತವಾಗಬೇಕು. ಇದು ಇಂದಿಗೂ (೨೦೦೪) ಆಗಿಲ್ಲ. ಏಕೆ ? ನಾವು ದೃಢಸಂಕಲ್ಪಿಗಳಲ್ಲ, ಇಂಗ್ಲಿಷ್ ಬಗ್ಗೆ ಅನಾವಶ್ಯಕ ಮತ್ತು ಅವೈಚಾರಿಕ ವ್ಯಾಮೋಹ. ಇದಾದರೂ ಪೂರ್ತಿ ನಿಜವಲ್ಲ. ಏಕೆಂದರೆ ಭಾಷಾಪ್ರೀತಿ ಎನ್ನುವುದೊಂದು ಮಾನಸಿಕ ಸ್ಥಿತಿ. ಇಂಗ್ಲಿಷ್ ಭಾಷೆಯನ್ನು ಮಾತ್ರ ನೀವು ಪ್ರೀತಿಸಿ ಮಾತೃಭಾಷೆ ಕನ್ನಡವನ್ನು ಕಡೆಗಣಿಸುತ್ತಿದ್ದೀರೆಂದರೆ ಇಂಗ್ಲಿಷ್ ಕುರಿತಂತೆ ಕೂಡ ನಿಮ್ಮ ಪ್ರೀತಿ ಶುದ್ಧ ಖೋಟ, ಸ್ವಾರ್ಥಪ್ರೇರಿತ ನೋಟ!

ನಮ್ಮ ಶಿಕ್ಷಕರು, ಪಾಠಪುಸ್ತಕ ರಚಕರು, ವಿಜ್ಞಾನಲೇಖಕರು, ಪತ್ರಿಕಾಮಾಧ್ಯಮಗಳ ಭೀಷ್ಮರು ಮೊದಲಾದವರು ಕನ್ನಡದಲ್ಲಿ ವಿಜ್ಞಾನವಿಷಯ ನಿರೂಪಿಸುವುದರ ಬಗ್ಗೆ ಪ್ರಾಮಾಣಿಕ ಪ್ರಯತ್ನ ಹೂಡಿ (೧೯೫೦-೬೦ರ ದಶಕದಲ್ಲಿ) ತಾವು ಎದುರಿಸಿದ ನಿಜಸಮಸ್ಯೆಗಳನ್ನು ಹೇಳಿದ್ದುಂಟು. ಇವನ್ನು ಈ ಮುಂದಿನಂತೆ ಪಟ್ಟಿಮಾಡಬಹುದು: ೧. ಶಿಷ್ಟಪಾರಿಭಾಷಿಕ ಪದಗಳ ಅಭಾವ. ಪಾರಿಭಾಷಿಕ ಪದಗಳ ಅಂತಸ್ತು ಅಂಕಿತನಾಮಗಳದು—ನಿಸರ್ಗವನ್ನು ಅರಿಯುವ ಹಾದಿಯಲ್ಲಿ ವಿಜ್ಞಾನಿಗೆ ಹೊಸ ವಿದ್ಯಮಾನಗಳು ಕಂಡುಬಂದಾಗ, ಆ ತನಕ ತಿಳಿದಿರದಿದ್ದ ಗುಣಗಳು ಪ್ರಕಟವಾದಾಗ, ಇತ್ಯಾದಿ, ಆತ ಅವುಗಳಿಗೆ ಹೊಸತಾಗಿ ನಾಮಕರಣ ಮಾಡಬೇಕಾಗುತ್ತದೆ. ೨. ನೂತನಪದಗಳ ರಚನೆಗೆ ಖಚಿತ ಮಾರ್ಗದರ್ಶೀ ಸೂತ್ರಗಳ ಗೈರುಹಾಜರಿ. ಉದಾಹರಣೆಗೆ ಆಟಮ್ (atom), ಮಾಲೆಕ್ಯೂಲ್ (molecule), ರೇಡಿಯೇಷನ್ (radiation), ಬ್ಲ್ಯಾಕ್ ಹೋಲ್ (black hole), ಜೀನ್ (gene), ಆಕ್ಸಿಜನ್ (oxygen), ರಿವೊಲ್ಯೂಷನ್ (revolution), ರೊಟೇಷನ್ (rotation), ಕಂಪ್ಯೂಟರ್ ಹಾರ್ಡ್‌ವೇರ್ (computer hardware), ಸಾಫ್ಟ್‌ವೇರ್ (software) ಮುಂತಾದವು. ಇವನ್ನು ಕನ್ನಡಿಸಬೇಕೇ ಅಥವಾ ತದ್ವತ್ತಾಗಿ ಲಿಪ್ಯಂತರಣ ಮಾಡಿದರೆ ಸಾಕೇ? (ಕನ್ನಡದಲ್ಲಿ ಇವು ಅನುಕ್ರಮವಾಗಿ ಪರಮಾಣು, ಅಣು, ವಿಕಿರಣ, ಕೃಷ್ಣವಿವರ, ಜೀನ್, ಆಕ್ಸಿಜನ್, ಪರಿಭ್ರಮಣೆ, ಆವರ್ತನೆ, ಗಣಕ ಯಂತ್ರಾಂಶ, ತಂತ್ರಾಂಶ ಇತ್ಯಾದಿ). ೩. ಆಧುನಿಕ ವಿಜ್ಞಾನದ ಪರಿಕಲ್ಪನೆಗಳನ್ನು ಇಂಗ್ಲಿಷಿನಲ್ಲಿರುವಷ್ಟೇ ಅಡಕವಾಗಿಯೂ ಖಚಿತವಾಗಿಯೂ ನಿರೂಪಿಸುವ ದಿಶೆಯಲ್ಲಿ ಕನ್ನಡ ಸಾಕಷ್ಟು ಪುಟಿತವಾಗಿಲ್ಲದಿರುವುದು. ಅಂದರೆ ಪರಕೀಯ ಭಾವನೆಗಳಿಗೆ ಒಗ್ಗದ ಮತ್ತು ಒಲ್ಲದ ಕನ್ನಡವನ್ನು ಪಳಗಿಸುವುದು ಸಾಧ್ಯವೇ? ಇಂಥ ಸಾಹಸ ಜನೋಪಯುಕ್ತವಾದೀತೇ? ೪.

ಯಾವುದೇ ಆಧುನಿಕ ವಿಜ್ಞಾನ ಸಂಶೋಧನೆಯೂ ಕನ್ನಡದಲ್ಲಿ (ವ್ಯಾಪಕವಾಗಿ ಯಾವುದೇ ಭಾರತೀಯ ಭಾಷೆಯಲ್ಲಿ) ಜರಗಿರುವುದಿಲ್ಲ. ಆದ್ದರಿಂದ ನಮ್ಮ ಭಾಷೆ ವಿಜ್ಞಾನ ಸಂವಹನ -ಮಾಧ್ಯಮವಾಗಿ ಅರಳಿರುವುದಿಲ್ಲ. ಈಗ ಆ ಸಂಸ್ಕಾರವನ್ನು ಕೊಡುವುದು ಅಗತ್ಯವೇ, ಸಾಧುವೇ? ಸುಲಭಲಭ್ಯ ಇಂಗ್ಲಿಷ್ ಕೈಯಲ್ಲಿರುವ ಹಕ್ಕಿ. ಇದರ ಉಪಯೋಗ ಪಡೆಯದೇ ಪೊದೆಯೊಳಗೆ ಅಡಗಿರಬಹುದಾದ ಕನ್ನಡ-ವಿಜ್ಞಾನ ಭಾಷೆಗೆ ಶರಣಾಗುವುದು ಶುದ್ಧ ಮೂರ್ಖತೆ ಆಗದೇ? ೫. ತೀವ್ರ ಪೈಪೋಟಿಯ ಈ ಯುಗದಲ್ಲಿ ನಮಗೆ ಅಯಾಚಿತವಾಗಿ ಒದಗಿರುವ ಅಂತಾರಾಷ್ಟ್ರೀಯ ಭಾಷೆ ಇಂಗ್ಲಿಷಿನ ಬದಲು ಅಡುಗೇಮನೆಯಿಂದ ಆಚೆಗೆ ಚಲಾವಣೆಯಲ್ಲಿರದ ಕನ್ನಡವನ್ನು ಮಕ್ಕಳ ಮೇಲೆ ಹೇರಿ ಅವರನ್ನು ವಿಜ್ಞಾನದೂರರನ್ನಾಗಿ ಮಾಡುವುದು ಅಪೇಕ್ಷಣೀಯವೇ? ೬. ಇಂಗ್ಲಿಷಿನಲ್ಲಿ ವಿಜ್ಞಾನ ಕುರಿತಂತೆ ಆಕರಗ್ರಂಥ ಗಳು, ವಿಶ್ವಕೋಶಗಳು, ಪದವಿವರಣ ಕೋಶಗಳು, ನಿಘಂಟುಗಳು ಇತ್ಯಾದಿ ಯಥೇಚ್ಛ ವಾಗಿ ದೊರೆಯುತ್ತವೆ. ಅಂತರಜಾಲವೂ ಇಲ್ಲಿ ವ್ಯಾಪಕ ಉಪಯೋಗಕ್ಕೆ ಒದಗುವುದು. ಕನ್ನಡದಲ್ಲಿ? ಇವುಗಳ ಗೈರುಹಾಜರಿಯೇ ಇಲ್ಲಿಯ ನಿಯಮವೆಂದು ಭಾಸವಾಗುತ್ತದೆ.

ಹೊಸ ಸಂಗತಿ, ಚಿಂತನೆ, ಸೂಚನೆ ಏನೇ ಬಂದರೂ ಮೊದಲು ಅವನ್ನು ನಿರಾಕರಿಸು ವುದು ಮಾನವಮತಿಯ ಆದಿ ಪ್ರವೃತ್ತಿ! ಒಂದು ಬಗೆಯ ಅಭದ್ರತೆ ಅಥವಾ ತನ್ನ ಮುದ್ದು ನಂಬಿಕೆಗಳಿಗೆ, ಆದ್ದರಿಂದ ಸ್ವಂತ ಅಸ್ತಿತ್ವಕ್ಕೇ, ಭಂಗ ಒದಗಲಿದೆಯೋ ಎಂಬ ಮನಃಸ್ಥಿತಿ. ಬಳಿಕ ಇಂಥ ಅವೈಚಾರಿಕ ತೀರ್ಮಾನವನ್ನು ತಾರ್ಕಿಕವಾಗಿ ಸಮರ್ಥಿಸಲು ಕಾರಣಗಳ ಹೊಸೆತ. ಆದರೆ ಹೊಸತು ಯಾವುದೇ ಇರಲಿ ಅದು ಅಂದಿನ ತನಕದ ಅನ್ವೇಷಣೆಯ ಕಾರಣವಾಗಿ ರಂಗಪ್ರವೇಶಿಸಿದಾಗ ಅದರ ಜೊತೆಯಲ್ಲೇ ಬೆಳೆದು ನಳನಳಿಸುವ ನೂತನ ಪೀಳಿಗೆ ಅದನ್ನು ತೀರ ಸಹಜವಾಗಿ ಅಂಗೀಕರಿಸಿ ಅದರ ಏಳಿಗೆಗೆ ತನ್ನ ದೇಣಿಗೆ ಸಲ್ಲಿಸುತ್ತದೆ. ನಮ್ಮ ಮನೆಗಳಲ್ಲೇ ನೋಡೋಣ: ಹಳೆಯ ತಲೆಮಾರಿನವರಿಗೆ ಗಣಕ (computer), ದೂರದರ್ಶನ (television), ವಿಮಾನಯಾನ (air travel) ಮುಂತಾದವು ಆತಂಕಕಾರಿಗಳಾಗಿದ್ದುದು ಸರಿಯಷ್ಟೆ; ಆದರೆ ಅವು ಇಂದಿನವರ ಬದುಕಿನ ಅವಿಭಾಜ್ಯ ಅಂಗಗಳೇ ಆಗಿಬಿಟ್ಟಿವೆ, ಅಲ್ಲವೇ? ಹಳತು-ಹೊಸತುಗಳ ಈ ನಿರಂತರ ಸಂಘರ್ಷ- ಸಮನ್ವಯ ಯಾತ್ರೆಯನ್ನು ಸೂತ್ರರೂಪದಲ್ಲಿ ಹೇಳಿರುವ ಸಾಲುಗಳಿವು :

> ಹೊಸ ಚಿಗುರು ಹಳೆ ಬೇರು ಕೂಡಿರಲು ಮರಸೊಬಗು
> ಹೊಸ ಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ
> ಋಷಿವಾಕ್ಯದೊಡನೆ ವಿಜ್ಞಾನಕಲೆ ಮೇಳವಿಸೆ
> ಜಸವು ಜನಜೀವನಕೆ ಮಂಕುತಿಮ್ಮ

ವಾಸ್ತವವಾಗಿ ೧೯೨೦ರ ಅಂದಾಜಿಗೆ ಎ. ನಾರಾಯಣರಾವ್, ಆರ್. ಎಲ್. ನರಸಿಂಹಯ್ಯ, ನಂಗಪುರಮ್ ವೆಂಕಟೇಶ ಅಯ್ಯಂಗಾರ್, ಕೋಟ ಲಕ್ಷ್ಮೀನಾರಾಯಣ ಕಾರಂತ, ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಬೆಳ್ಳಾವೆ ವೆಂಕಟನಾರಣಪ್ಪ ಮೊದಲಾದ ಶಿಕ್ಷಣತಜ್ಞರು ಕನ್ನಡದಲ್ಲಿ ಆಧುನಿಕ ವಿಜ್ಞಾನವಿಷಯಗಳನ್ನು ಜನಪ್ರಿಯಗೊಳಿಸಲು ಮುಂದಾದ ಮೊದಲಿಗರು. ಅವರೆಲ್ಲರೂ ತಮ್ಮ ತಮ್ಮ ವಿಷಯಗಳನ್ನು ತಾಂತ್ರಿಕವಾಗಿ ಅಭ್ಯಸಿಸಿ ಬೋಧಿಸಿ ಕೃತಾರ್ಥ ಭಾವ ಗಳಿಸಿ, ಕನ್ನಡದಲ್ಲಿ ಅವೇ ಪರಿಕಲ್ಪನೆಗಳನ್ನು

ಪುನಸ್ಸೃಷ್ಟಿಸಲು ಮುಂದಾದವರು. ಅಲ್ಲದೇ ಕನ್ನಡ ಹಾಗೂ ಸಂಸ್ಕೃತಗಳಲ್ಲಿ ಪರಿಣತರು ಕೂಡ. ಅವರ ಮನೋಮೂಸೆಗಳಲ್ಲಿ ನಡೆದ ಪ್ರಕ್ರಿಯೆಗಳನ್ನು ಸೂತ್ರರೂಪದಲ್ಲಿ ಹೀಗೆ ನಿರೂಪಿಸಬಹುದು: ತಾಂತ್ರಿಕವಾಗಿ ಪರಿಕಲ್ಪನೆಗಳ ಸ್ವಾಂಗೀಕರಣ—ವಿಷಯತಜ್ಞತೆಯ ಜೊತೆಗೆ ಇಂಗ್ಲಿಷ್ ಭಾಷಾಪ್ರಭುತ್ವವೂ ಅಗತ್ಯ; ಇವುಗಳಿಗೆ ಸ್ವಂತ ಪ್ರತಿಭೆಯ ಕಾವಿನಲ್ಲಿ ಕನ್ನಡರೂಪಪೂರಣ—ಕನ್ನಡ ಭಾಷೆಯಲ್ಲಿ ಪ್ರಾವೀಣ್ಯದ ಜೊತೆಗೆ ಸೃಜನಶೀಲ ಚಿಂತನೆಯೂ ಅವಶ್ಯ; ಮತ್ತೆ ಕನ್ನಡ ಭಾಷೆಯ ಜಾಯಮಾನ ಅನುಸರಿಸಿ ಇದರಲ್ಲಿ ನಿರೂಪಣ—ಕನ್ನಡ ವ್ಯಾಕರಣದ ಅರಿವು, ಮತ್ತು ಈ ಕಾರ್ಯ ಕುರಿತು ದೃಢ ಭರವಸೆ. ಅವರೆಲ್ಲರೂ ಕನ್ನಡ ಮತ್ತು ಇಂಗ್ಲಿಷ್ ಉಭಯಭಾಷಾತಜ್ಞರಾಗಿದ್ದರು, ಸೃಜನಶೀಲ ಲೇಖಕರಾಗಿದ್ದರು, ಮೇಲಾಗಿ ಈ ಕರ್ತವ್ಯದ ಬಗ್ಗೆ ಪೂರ್ಣ ನಿಷ್ಠೆಯುಳ್ಳವರಾಗಿದ್ದರು.

ಈ ತೆರನಾಗಿ, ಅಂದಾಜು ೧೯೫೦ರ ದಶಕದ ತನಕ, ಕನ್ನಡವಿಜ್ಞಾನ ವಾಙ್ಮಯ ಅಲ್ಲಿ ಇಲ್ಲಿ ಆಸಕ್ತರ ಆಡುಂಬೊಲವಾಗಿ ಬೆಳೆಯಿತು. ಆಸಕ್ತರ ಮಾತ್ರ ಏಕೆ? ಮಾರುಕಟ್ಟೆ ಬೇಡಿಕೆಗೆ ಅನುಗುಣವಾಗಿ ಸರಕು ಉತ್ಪಾದನೆ ಮತ್ತು ಪೂರೈಕೆ ಆಗುವ ವ್ಯಾಪಾರನಿಯಮ ಸರ್ವತ್ರ ಅನ್ವಯವಾಗುವುದೆಂಬುದನ್ನು ಮರೆಯಬಾರದು. ೧೯೩೦ರ ದಶಕದಲ್ಲಿ ಕೋಟ ಶಿವರಾಮ ಕಾರಂತರು "ಬಾಲಪ್ರಪಂಚ" ಎಂಬ ಕಿರಿಯರ ಸಾಮಾನ್ಯ ವಿಶ್ವಕೋಶದ (ಈ ಮೂರು ಸಂಪುಟಗಳಲ್ಲಿ ವಿಜ್ಞಾನ ವಿಷಯಗಳೂ ಸೇರಿದ್ದುವು) ಮೂಲಕ ಹೊಸ ಹರವಿನ ಶೋಧ ಮಾಡಿದರು. ಮುಂದೆ ೧೯೫೦-೬೦ರ ದಶಕದಲ್ಲಿ "ವಿಜ್ಞಾನ ಪ್ರಪಂಚ" ಹೆಸರಿನಲ್ಲಿ ನಾಲ್ಕು ಸಂಪುಟಗಳನ್ನು ಪ್ರಕಟಿಸಿದರು. ಆಧುನಿಕ ವಿಜ್ಞಾನ ಕುರಿತಂತೆ ಇಂಗ್ಲಿಷಿನಲ್ಲಿ ಪ್ರಕಟ ವಾಗಿದ್ದ ಜನಪ್ರಿಯ (ತಾಂತ್ರಿಕ ಅಲ್ಲ) ಕೃತಿಗಳನ್ನು ಓದಿ ತಮಗೆ ಅರ್ಥವಾದಷ್ಟನ್ನು (ಕಾರಂತರು ಮೂಲತಃ ಕಾದಂಬರಿಕಾರರು, ವಿಜ್ಞಾನದ ತಾಂತ್ರಿಕ ಭಾಷೆಗೆ ಪ್ರವೇಶ ಇದ್ದವರಲ್ಲ) ಕನ್ನಡ ವಾಕ್ಯಗಳಲ್ಲಿ ಬರೆದರು. ಏಕವ್ಯಕ್ತಿ-ಮಹಾಸಾಧನೆ ಮತ್ತು ಕಾರಂತರ "ಹತ್ತು ಮುಖಗಳು" ಎಂಬ ಭಾವುಕ ಕಾರಣಗಳಿಗಾಗಿ ಇದು ಪ್ರಸಿದ್ಧಿ ಗಳಿಸಿತು, ಅನೇಕ ಆವೃತ್ತಿಗಳನ್ನೂ ಕಂಡಿತು. ಆದರೆ ಭಾವುಕತೆ ಅಥವಾ ವ್ಯಕ್ತಿಗೌರವ ಎಂಬ ಜ್ಞಾತೃನಿಷ್ಠ ಕಾರಣಗಳು ವಿಜ್ಞಾನದ ಹಾದಿಯನ್ನು ಕಡೆಯುವುದಿಲ್ಲ, ನಿಯಂತ್ರಿಸುವುದೂ ಇಲ್ಲ. ಹೀಗಾಗಿ ಕಾರಂತರ ಪ್ರಯತ್ನ ಸಫಲವಾಗಲಿಲ್ಲ, ಮಾರ್ಗದರ್ಶಕವೂ ಆಗಲಿಲ್ಲ. ಅಲ್ಲದೇ ತತ್ಪೂರ್ವ ನರಸಿಂಹಯ್ಯಾದಿ ಶಿಕ್ಷಣವೇತ್ತರಿಂದ ರೂಪಿತವಾದ ಋಜುಮಾರ್ಗವನ್ನು ತಾತ್ಕಾಲಿಕವಾಗಿ ಮಸಳಿಸಿತು ಕೂಡ.

ಇಂಥ ಕುರುಡುಗಲ್ಲಿಯಿಂದ ಕನ್ನಡವಿಜ್ಞಾನ ವಾಙ್ಮಯವನ್ನು ಎತ್ತಿ ಸರಿಯಾದ ಶೈಕ್ಷಣಿಕ ಮಾರ್ಗಕ್ಕೆ ತಂದು ನಿಲ್ಲಿಸಿದುದು ಮುಖ್ಯವಾಗಿ ಮೈಸೂರು ವಿಶ್ವವಿದ್ಯಾನಿಲಯ. ಸಾಹಿತ್ಯ ಮತ್ತು ವಿಜ್ಞಾನ ಕುರಿತಂತೆ ಮೌಲ್ಯಯುತ ಲೇಖನಗಳ ಸಂಕಲನವಾಗಿ ವಿಶ್ವವಿದ್ಯಾ ನಿಲಯ ಪ್ರಕಟಿಸುತ್ತಿದ್ದ "ಪ್ರಬುದ್ಧ ಕರ್ಣಾಟಕ" ಎಂಬ ತ್ರೈಮಾಸಿಕ ತನ್ನ ಚಿನ್ನದ ಸಂಚಿಕೆಯಾಗಿ ವಿಜ್ಞಾನ ವಿಷಯಗಳನ್ನು ಮಾತ್ರ ಒಳಗೊಂಡ ಎರಡು ಬೃಹದ್ಗಾತ್ರದ ಸಂಪುಟಗಳನ್ನು ಪ್ರಕಟಿಸಿತು (೧೯೬೯). ಸಂಪಾದನೆಯ ಹೊಣೆ ಹೊತ್ತು ಕನ್ನಡ ವಿಜ್ಞಾನ ವಾಙ್ಮಯ ನಿರ್ಮಾಣಕ್ಕೆ ಅಂದಿನ ಸಂದರ್ಭದಲ್ಲಿ ಒಂದು ಶಿಷ್ಟ ರೂಪವಿತ್ತವರು ರಸಾಯನ ವಿಜ್ಞಾನಪ್ರಾಧ್ಯಾಪಕ ಮತ್ತು ವಿಜ್ಞಾನಲೇಖಕ ಜೆ. ಆರ್. ಲಕ್ಷ್ಮಣರಾಯರು.

ಅಲ್ಲಿಂದ ಮುಂದಕ್ಕೆ ಇವರು "ವಿಜ್ಞಾನ ಕರ್ನಾಟಕ"ವೆಂಬ ನೂತನ ತ್ರೈಮಾಸಿಕದ ಸಂಪಾದಕರಾಗಿ ಅನೇಕ ಹೊಸಲೇಖಕರು ಅರಳಲು ಕಾರಣರೂ ಆದರು. ಇದೇ ವಿಶ್ವವಿದ್ಯಾ ನಿಲಯದವರು ಪ್ರತ್ಯೇಕವಾಗಿ ಪ್ರಕಟಿಸುತ್ತ ಬಂದಿರುವ ವಿಜ್ಞಾನಾಕರಗ್ರಂಥಗಳು, ಪಠ್ಯ ಪುಸ್ತಕಗಳು, ಅನುವಾದಿತ ಕೃತಿಗಳು ಮುಂತಾದವು ಇಂಥ ವಾಙ್ಮಯರಚನೆಗೆ ಸಮರ್ಥ ಮತ್ತು ಸಮರ್ಪಕ ತಳಹದಿ ಕಟ್ಟಿವೆ. ರಾಜ್ಯದ ಇತರ ವಿಶ್ವವಿದ್ಯಾಲಯಗಳು, ಅನೇಕ ಸ್ವಯಂ ಸೇವಾಸಂಘಗಳು, ಖಾಸಗಿ ಪ್ರಕಾಶಕರು, ಕನ್ನಡ ವಿಜ್ಞಾನ ಪರಿಷತ್ತು, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಸಾಹಿತ್ಯ ಪರಿಷತ್ತು, ಸಾಹಿತ್ಯ ಅಕಾಡೆಮಿ, ಪುಸ್ತಕ ಪ್ರಾಧಿಕಾರ, ನಿಯತಕಾಲಿಕೆಗಳು, ವಿಜ್ಞಾನಲೇಖನಗಳನ್ನು ಪ್ರಕಟಿಸುತ್ತಿರುವ ದೈನಿಕಗಳು ಮುಂತಾದವು ಸಲ್ಲಿಸುತ್ತಿರುವ ಸೇವೆ ಗಮನಾರ್ಹವಾಗಿದೆ, ಕನ್ನಡದ ಸರ್ವಾಂಗ ಸುಂದರ ಅಭಿವರ್ಧನೆಗೆ ಈ ಎಲ್ಲ ನಿರ್ಮಿತಿಗಳೂ ಸಾಕ್ಷಿಯಾಗಿವೆ. ಅತ್ಯಂತ ಆಧುನಿಕ ವಿಜ್ಞಾನ ಪರಿಕಲ್ಪನೆಗಳು, ಆಕರ ಹಾಗೂ ಜನಪ್ರಿಯಕೃತಿಗಳ ಅನುವಾದಗಳು, ಸ್ವತಂತ್ರ ಗ್ರಂಥಗಳು ಮುಂತಾದವು ಕನ್ನಡದಲ್ಲಿ ಹೇರಳವಾಗಿ ಪ್ರಕಟವಾಗಿವೆ. ನೋಡುವ ಕಣ್ಣು, ತಿಳಿಯುವ ಮನಸ್ಸು ಮತ್ತು ಮೆಚ್ಚುವ ಹೃದಯವಿಲ್ಲದ ಅಭಿಮಾನರಿಕ್ತರು ಕನ್ನಡದಲ್ಲೇನಿದೆ ಎಂಬ ನಿಷೇಧಸುಖಿ ಗಳಾಗುತ್ತಾರೆ—ಈಚಿನ ದಿನಗಳಲ್ಲಿ ಅಧಿಕಾಧಿಕವಾಗಿ (೨೦೦೪).

ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ ೧೯೬೮ರಲ್ಲಿ "ಕನ್ನಡ ವಿಶ್ವಕೋಶ" ಮತ್ತು ಎರಡು ವರ್ಷಾನಂತರ "ವಿಷಯ ವಿಶ್ವಕೋಶ" ಎಂಬ ಎರಡು ಯೋಜನೆಗಳು ಚಾಲೂಗೊಂಡುವು. ಮೊದಲನೆಯ ಯೋಜನೆಯಲ್ಲಿ ಪೂರ್ಣಾವಧಿ ವಿಜ್ಞಾನಸಂಪಾದಕ ನಾಗಿ ಸೇವೆ ಸಲ್ಲಿಸುವ ಭಾಗ್ಯ ನನಗೊದಗಿತ್ತು. (೧೯೮೬ರಲ್ಲಿ ವಯಸ್ಸು ೬೦ ತುಂಬಿದಾಗ ನಿವೃತ್ತನಾದೆ. ಈಗ [೨೦೦೪] ನಿವೃತ್ತನಾಗಿ ೧೮ ವರ್ಷಾನಂತರ ವಿಶ್ವವಿದ್ಯಾನಿಲಯದ ಕೋರಿಕೆ ಮೇರೆಗೆ ೧೪ನೆಯ [ಮೂಲ ಯೋಚನೆ ಪ್ರಕಾರ ಕೊನೆಯ] ಸಂಪುಟದ ಗೌರವ ವಿಜ್ಞಾನ ಸಂಪಾದಕನಾಗಿ ಕೆಲಸ ಮಾಡುತ್ತಿದ್ದೇನೆ). ಮೂಲತಃ ಗಣಿತಾಧ್ಯಾಪಕನಾಗಿದ್ದು ಅನೇಕ ಪಠ್ಯಪುಸ್ತಕಗಳನ್ನೂ ಜನಪ್ರಿಯಕೃತಿಗಳನ್ನೂ ರಚಿಸಿದ್ದ ನನಗೆ ಈ ಹೊಸ ಹೊಣೆ ಒಂದು ಸವಾಲಾಯಿತ್ತು: ತಜ್ಞರಿಂದ ಲೇಖನಗಳನ್ನು ಆಹ್ವಾನಿಸುವುದು (ಹೆಚ್ಚಿನವು ಇಂಗ್ಲಿಷಿನಲ್ಲಿರುತ್ತಿದ್ದುವು), ಅಧುನಾತಮ ಆಕರಗ್ರಂಥಗಳಿಂದ ವಿಷಯಸನ್ನದ್ಧನಾಗಿ ಈ ಲೇಖನಗಳನ್ನು ಯುಕ್ತವಾಗಿ ಸಂಪಾದಿಸಿ ಮುದ್ರಣಕ್ಕೆ ಸಿದ್ಧಗೊಳಿಸುವುದು, ಅನುವಾದ ಕಾರ್ಯವನ್ನು ಇತರರಿಂದ ಮಾಡಿಸುವುದು (ಹೆಚ್ಚಿನ ಸಂದರ್ಭಗಳಲ್ಲಿ ನಮ್ಮ ಕಛೇರಿ ಯಲ್ಲೇ ಮಾಡಬೇಕಾಗಿದ್ದ ಅನಿವಾರ್ಯತೆ ಎದುರಾಗುತ್ತಿತ್ತು), ವೃತ್ತಪತ್ರಿಕೆಗಳಿಗೂ ವಿದೇಶೀ ವಿಜ್ಞಾನ ನಿಯತಕಾಲಿಕೆಗಳಿಗೂ ಸದಾ ತೆರೆದಮನದವರಾಗಿದ್ದು ಮಾಹಿತಿ ಸಂಗ್ರಹಿಸಿ ನಮ್ಮ ಲೇಖನಗಳನ್ನು ಪುಷ್ಟೀಕರಿಸುವುದು ಮುಂತಾದ ಸೃಜನಶೀಲ ಪ್ರಕ್ರಿಯೆ ಗಳು ನಮ್ಮ ದೈನಂದಿನ ಚಟುವಟಿಕೆಗಳಾದುವು. ಈ ತನಕ ಪ್ರಕಟವಾಗಿರುವ ೧೩ ಬೃಹತ್ಸಂಪುಟಗಳು ಕನ್ನಡಕ್ಕೆ ಸಮರ್ಥ ವಿಜ್ಞಾನಮಾಧ್ಯಮವಾಗುವತ್ತ ನೀಡಿರುವ ದೇಣಿಗೆ ಅನುಪಮವಾದದ್ದು. ಸೂತ್ರರೂಪದಲ್ಲಿ: ಭಾಷೆ ಸಿದ್ಧವಿದೆ, ಶಿಷ್ಟ ಪಾರಿಭಾಷಿಕ ಪದಗಳಿವೆ, ಖಚಿತ ಮತ್ತು ಆಕರ್ಷಕ ನಿರೂಪಣ ಶೈಲಿ ಗೊತ್ತಿದೆ, ಆದರೆ ಕಟಿಬದ್ಧ ಲೇಖಕರ ದಂಡು ಎಲ್ಲಿದೆ?

ಮೂಕಶಿಲೆನವೆಯುತಿದೆ ರಾಮಪಾದವ ಕಾದು
ನಾಕಬಂದೀತೆಂದು ಶಬರಿ ಕಾದಿಹಳಲ್ಲಿ
"ಹಾ ಕನ್ನಡಮ್ಮ! ನಾನಿಹೆ"ನೆಂಬ ಭರವಸೆಯ
ಓ ಕನ್ನಡಿಗ! ನೀಡುವೆಯ ನೀನು? ಅತ್ರಿಸೂನು

೧೯೭೦ರ ಉಲ್ಲಾಸದಾಯಕ ಹವೆಯಲ್ಲಿ ಬೆಂಗಳೂರಿನ ಕರ್ನಾಟಕ ಸಹಕಾರೀ ಪ್ರಕಾಶನದ ವತಿಯಿಂದ "ಜ್ಞಾನಗಂಗೋತ್ರಿ" ಎಂಬ ಕಿರಿಯರ ವಿಶ್ವಕೋಶ (೭ ಸಂಪುಟಗಳು) ಅರಳಿ ಪರಿಮಳಿಸಿತು (೧೯೭೦-೭೪). ಇದರ ಪ್ರಧಾನ ಸಂಪಾದಕರು ಕಾದಂಬರಿಕಾರ ನಿರಂಜನ, ವಿಜ್ಞಾನ ಸಂಪಾದಕರು ಭೌತವಿಜ್ಞಾನಪ್ರಾಧ್ಯಾಪಕ ಮತ್ತು ಆ ಮೊದಲು "ವಿಜ್ಞಾನಲೋಕ" ಎಂಬ ಖಾಸಗಿ ಮಾಸಿಕದ ಸಂಪಾದಕ ಅಡ್ಯನಡ್ಕ ಕೃಷ್ಣಭಟ್ಟ. ಈ ಎಲ್ಲ ಚಟುವಟಿಕೆಗಳು ವಿಜ್ಞಾನಸಂವಹನಮಾಧ್ಯಮವಾಗಿ ಕನ್ನಡದ ಸಾಮರ್ಥ್ಯ-ದೌರ್ಬಲ್ಯಗಳನ್ನು ಸ್ಫಟಿಕಶುಭ್ರತೆಯಿಂದ ಬಿಂಬಿಸಿದುವು (೧೯೭೦-೮೦ ಅವಧಿ): ೧. ಯಾವುದೇ ಸಂಕೀರ್ಣ ವಿಷಯವನ್ನೂ ಕನ್ನಡದಲ್ಲಿ ಆಕರ್ಷಕವಾಗಿ ನಿರೂಪಿಸಬಹುದು. ಆದ್ದರಿಂದ ಕನ್ನಡದ ಆಂತರಿಕ ತ್ರಾಣ ಮತ್ತು ನಮ್ಯತೆ ಬಗ್ಗೆ ಏನೂ ಸಂಶಯತಳೆಯಬೇಕಾಗಿಲ್ಲ. ಇದರ ಅರ್ಥ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವಾತನಿಗೆ ದೊರೆಯುವಷ್ಟೇ ಜ್ಞಾನ ಕನ್ನಡದಲ್ಲಿ ತಿಳಿಯಬಯಸುವಾತನಿಗೂ ಲಭಿಸುತ್ತದೆ. ೨. ನಮ್ಮ ವಿಜ್ಞಾನಲೇಖಕರಿಗೆ ಕನ್ನಡ ಸಾಹಿತ್ಯದ ಗಂಭೀರ ಅಧ್ಯಯನ ಅಗತ್ಯವಿದೆ. ಇದೇ ರೀತಿ ಸಾಹಿತಿಗಳಿಗೂ ಕನಿಷ್ಠ ಜನಪ್ರಿಯವಿಜ್ಞಾನ ವಾಙ್ಮಯದಲ್ಲಾದರೂ ವಿಶೇಷ ಶಿಕ್ಷಣ ಕೊಡುವುದು ಅಪೇಕ್ಷಣೀಯ. ಎರಡರ ಸಾಹಚರ್ಯ ಕನ್ನಡದ ಸರ್ವಾಂಗ ಸುಂದರ ಅಭಿವರ್ಧನೆಗೆ ಅಗತ್ಯ. ಯುವ ಕನ್ನಡ ಉಪನ್ಯಾಸಕ ಕುವೆಂಪು, ಜೀನ್ಸ್ ಬರೆದಿದ್ದ *The Mysterious Universe* ಓದಿ ಸವಿದು ಆ ಸ್ವಾರಸ್ಯವನ್ನು ತರಗತಿಗಳಲ್ಲಿ ವಿವರಿಸುತ್ತಿದ್ದರೆಂದು ಅವರ ನೇರ ವಿದ್ಯಾರ್ಥಿ ಮತ್ತು ಹಿರಿಯ ಕನ್ನಡ ವಿಜ್ಞಾನ ಲೇಖಕ ಜೆ. ಆರ್. ಲಕ್ಷ್ಮಣರಾಯರೊಮ್ಮೆ ಹೇಳಿದ್ದರು. ೩. ಕನ್ನಡದಲ್ಲಿ ವಿಜ್ಞಾನನಿಘಂಟು, ಶಿಷ್ಟೀಕೃತಪಾರಿಭಾಷಿಕ ಪದಕೋಶ, ಪದವಿವರಣ ಕೋಶ ಮುಂತಾದವುಗಳ ಅಗತ್ಯವಿದೆ. ೪. ನವಲೇಖಕರ ಹೊಸ ಪೀಳಿಗೆಯೇ ವಿಜ್ಞಾನದ ವಿವಿಧ ವಿಭಾಗಗಳಲ್ಲಿ ಕ್ರಿಯಾಶೀಲರಾಗಬೇಕು. ಇವರನ್ನು ರೂಪಿಸಿ ಪ್ರೋತ್ಸಾಹಿಸುವ ಶಿಕ್ಷಣ ವ್ಯವಸ್ಥೆ ನಮ್ಮಲ್ಲಿದೆಯೇ? ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ೧೯೮೦ರಲ್ಲಿ ಪ್ರಕಟಿಸಿದ "ಇಂಗ್ಲಿಷ್-ಕನ್ನಡ ವಿಜ್ಞಾನ ಶಬ್ದಕೋಶ" (ಸಂಪಾದಕರು ಜೆ. ಆರ್. ಲಕ್ಷ್ಮಣ ರಾವ್ ಮತ್ತು ಅಡ್ಯನಡ್ಕ ಕೃಷ್ಣಭಟ್ಟ) ಮತ್ತು ನವಕರ್ನಾಟಕ ಪ್ರಕಾಶನ ೨೦೦೧ರಲ್ಲಿ ಪ್ರಕಟಿಸಿದ "ವಿಜ್ಞಾನ ಪದ ವಿವರಣಕೋಶ" (ನನ್ನ ಪ್ರಧಾನಸಂಪಾದಕತ್ವದಲ್ಲಿ ಹತ್ತು ಮಂದಿ ತಜ್ಞರ ನೆರವಿನಿಂದ) ವಿಜ್ಞಾನ ಸಂವಹನಮಾಧ್ಯಮವಾಗಿ ಕನ್ನಡವನ್ನು ನೇರ್ಪುಗೊಳಿಸುವ ದಿಶೆಯಲ್ಲಿ ಎರಡು ಪ್ರಮುಖ ಮಜಲುಗಳು.

ಇಲ್ಲಿಯವರೆಗಿನ ಸ್ಥೂಲ ಸಮೀಕ್ಷೆಯಿಂದ ಅನುಗತಿಸುವ ಅಂಶಗಳಿವು: ೧. ಕನ್ನಡವನ್ನು ಸಮರ್ಥರು ವಿಜ್ಞಾನದ ಜೀವಂತ ಮಾಧ್ಯಮವಾಗಿಯೂ ರೂಪಿಸಬಲ್ಲರು; ೨. ಆವಶ್ಯಕತೆಗೆ ಅನುಸಾರವಾಗಿ ಕನ್ನಡದಲ್ಲಿ ವಿವಿಧ ಆಕರಕೃತಿಗಳೂ ಸಹಾಯಕಗ್ರಂಥಗಳೂ ಮೈದಳೆಯುತ್ತವೆ; ೩. ಯುವಚೇತನಗಳನ್ನು ಆಕರ್ಷಿಸಿ ಕಾರ್ಯಪ್ರವೃತ್ತರಾಗುವಂತೆ

ಸಮಗ್ರ ಯೋಜನೆ ಸಿದ್ಧವಾಗಿ ಅನುಷ್ಠಾನಿಸಲ್ಪಡಬೇಕು. ಕಾಲೇಜು ತರಗತಿಗಳಿಗೆ ವಿಜ್ಞಾನ ಪಾಠಗಳನ್ನು ಕನ್ನಡದಲ್ಲಿ ಕೂಡ ವಿವರಿಸಿದ ನನ್ನ ಹಾಗೂ ಕೆಲವು ಸಹಚರರ ಅನುಭವ ಸಾರವಿದು: ಈ ವಿದ್ಯಾರ್ಥಿಗಳಿಗೆ ಸಂಕೀರ್ಣ ಪರಿಕಲ್ಪನೆಗಳು ಇಂಗ್ಲಿಷ್ ಮಾಧ್ಯಮದವರಿಗಿಂತ ಚೆನ್ನಾಗಿ ಅರ್ಥವಾಗಿ ಮುಖಗಳಲ್ಲಿ ಉಲ್ಲಾಸ ಮಿನುಗಿತು; ತರಗತಿಯಲ್ಲಿ ಜೀವಂತ ಪ್ರಶ್ನೋತ್ತರಗಳು ಲವಲವಿಕೆ ತಂದುವು; ಮೇಲಾಗಿ ಪರೀಕ್ಷೆಗಳಲ್ಲಿ ಇವರು ಉತ್ಸಾಹದಿಂದ ಭಾಗಿಗಳಾದರು. ಭಾರತೀಯ ವಿಜ್ಞಾನ ಮಂದಿರ, ಬೆಂಗಳೂರು ಏರ್ಪಡಿಸಿದ್ದ ಗಣಿತ ಒಲಿಂಪಿಯಡ್‌ನಲ್ಲಿ ಗಣಿತವನ್ನು ಕನ್ನಡದಲ್ಲಿ ಕಲಿತ ವಿದ್ಯಾರ್ಥಿ ಒಂದನೆಯ ಸ್ಥಾನ ಗಳಿಸಿದ. ಮನದ ನಿಗೂಢ ಗುಹೆಗಳಿಗೆ ಸುಲಭ ಪ್ರವೇಶ ಒದಗಿಸುವ ಏಕೈಕ ಸಾಧನವೆಂದರೆ ಮಾತೃಭಾಷಾಬೋಧನೆ.

ಯುವ ಚೇತನಗಳನ್ನು ಪ್ರೇರಿಸುವ ಪರಿ ಹೇಗೆ? ಯಾರು? ನಮ್ಮ ಪ್ರಜಾಪ್ರಭುತ್ವಾತ್ಮಕ ಸರ್ಕಾರವು ಪ್ರಜೆಗಳ ಭಾಷೆಯಾದ ಕನ್ನಡವನ್ನು ಕರ್ನಾಟಕದಲ್ಲಿ ಆಡಳಿತ ಭಾಷೆಯಾಗಿಯೂ ಶಿಕ್ಷಣ ಮಾಧ್ಯಮವಾಗಿಯೂ ಒಡನೆ ಚಲಾವಣೆಗೆ ತರಲು ಕಾನೂನಿನ ಕ್ರಮ ಕೈಗೊಳ್ಳಲೇಬೇಕು. ಕನ್ನಡಭಾಷೆಯ ಸಾಮರ್ಥ್ಯದ ಬಗ್ಗೆ ಅಥವಾ ತಜ್ಞರ ಲಭ್ಯತೆ ಬಗ್ಗೆ ಇನಿತೂ ಸಂದೇಹ ತಳೆಯಬೇಕಾಗಿಲ್ಲ. ಒಂದು ವಿಶೇಷ ಭಾಷೆಯಾಗಿ ಇಂಗ್ಲಿಷನ್ನು ಜೊತೆಯಲ್ಲೇ ಬೋಧಿಸಬೇಕು. ಮಾತೃಭಾಷೆಯಲ್ಲಿ ಜ್ಞಾನ-ವಿಜ್ಞಾನಗಳನ್ನು ಗಳಿಸುವ ವಿದ್ಯಾರ್ಥಿಗಳು ರಾಷ್ಟ್ರಸ್ವಾತಂತ್ರ್ಯಕ್ಕೆ, ಜನರ ಅಸ್ಮಿತೆಗೆ, ದೇಶಪ್ರೇಮಕ್ಕೆ ಮತ್ತು ಐಕಮತ್ಯಕ್ಕೆ ನೂತನ ಭಾಷ್ಯ ಬರೆಯಬಲ್ಲರು. ಆಗ ಮಾತ್ರ ನಮ್ಮ ದೇಶ ವಿಶ್ವಕವಿ ರವೀಂದ್ರರು "ಗೀತಾಂಜಲಿ" ೩೫ರಲ್ಲಿ ಆಶಿಸಿರುವಂತೆ ಶಿರವೆತ್ತಿ ನಡೆಯಬಲ್ಲದು (ಅನುವಾದಕರು ಜಿ. ರಾಮನಾಥ ಭಟ್ಟ):

> ಎಲ್ಲಿ ಮನಕೆ ಭಯವೆ ಇಲ್ಲ ಎಲ್ಲಿ ತಲೆಯು ಬಾಗದು
> ಎಲ್ಲಿ ಬಂಧಮುಕ್ತ ಜ್ಞಾನ ಜಗಕೆ ಬೆಳಕು ಕೊಡುವುದು
> ಎಲ್ಲಿ ಅಲ್ಪತನದಿ ಮನವು ಮನೆಯ ನಡುವೆ ಗೋಡೆಯ
> ಕಟ್ಟಿ ಜಗವ ಛಿದ್ರಗೊಳಿಸಿ ಧೂಳಿನಲ್ಲಿ ಕೆಡವದು...
> ಅಂಥ ಬಂಧಮುಕ್ತ ಸಗ್ಗದಲ್ಲಿ ನನ್ನ ನಾಡನು
> ಎಚ್ಚರಿಸುತ ಸಲಹು ತಂದೆ ಲಾಲಿಸೆನ್ನ ಮೊರೆಯನು

ಕುವೆಂಪು ಹಾಡಿದ್ದಾರೆ :

> ಪಂಪ ರನ್ನರ್ ಕುಮಾರವ್ಯಾಸ ಲಕ್ಷ್ಮೀಶ
> ಹರಿಹರಾದಿಗಳುಸಿರ್ ನಮ್ಮೊಳಿರ್ಪನ್ನೆಗಂ
> ಅಳುಕದೀ ಕನ್ನಡಂ, ಅಳಿಯದೀ ಕನ್ನಡಂ,
> ಉಳಿವುದೀ ಕನ್ನಡಂ

ಇಂದು ನಮ್ಮ ಸ್ಥಿತಿ ಏನಾಗಿದೆ ಗೊತ್ತೇ?

> ಅಪರಂಜಿ ಕೈಯಲಿದೆ ಹುಡುಕುತಿಹೆ ಬೇರೆಲ್ಲೊ—
> ಕಪಿಪುಂಗವನ ನಿಷ್ಠೆ ರೂಢಿಸಿಕೊ, ನೀಗೈವ
> ಜಪ ತಪಂಗಳು ನಿನ್ನೊಳಿಹ ನಿಧಿಯ ಶೋಧಿಸಲಿ
> ತಪನ ಸಾಮ್ರಾಜ್ಯವೇ ನಿನ್ನದೋ ಅತ್ರಿಸೂನು

(೨೦೦೩)

# ಜನಪ್ರಿಯವಿಜ್ಞಾನವಾಙ್ಮಯ ರಚನೆಯಲ್ಲಿ ಸಾಹಿತ್ಯದ ಪಾತ್ರ

ಆಧುನಿಕ ವಿಜ್ಞಾನದ ಸ್ಫೋಟ ಪಾಶ್ಚಾತ್ಯ ದೇಶಗಳಲ್ಲಿ ಘಟಿಸಿತು (೧೯-೨೦ನೆಯ ಶತಮಾನ). ಸಹಜವಾಗಿ ಅಲ್ಲಿಯ ಪರಂಪರೆಗೆ ಅನುಸಾರವಾಗಿ ಆಯಾ ಭಾಷೆಗಳೂ ವಿಜ್ಞಾನಸಂವಹನಮಾಧ್ಯಮಗಳಾಗಿ ಅರಳಿದುವು. ಹೀಗೆ ವೈಜ್ಞಾನಿಕ ಚಿಂತನೆ ಮತ್ತು ಪರಿಕಲ್ಪನೆ ಆವಶ್ಯಕತಾನುಸಾರ ಸಮಸಮವಾಗಿಯೇ ಬೆಳೆದುವು. ಅಂದರೆ, ಸಾಹಿತ್ಯ-ವಿಜ್ಞಾನ ಕೊಡು-ಕೊಳು ಪ್ರಕ್ರಿಯೆ ಸಂದರ್ಭೋಚಿತವಾಗಿ ನಡೆಯಿತು, ಮತ್ತು ಉಭಯ ಪ್ರಕಾರಗಳೂ ನಳನಳಿಸಿದುವು.

ವಿಜ್ಞಾನ ಎಂದರೇನು ? ವ್ಯಕ್ತಿಯ ಕುತೂಹಲಭರಿತಮತಿ ನಿಸರ್ಗದ ಯಾವುದೋ ವಿದ್ಯಮಾನ ಅಥವಾ ಘಟನೆಯಿಂದ ಆಕರ್ಷಿತವಾಗುತ್ತದೆ. ಇದು ಕಾರ್ಯ. ಇದನ್ನು ಆಗಗೊಳಿಸುವ ಹಿನ್ನೆಲೆ-ಕಾರಣವೊಂದಿರಬೇಕು, ಅದನ್ನು ತಾನು ಶೋಧಿಸಬೇಕು, ತನ್ಮೂಲಕ ನಿಸರ್ಗಯಂತ್ರ ಕುರಿತು ಕಿಂಚಿತ್ತಾದರೂ ಒಳನೋಟ ಗಳಿಸಬೇಕು ಮುಂತಾದ ಪ್ರೇರಣೆಗಳು ಆತನಲ್ಲಿ ಮೊಳೆಯುತ್ತವೆ. ಈ ಧಾಟಿಯಲ್ಲಿ ಮುನ್ನಡೆದು ಆ ಘಟನೆ ಬಗ್ಗೆ ಕಾರ್ಯ-ಕಾರಣ ಸಂಬಂಧ ಪತ್ತೆ ಮಾಡಿದಾಗ ಆತನಲ್ಲಿ ಮಿನುಗುವ ಅರಿವೇ ವಿಜ್ಞಾನ.

ಇದರ ಪ್ರಯೋಜನವೇನು? ಮೊದಲನೆಯದು ಆನಂದ. ಬಳಿಕ ಈ ಅರಿವನ್ನು ಪುನಃ ನಿಸರ್ಗಕ್ಕೆ ಅನ್ವಯಿಸಿ ಬದುಕನ್ನು ಸುಗಮಗೊಳಿಸಬಹುದು. ವಿಜ್ಞಾನದ ಈ ಅನ್ವಿತ ಮುಖಕ್ಕೆ ತಂತ್ರವಿದ್ಯೆ (ಟೆಕ್ನಾಲಜಿ) ಎಂದು ಹೆಸರು. ಸರಳ ಸಂಚಾರಸಾಧನಗಳಾದ ಎತ್ತಿನ ಗಾಡಿ, ಸೈಕಲ್ ಮತ್ತು ಬಸ್, ಮನೆ ಬೆಳಗುವ ವಿದ್ಯುತ್ತು, ಮುದ್ರಣಯಂತ್ರ, ಗಣಕ, ಆಕಾಶ ಯಾನ ಎಲ್ಲವೂ ತಂತ್ರವಿದ್ಯೆ ನಮಗೆ ಒದಗಿಸಿರುವ ಸೌಕರ್ಯದ ಫಲಗಳು. ತಂತ್ರವಿದ್ಯಾ ರಹಿತ ಜೀವನವನ್ನು ಇಂದು ಊಹಿಸಲೂ ಸಾಧ್ಯವಾಗದು.

ಅಂದ ಮೇಲೆ ಜನಸಾಮಾನ್ಯರ ಮನ ಮನೆಗಳಲ್ಲಿ ವಿಜ್ಞಾನದ—ಅದಕ್ಕಿಂತ ಮಿಗಿಲಾಗಿ ತಂತ್ರವಿದ್ಯೆಯ—ರೋಚಕ ಸಾಹಸ, ಉಲ್ಕಾಸದೃಶ ಅಭಿವೃದ್ಧಿ, ಮಾರಕ ಅಪಾಯಗಳು, ಭವಿಷ್ಯಸಾಧ್ಯತೆಗಳು ಮುಂತಾದವನ್ನು ತಾವು ತಿಳಿದು, ಸಾಧ್ಯವಾದರೆ, ಕೆಲವನ್ನಾದರೂ ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎಂಬ ಆಶಯ ಕೊನರುವುದು ಸಹಜ. ವಿಜ್ಞಾನದ ತಾಂತ್ರಿಕ ಪರಿಭಾಷೆಯಾಗಲೀ ಸಮೀಕರಣ ಆಲೇಖಗಳಾಗಲೀ ಜಟಿಲ ಗಣನೆಗಳಾಗಲೀ ಕಲಿತಿರದ ಇಂಥ ನೈಜ ಆಸಕ್ತರಿಗೆ ಅದರ ವರಗಳನ್ನು ಶ್ರುತಪಡಿಸುವುದು ಹೇಗೆ? ಇದು ಸಮಾಜದ ಕರ್ತವ್ಯವಲ್ಲವೇ?

ಹೌದು. ಏಕೆಂದರೆ ಜ್ಞಾನ-ವಿಜ್ಞಾನ ನಿಂತ ನೀರಾಗಬಾರದು:

> ಹಳೆನೀರು ಹೊರಹರಿದು ಹೊಸನೀರು ಬರಬೇಕು
> ಕೊಳೆಕಳೆದ ಎಳೆಜೀವ ನಳನಳಿಸುತಿರಬೇಕು
> ಕಳವಳವ ನೀಗಿ ಹರಿಸದಲಿ ಸಾಗಲು ಸದಾ
> ಇಳೆಯ ತತ್ತ್ವವನರಿತು ಮುನ್ನಡೆಯೊ ಅತ್ರಿಸೂನು

ವಿಜ್ಞಾನದ ಕೆಲವು ಸಾಧನೆಗಳನ್ನು ಗಮನಿಸಬಹುದು: ವಿಶ್ವವೆಂದರೆ ನಾವಿರುವ ಭೂಮಿ ಮಾತ್ರವಲ್ಲ, ಭೂಮಿ ಸದಸ್ಯಗ್ರಹವಾಗಿರುವ ಸೌರವ್ಯೂಹವಲ್ಲ, ಸೂರ್ಯನ ನೆಲೆಯಾದ

ಆಕಾಶಗಂಗೆಯೂ ಅಲ್ಲ, ಇತ್ಯಾದಿ ಮೂಲಭೂತ ತಥ್ಯಗಳು, ಸಕಲ ವಿಜ್ಞಾನಗಳ ಮಾತೃ ಎಂಬ ಗೌರವಕ್ಕೆ ಸಕಾರಣವಾಗಿಯೇ ಭಾಜನವಾಗಿರುವ, ಖಗೋಳವಿಜ್ಞಾನದ ಕೊಡುಗೆ. ಇಂಥ ಬೃಹದ್ವಿಶ್ವವನ್ನು ನಿಯಂತ್ರಿಸುವ ಆಂತರಿಕ ವಿಧಿನಿಯಮಗಳೇನಾದರೂ ಇವೆಯೇ? ತೋರ್ಕೆಗೆ ತೀರ ಸರಳವಾದ ಈ ಪ್ರಶ್ನೆಗೆ ಕಾಲದಿಂದ ಕಾಲಕ್ಕೆ ಲಭಿಸಿರುವ ಉತ್ತರಗಳು ವಿಜ್ಞಾನದ ವಿವಿಧ ವಿಭಾಗಗಳ ಜನನಕ್ಕೆ ಕಾರಣವಾಗಿವೆ : ಭೌತ-ಜೀವವಿಜ್ಞಾನಗಳು, ವೈದ್ಯಕೀಯ, ಆಕಾಶಯಾನ, ಗಣಕವಿಜ್ಞಾನ ಇತ್ಯಾದಿ. ನಿಸರ್ಗ ಎಂದೂ ಯಾರಿಗೂ ಎಲ್ಲಿಯೂ ಅಳತೆಗೆಟುಕದ ಆನೆ, ಇತ್ತ ಮನುಕುಲದ ಆದಿಯಿಂದ ಈ ತನಕ ಬಂದಿರುವ ಹಾಗೂ ಭವಿಷ್ಯದಲ್ಲಿ ಬರಲಿರುವ ಸಮಸ್ತ ವಿಜ್ಞಾನಿಗಳೂ ಜನ್ಮಾಂಧರು. ಈ ಕುರುಡರಿಗೆ ಆನೆಯ ಸಮ್ಯಗ್ದರ್ಶನ ಎಂದೂ ಸಿದ್ಧಿಸದು :

> ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿದಿಹೆನೆಂದಡೆ
> ಸಿಕ್ಕದೆಂಬ ಬಳಲಿಕೆಯ ನೋಡಾ !
> ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ
> ಕಾಣದುದ ಕಾಣಬಹುದು ಗುಹೇಶ್ವರಾ!

ಯಾವ ವಿಜ್ಞಾನಿಯೂ ನಿರ್ವಾತದಲ್ಲಿ ಕೆಲಸವೆಸಗಲಾರ. ಮೊದಲು ತನ್ನ ಆವಿಷ್ಕಾರಗಳು ಸಮಾನಮನಸ್ಕರಲ್ಲಿ ಏನು ಪ್ರತಿಕ್ರಿಯೆ ಉಂಟುಮಾಡುತ್ತವೆ ಎಂದು ತಿಳಿಯುವ ಬಯಕೆ ಆತನಿಗುಂಟು. ಸಂಶೋಧನ ಪ್ರಬಂಧಗಳ ಮೂಲಕ ಈ ಕ್ರಿಯೆ ನಡೆಯುತ್ತದೆ. ಇಲ್ಲಿ ಒಪ್ಪಿಗೆ ಪಡೆದವನ್ನು ಜನಸಾಮಾನ್ಯರಿಗೆ ತಿಳಿಸಬೇಕೆಂಬ ಸಹಜ ಕುತೂಹಲ ಆತನಲ್ಲಿ ಅಥವಾ ಆತನ ಅನುಚರರಲ್ಲಿ ಮೊಳೆಯುತ್ತದೆ. ಇಲ್ಲಿಯ ಸಂವಹನಮಾಧ್ಯಮ ಜನಪ್ರಿಯ ಭಾಷೆಯಾಗಬೇಕೇ ವಿನಾ ತಾಂತ್ರಿಕ ಪರಿಭಾಷೆಯಲ್ಲ. ಹೀಗೆ ಆವಶ್ಯಕತೆಯ ಅನಿವಾರ್ಯ ಶಿಶುವಾಗಿ ಜನಪ್ರಿಯವಿಜ್ಞಾನವಾಙ್ಮಯ ರೂಪುಗೊಳ್ಳುತ್ತದೆ.

೨೦ನೆಯ ಶತಮಾನದ ಪೂರ್ವಾರ್ಧದ ಪರ್ವದಿನಗಳಂದು ಇಂಗ್ಲೆಂಡ್ ಮತ್ತು ಯೂರೋಪ್‌ಖಂಡದ ವಿವಿಧ ದೇಶಗಳಲ್ಲಿ ಮೂಲಭೂತ ಸಂಶೋಧನೆಗಳ ಮಹಾಪೂರವೇ ಹರಿದು ವಿಜ್ಞಾನದಿಗಂತ ಊಹಾತೀತವಾಗಿ ವಿಸ್ತರಣೆಗೊಂಡಿತು. ಗತಯುಗಗಳ ಕಲ್ಪನಾವಿಲಾಸಗಳನ್ನು ಮೀರಿ ವರ್ತಮಾನಕಾಲದ ವಾಸ್ತವಸಾಧನೆಗಳು ದಿನದಿನ ಎಂಬಂತೆ ಹೊಸ ಬೆರಗನ್ನು ಬೀರಿದುವು. ಇವೆಲ್ಲವುಗಳ ಸಾರವಾಗಿ ವಿಜ್ಞಾನಸೌಧದ ಮೂರು ಆಧಾರಸ್ತಂಭಗಳು (ಆದ್ಯುಕ್ತಿಗಳು axioms) ಸ್ಪಷ್ಟವಾದುವು :

೧. ನಿಸರ್ಗದಲ್ಲಿ ಕ್ರಮವಿದೆ.

೨. ಈ ಕ್ರಮವನ್ನು ಗುರುತಿಸಿ, ಅರಿತು, ಅರ್ಥವಿಸಿ, ವ್ಯಾಖ್ಯಾನಿಸುವ ಸಾಮರ್ಥ್ಯ ಮಾನವಮತಿಗಿದೆ.

೩. "ಭಗವಂತ ಎಂದೂ ದಾಳ ಒಗೆಯುವುದಿಲ್ಲ."

ಮೂರನೆಯ ಆದ್ಯುಕ್ತಿ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಅವರ ಉದ್ಗಾರ. ಇಲ್ಲಿಯ ರೂಪಕಭಾಷೆಯಲ್ಲಿ "ಭಗವಂತ" ನಿಸರ್ಗವನ್ನೂ "ದಾಳ" ಜೂಜು ಅಥವಾ ಕಪಟದ್ಯೂತವನ್ನೂ ಪ್ರತೀಕಿಸುತ್ತವೆ. ಸಾರಾಂಶವಿಷ್ಟು : ನಿಸರ್ಗದ ಶಿಶುವಾದ ಮನುಷ್ಯ

ತನ್ನ ತಾಯಿಯೊಂದಿಗೆ ಆಡುವ ಆಟವೇ ವಿಜ್ಞಾನ : ಇದರಲ್ಲಿ ನಿಸರ್ಗದ ಪಾತ್ರ ಪೂರ್ತಿ ನಿರ್ವಿಕಾರ, ನಿರಪೇಕ್ಷ ಮತ್ತು ನಿಷ್ಕಪಟ; ಮುಪ್ಪಿನ ಷಡಕ್ಷರಿ ಹಾಡಿರುವಂತೆ—

ಅವರವರ ದರುಶನಕೆ ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ
ಅವರವರ ಭಾವಕ್ಕೆ ಅವರವರ ಪೂಜೆಗಂ
ಅವರವರಿಗೆಲ್ಲ ಶಿವ ನೀನೊಬ್ಬನೆ !

ಈ "ಅವರವರ" ಸಾಲಿನಲ್ಲಿ ಅಗ್ರಮಾನ್ಯರು ಜೀನ್ಸ್, ರಸಲ್, ಎಡಿಂಗ್ಟನ್, ಕಾಲ್ಡರ್, ಗ್ಯಾಮೊ, ವೆಲ್ಸ್, ಅಸಿಮಾವ್ ಮೊದಲಾದ ಶ್ರೇಷ್ಠ ಸಂಶೋಧಕರು. ಐನ್‌ಸ್ಟೈನ್ ಕೂಡ ಸೇರಿದ್ದಾರೆ. ಮುಖ್ಯವಾಗಿ ಇಂಗ್ಲಿಷಿನಲ್ಲಿ ಜನಪ್ರಿಯ ವಿಜ್ಞಾನವಾಙ್ಮಯ ರಚಿಸಿ (೧೯೪೦ರ ದಶಕ), ಇಂಗ್ಲಿಷ್ ಭಾಷೆಗೆ ನೂತನ ಆಯಾಮ ನೀಡಿದ ಹಿರಿಯರಿವರು. ಇವರೆಲ್ಲರೂ ನೂತನ ಸಂಶೋಧನೆಗಳ ಸಾರಸರ್ವಸ್ವವನ್ನು ತಾಂತ್ರಿಕ ಪರಿಭಾಷೆಯಲ್ಲಿ ಸ್ವಾಂಗೀಕರಿಸಿ ಜನಪ್ರಿಯ ಭಾಷೆಯಲ್ಲಿ ಅದನ್ನು ಪುನಾರೂಪಿಸಿದ ಸೃಜನಶೀಲ ಲೇಖಕರು, ಮತ್ತು ಇಂಥ ಒಂದು ಜನಕೈಂಕರ್ಯದ ಬಗ್ಗೆ ಅಪಾರ ವಿಶ್ವಾಸ ತಳೆದಿದ್ದವರು.

ವಿಜ್ಞಾನದ ಜಟಿಲ ಪರಿಕಲ್ಪನೆಗಳನ್ನು ಜನಪ್ರಿಯ ಶೈಲಿಯಲ್ಲಿ ನಿರೂಪಿಸಲು ಒಬ್ಬ ಲೇಖಕನಿಗೆ ಸಾಹಿತ್ಯ ಕುರಿತಂತೆ ಸೃಜನಶೀಲ ಪ್ರಭುತ್ವ ಅಗತ್ಯ. ನಿಜಕ್ಕೂ ಒಬ್ಬ ಸಾಹಿತಿಗಿಂತ ಹೆಚ್ಚಿನದು ಇದಾಗಿರಬೇಕು.

ಸೂತ್ರರೂಪದಲ್ಲಿ ಹೇಳುವುದಾದರೆ, ಒಬ್ಬ ಜನಪ್ರಿಯವಿಜ್ಞಾನ ಲೇಖಕ ಚತುರ್ಥಾಂಶಗಳ ಸಂಕೀರ್ಣ ಸಂಯುಕ್ತವಾಗಿರಬೇಕು : ೧. ವಿಷಯಪ್ರಾವೀಣ್ಯ—ಆತ ತಾಕತ್ತಿನ ತಾಣದಿಂದ ಬರೆಯತಕ್ಕದ್ದು. ೨. ಭಾಷಾಪ್ರಭುತ್ವ—ಭಾಷೆಯ ಸಾಧ್ಯತೆ ಸೀಮಿತತೆಗಳನ್ನು ನಿರಪೇಕ್ಷವಾಗಿ ಗ್ರಹಿಸಿ ಅದರ ಜಾಯಮಾನಕ್ಕೆ ಒಪ್ಪುವಂತೆ ಹೊಸ ಪ್ರಯೋಗಗಳನ್ನು ಮಾಡಲು ಮತ್ತು ಭಾಷೆಗೆ ಹೊಸ ಆಯಾಮ ನೀಡಲು ಆತ ಶಕ್ತನಾಗಿರತಕ್ಕದ್ದು. ೩. ಪರಿಪೂರ್ಣ ನಿಷ್ಠೆ—ತಾನು ಕೈಗೊಂಡ ಕರ್ತವ್ಯ ಕುರಿತು ಉತ್ಸಾಹ-ಉಲ್ಲಾಸಗಳ ಸಾಕಾರ ಮೂರ್ತಿ ಆತನಾಗಿರತಕ್ಕದ್ದು. ೪. ಸಮಕಾಲೀನ ಪ್ರಜ್ಞೆ—ಆತನಿಗೆ ವರ್ತಮಾನ ವಿಜ್ಞಾನದ ಸ್ಥಿತಿ-ಗತಿ ಬಗ್ಗೆ ಅರಿವು ಇರತಕ್ಕದ್ದು.

ಈ ಯಾವುದೇ ಒಂದರಲ್ಲಿ ಭರವಸೆ ಇಲ್ಲದಾತ ಜನಪ್ರಿಯವಿಜ್ಞಾನ ನಿರ್ಮಾಣ ಕಾರ್ಯದಿಂದ ದೂರವಿರುವುದು ಸರ್ವಕ್ಷೇಮ. ಆದರೆ ವಾಸ್ತವದಲ್ಲಿ ಹೀಗಾಗುತ್ತಿಲ್ಲ: ಅಗ್ಗದ ಇಂಗ್ಲಿಷ್ ಪುಸ್ತಕ ಅಥವಾ ಪಾಕ್ಷಿಕಗಳಿಂದ, ಇಲ್ಲವೇ ಅಂತರಜಾಲದಿಂದ ನೇರ ಕದ್ದು ಅರೆಬೆಂದ ಭಾವನೆಗಳನ್ನು ಅಪರಿಪೂರ್ಣವಾಗಿ ಗ್ರಹಿಸಿ, ತಮ್ಮ ಸೀಮಿತ ಕನ್ನಡ ಜ್ಞಾನದ ಮಿತಿಯೊಳಗೆ ಅವನ್ನು ಮನಬಂದಂತೆ ಹೊಸೆದು, ಬೇಕಾಬಿಟ್ಟಿ ಮುದ್ರಿಸಿ "ಕನ್ನಡದ ಸೇವೆ" ಒಪ್ಪಿಸುವುದೇ ನಿಯಮವಾಗಿದೆ! ಉದ್ದೇಶ ? ಪ್ರಚಾರ, ಪ್ರಶಸ್ತಿ, ಬಡ್ತಿ, ವಿದೇಶಯಾನ ಇತ್ಯಾದಿ. ಇವು ಕಲ್ಪನಾವಿಲಾಸಗಳಲ್ಲ, ಬದಲು, ೧೯೪೫ರಿಂದಲೂ ವಿಜ್ಞಾನ ಬೋಧನೆ-ವಾಙ್ಮಯ ನಿರ್ಮಾಣಕ್ರಿಯೆಯಲ್ಲಿ ಪ್ರತ್ಯಕ್ಷ ಭಾಗಿಯಾಗುತ್ತಿರುವ ನನ್ನ ಪ್ರತ್ಯಕ್ಷ ಅನುಭವದಿಂದ ಆಯ್ದ ಕೆಲವೇ ಹರಳುಗಳು.

ಇಂಥ "ಸೇವೆಗಳ" ದುಷ್ಫಲ ಐದು ಬಗೆಯದು : ೧. ಕಪ್ಪುಹಣ ಬಿಳಿಹಣವನ್ನು

ವಿಸ್ಥಾಪಿಸುತ್ತದೆ (ಗ್ರೆಷಾಮನ ನಿಯಮ); ೨. ಶುದ್ಧವಾಙ್ಮಯ ಜನಪ್ರಿಯವಾಗದೇ ಸೊರಗುತ್ತದೆ; ೩. ಕನ್ನಡ ಭಾಷೆ ತನ್ನ ನಿಖರತೆಯನ್ನು ಕಳೆದುಕೊಳ್ಳುತ್ತದೆ; ೪. ಅನ್ಯ ಭಾಷೆಗಳಲ್ಲಿ ಪ್ರಕಟವಾಗುವ ಉತ್ಕೃಷ್ಟ ಗ್ರಂಥಗಳ ಕನ್ನಡಾನುವಾದಗಳು ತೀರ ಪೇಲವ ಮತ್ತು ಕೃತಕವಾಗಿರುತ್ತವೆ; ೫. ನವಲೇಖಕರು ಈ ಕ್ಷೇತ್ರಕ್ಕೆ ಕಾಲಿಡಲು ಅಂಜುತ್ತಾರೆ.

ಕನ್ನಡಜನಪ್ರಿಯವಿಜ್ಞಾನವಾಙ್ಮಯದ ಹರಿಕಾರರಾಗಿದ್ದು ಹೊಸ ಹಾದಿ ನಡೆದು ರೂಪಿಸಿದ ಆರ್. ಎಲ್. ನರಸಿಂಹಯ್ಯ (೧೯೦೨-೬೯), ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ (೧೯೦೧-೭೨) ಮೊದಲಾದವರ ಹೆಸರು ಮತ್ತು ಕೃತಿ ಇಂದಿನ ಬಹುತೇಕ ತಾರಾಮೌಲ್ಯಯುತ (ಸ್ಟಾರ್‌ವೇಲ್ಯೂ ಇರುವ) ಲೇಖಕರಿಗೆ ತೀರ ಅಪರಿಚಿತ, ಆ ಮಹನೀಯರು ಮಾಡಿದ ಪ್ರಯೋಗಗಳು ಅನುಪಯುಕ್ತ, ಸ್ವಂತ ಪ್ರಯೋಗ ಮಾಡಲು ವ್ಯವಧಾನವಿಲ್ಲ! ಏಕೆಂದರೆ (ಸರ್ವಜ್ಞನ ಕ್ಷಮೆ ಕೋರಿ)—

> ಅಚ್ಚುಸಾಲೆಗಳುಂಟು ವೆಚ್ಚಕ್ಕೆ ಹೊನ್ನುಂಟು
> ಮೆಚ್ಚುವಾ ವಂದಿಮಾಗಧರ ದಂಡುಂಟು
> ಕಿಚ್ಚು ಹಚ್ಚೆಂದ ಸ್ವರ್ಗಕ್ಕೆ ಸರ್ವಜ್ಞ

ನನ್ನ ವೃತ್ತಿ ಜೀವನದ ವೇಳೆ ಇಬ್ಬರು ಭಾರತೀಯ ನೊಬೆಲ್ ಪ್ರಶಸ್ತಿ ಪುರಸ್ಕೃತ ವಿಜ್ಞಾನಿಗಳನ್ನು ಅವರವರ ನೆಲೆಗಳಲ್ಲೇ ಬೇರೆಬೇರೆಯಾಗಿ ಭೇಟಿ ಮಾಡಿ ಸುದೀರ್ಘ ಸಂದರ್ಶನ ಪಡೆಯುವ ಸುಯೋಗ ನನಗೊದಗಿತ್ತು: ಚಂದ್ರಶೇಖರ ವೆಂಕಟರಾಮನ್ (೧೮೮೮-೧೯೭೦)—ಬೆಂಗಳೂರಿನಲ್ಲಿ (೧೯೬೮); ಮತ್ತು ಸುಬ್ರಹ್ಮಣ್ಯನ್ ಚಂದ್ರಶೇಖರ್ (೧೯೧೦-೯೫)—ಚಿಕಾಗೋದಲ್ಲಿ (೧೯೯೫). ಇಬ್ಬರ ಮಾತೃಭಾಷೆಯೂ ತಮಿಳು. ನಮ್ಮ ಮಾತುಕಥೆ ವೇಳೆ ನಾನು ಉಭಯರನ್ನೂ ಪ್ರತ್ಯೇಕವಾಗಿ ಕೇಳಿದ ಒಂದು ಪ್ರಶ್ನೆ : "ಪಾಶ್ಚಾತ್ಯ ಮಹಾವಿಜ್ಞಾನಿಗಳು ಕಲಿತದ್ದು, ಚಿಂತಿಸಿದ್ದು ಮತ್ತು ತಮ್ಮ ಸಂಶೋಧನನಿಬಂಧಗಳನ್ನು ರಚಿಸಿದ್ದು ಅವರವರ ತಾಯಿನುಡಿಗಳಲ್ಲಿ ಅಥವಾ ಅಲ್ಲಲ್ಲೇ ಅರಳಿದ್ದ ಗ್ರೀಕ್, ಲ್ಯಾಟಿನ್ ಮುಂತಾದ ಅಭಿಜಾತ ಭಾಷೆಗಳಲ್ಲಿ. ನೀವಾದರೋ ಇಂಥ ಸೃಜನಶೀಲ ಶೋಧನೆ ಮಾಡಿದ್ದು ಪರಭಾಷೆ ಇಂಗ್ಲಿಷಿನಲ್ಲಿ. ಈ ಪರಕೀಯ ಮಾಧ್ಯಮದ ಕಾರಣವಾಗಿ ನಿಮ್ಮ ಪ್ರತಿಭಾವಿಕಾಸಕ್ಕೆ ಏನಾದರೂ ಅಡಚಣೆ ಉಂಟಾಯಿತೇ? ನಿಮ್ಮ ಮಾತೃಭಾಷೆಯಲ್ಲೇ ಓದಿ ಸಂಶೋಧನೆಗೈದಿದ್ದರೆ ಇನ್ನಷ್ಟು ಅಧಿಕಕಾರ್ಯ ಸಾಧಿಸಬಹುದಿತ್ತು ಎಂಬ ಭಾವನೆ ನಿಮಗೆಂದಾದರೂ ಬಂದುದುಂಟೇ?"

ರಾಮನ್ ನುಡಿದರು, "ತಾತ್ತ್ವಿಕವಾಗಿ ನಿಮ್ಮ ಪ್ರಶ್ನೆ ಸರಿಯಾಗಿದೆ. ಆದರೆ ನನ್ನ ಓರಗೆಯವರಿಗೆ, ಅಂದಿನ ದಾಸರಾಷ್ಟ್ರ ಭಾರತದಲ್ಲಿ, ಬೇರೆಯ ಆಯ್ಕೆ ಇರಲಿಲ್ಲ. ಈಚೆಗಿನ ವರ್ಷಗಳಲ್ಲಿ [೧೯೫೦ರ ದಶಕದಿಂದೀಚೆಗೆ], ವಿಶೇಷವಾಗಿ, ನನ್ನ ಸುತ್ತಮುತ್ತಲಿನ ಸಾಮಾನ್ಯ ಮಂದಿಯೊಂದಿಗೆ ವಿಜ್ಞಾನವಿಷಯಗಳನ್ನು ಕುರಿತು ಮಾತಾಡುವಾಗ, ಮತ್ತು ಪಾಶ್ಚಾತ್ಯರಿಗೆ ತಮ್ಮ ಭಾಷೆ ಬಗ್ಗೆ ಇರುವ ಅಭಿಮಾನ ಗಮನಿಸುವಾಗ, ತಮಿಳಿನಲ್ಲೋ ಕನ್ನಡದಲ್ಲೋ ನಾನು ಕಲಿತು ಮಾತಾಡಿ ಪ್ರಕಟಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅನ್ನಿಸಿದ್ದುಂಟು."

ಚಂದ್ರಶೇಖರ್, "ಹೌದು, ಮೈಖೇಲ್ ಫ್ಯಾರಡೇ (೧೭೯೧-೧೮೬೭) ಇಂಗ್ಲೆಂಡಿಗ,

ಬಡವ. ಅಂದಿನ ಬೋಧನಮಾಧ್ಯಮವಾದ ಲ್ಯಾಟಿನ್ ಭಾಷೆ ಆತನಿಗೆ ಅಪ್ರವೇಶ್ಯ. ಅವನ ವೃತ್ತಿ ವೇಳೆ ಅವನಿಗೆ ಇಂಗ್ಲಿಷಿನಲ್ಲಿ ಮುದ್ರಣಗೊಂಡಿದ್ದ ಒಂದು ವಿಜ್ಞಾನಲೇಖನ ಅಕಸ್ಮಾತ್ತಾಗಿ ದೊರೆಯಿತು! ಓದಿದ, ಗ್ರಹಿಸಿದ, ಮಿಕ್ಕುದು ಈಗ ಇತಿಹಾಸ! ನಾನು ಮದ್ರಾಸಿನಲ್ಲಿ ಓದುತ್ತಿದ್ದಾಗ ಎಲ್ಲವೂ ಇಂಗ್ಲಿಷ್‌ಮಯ. ಬ್ರಿಟಿಷ್ ಆಧಿಪತ್ಯ. ಜನ ಒಪ್ಪಿದರು. ವಿದ್ಯಾರ್ಥಿಗಳಾದ ನಾವು ಈ ನಿಲವನ್ನು ಪ್ರಶ್ನಿಸಲೇ ಇಲ್ಲ. ಸೈದ್ಧಾಂತಿಕವಾಗಿ ಮಾತೃಭಾಷೆಯೇ ಸರ್ವಶ್ರೇಷ್ಠ ಎಂಬುದನ್ನು ರಶ್ಯಾ, ಜಪಾನ್ ಮೊದಲಾದ ದೇಶಗಳು ತೋರಿಸಿಕೊಟ್ಟಿವೆ. ಐತಿಹಾಸಿಕ ಕಾರಣಗಳಿಂದಾಗಿ ಇಂಗ್ಲಿಷಿಗೆ ಅತಿಶಯ ಪ್ರಾಮುಖ್ಯ ಬಂದಿದೆಯೇ ವಿನಾ ಅದರ ಯಾವುದೇ ಆಂತರಿಕ ತ್ರಾಣದಿಂದ ಅಲ್ಲ."

ಈ ಕೊನೆಯ ಭಾವನೆಯನ್ನು ಗಮನಿಸಬೇಕು: ಯಾವುದೇ ಭಾಷೆಯ ತ್ರಾಣ ಅದನ್ನು ಬಳಸುವ ಜನರಿಂದ ಅದಕ್ಕೆ ಒದಗುತ್ತದೆ, ಹೊರತು, ಅದರಲ್ಲಿ ನಿಹಿತವಾಗಿರುವ ವಿಶಿಷ್ಟ ಗುಣದಿಂದ ಅಲ್ಲ.

ಚಂದ್ರಶೇಖರ್ ಸ್ವಹಸ್ತದಲ್ಲಿ ಬರೆದ ಒಂದು ಇಂಗ್ಲಿಷ್ ಸಂದೇಶವನ್ನು ನನಗೆ ಕೊಟ್ಟರು. ಅದರ ಪೂರ್ಣ ಪಾಠ : "The pursuit of science has often been compared to the scaling of mountains, high and not so high. But who amongst us can hope, even in imagination, to scale the Everest and reach its summit when the sky is blue and the air is still, and in the stillness of the air, survey the entire Himalayan range in the dazzling white of the snow stretching to infinity? None of us can hope for a comparable vision of Nautre and of the Universe around us. But there is nothing mean or lowly in standing in the valley below and awaiting the sun to rise over Kanchenjunga."

ಇದರ ಕನ್ನಡಾನುವಾದ : "ವಿಜ್ಞಾನಾನುಶೀಲನೆಯನ್ನು ಹೆಚ್ಚಾಗಿ ಪರ್ವತಾರೋಹಣಕ್ಕೆ ಹೋಲಿಸುವುದುಂಟು—ಸಾಕಷ್ಟು ಎತ್ತರದ ಬೆಟ್ಟಗಳನ್ನೂ ಅಷ್ಟೇನು ಎತ್ತರದವಲ್ಲದ ಗುಡ್ಡಗಳನ್ನೂ ಹತ್ತುವುದು. ಆದರೆ ನಮ್ಮ ಪೈಕಿ ಯಾರು ತಾನೇ ಆಕಾಶ ನೀಲವಾಗಿದ್ದು, ಮಾರುತ ನಿಸ್ಪಂದವಾಗಿರುವಾಗ, ಹಿಮಾಲಯ ಏರಿ, ಶಿಖರ ತಲಪಿ, ಅನಂತಕ್ಕೆ ವ್ಯಾಪಿಸಿಕೊಂಡಿರುವ ಮಂಜಿನ ಜ್ವಲಂತ ಪರಿಶುಭ್ರತೆಯಲ್ಲಿ, ಸಮಗ್ರ ಹಿಮಾಲಯಶ್ರೇಣಿಯನ್ನೇ ಸರ್ವೇಕ್ಷಿಸಲು ಕಲ್ಪನೆಯಲ್ಲಾದರೂ ಹವಣಿಸಿಯಾನು? ನಿಸರ್ಗ ಮತ್ತು ನಮ್ಮ ಸುತ್ತಲಿನ ವಿಶ್ವ ಕುರಿತಂತೆ ತತ್ಸದೃಶ ದರ್ಶನ ಲಭಿಸೀತೆಂದು ನಾವು ಯಾರೂ ಆಶಿಸಲಾರೆವು. ಆದರೆ ತಳದ ಕಣಿವೆಯಲ್ಲಿ ನಿಂತು, ಕಾಂಚನಜುಂಗಾಶೃಂಗಕ್ಕೆ ಆರೋಹಿಸುತ್ತ ಬರುವ ಸೂರ್ಯನನ್ನು ಪ್ರತೀಕ್ಷಿಸುವುದರಲ್ಲಿ ಹೀನವಾದುದಾಗಲೀ ದೀನವಾದುದಾಗಲೀ ಏನೂ ಇಲ್ಲ."

ಈಗ (೨೦೦೪) ಕನ್ನಡನಾಡಿನಲ್ಲಿ ಆಗಬೇಕಾದದ್ದೇನು? ೧. ಕರ್ನಾಟಕದಲ್ಲಿ ಸರ್ವಶಿಕ್ಷಣ ಮತ್ತು ಸಮಗ್ರ ಆಡಳಿತ ಮಾಧ್ಯಮ ಕನ್ನಡವಾಗತಕ್ಕದ್ದು. ೨. ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕು. ಕನ್ನಡದಲ್ಲಿ ಆಗ ವಿಜ್ಞಾನವನ್ನೂ ಒಳಗೊಂಡಂತೆ ಪಠ್ಯಪುಸ್ತಕ, ಆಕರಗ್ರಂಥ, ಅನುವಾದಕೃತಿ, ತಾಂತ್ರಿಕ ನಿಯತಕಾಲಿಕೆ ಮುಂತಾದವು

ಪ್ರಕಟವಾಗುತ್ತವೆ, ಮತ್ತು ಅವುಗಳಿಗೆ ಸ್ತಿಮಿತ ಬೇಡಿಕೆ ಇರುತ್ತದೆ. ೫. ವಿಜ್ಞಾನಲೇಖನ ಕ್ರಿಯೆಗೆ ಪ್ರೀತಿಯಿಂದ ಮುಂಬರುವವರಿಗೆ—ಇವರು ವಿಜ್ಞಾನದ ವಿದ್ಯಾರ್ಥಿಗಳಾಗಿರಲೇ ಬೇಕು, ಸಾಹಿತ್ಯವಿದ್ಯಾರ್ಥಿಗಳಿಗೆ ಇದು ಸಾಧ್ಯವಾಗದು—ಅಭಿಜಾತ ಕನ್ನಡದಲ್ಲಿ ಸಮರ್ಪಕ ಶಿಕ್ಷಣ ನೀಡಬೇಕು. ಕೇವಲ ಕನ್ನಡದ ವಿದ್ಯಾರ್ಥಿ ಅಥವಾ ಮಾತೃಭಾಷೆ ಕನ್ನಡ ಎಂಬ ಕಾರಣದಿಂದ ಈ ಸಾಮರ್ಥ್ಯ ಒದಗುವುದಿಲ್ಲ. ೬. ಇಂಥ ಒಂದು ಸರಸ್ವತೀಕೈಂಕರ್ಯ ದಲ್ಲಿ ಯೋಗ್ಯತೆ, ನಿಷ್ಠೆ ಮತ್ತು ನಂಬಿಕೆ ಇರುವವರನ್ನು ಮಾತ್ರ ಇದಕ್ಕೆ ಆಯಬೇಕು. ೭. ಮೇಲಿನ ಆರು ಮುಖ್ಯ ಆವಶ್ಯಕತೆಗಳ ಜೊತೆಗೆ, ಲೇಖನಕ್ರಿಯೆಯ ವೇಳೆ ತಾವು ಅನುಭವಿ ಸಿದ ಆನಂದವನ್ನು ಸಮಾಜಕ್ಕೆ ಹಿಂತಿರುಗಿಸುವುದು ತಮ್ಮ ಕರ್ತವ್ಯ ಎಂಬ ಪ್ರಜ್ಞೆ ಇರು ವವರು ಮಾತ್ರ ಈ ಕೆಲಸ ನಿರ್ವಹಿಸಲು ಶಕ್ತರು.

ಚಿಕ್ಕಂದಿನಿಂದಲೇ ಸಾಹಿತ್ಯ-ಸಂಗೀತ-ವಿಜ್ಞಾನತ್ರಯವನ್ನು ಪ್ರೀತಿಯಿಂದ ಅಭ್ಯಸಿಸಿ (ನಾನು ಗಣಿತ ಎಂಎ ಪದವೀಧರ) ಕಾಲೇಜು ಉಪನ್ಯಾಸಕನಾಗಿ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಗಣಿತ ಮತ್ತು ಖಗೋಳವಿಜ್ಞಾನಗಳನ್ನು ಬೋಧಿಸಿದ್ದೇನೆ, ಉಭಯ ಮಾಧ್ಯಮಗಳಲ್ಲಿಯೂ ಜನಪ್ರಿಯ ಮತ್ತು ತಾಂತ್ರಿಕ ಕೃತಿಗಳನ್ನು ರಚಿಸಿದ್ದೇನೆ, ರಚಿಸು ತ್ತಲೂ ಇದ್ದೇನೆ, ಇಂಗ್ಲಿಷಿನಿಂದ ಕನ್ನಡಕ್ಕೆ ವಿಜ್ಞಾನಕೃತಿಗಳನ್ನು ಅನುವಾದಿಸಿದ್ದೇನೆ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಶ್ವಕೋಶದ ವಿಜ್ಞಾನಸಂಪಾದಕನಾಗಿದ್ದೆ (೧೯೬೯-೮೬), ನವಕರ್ನಾಟಕ ಇಂಗ್ಲಿಷ್-ಕನ್ನಡ ಪದವಿವರಣಕೋಶದ (ಪ್ರಕಟಣೆ ೨೦೦೧) ಪ್ರಧಾನ ಸಂಪಾದಕನಾಗಿದ್ದೆ. ನನ್ನ ಖಚಿತ ಅನುಭವ ಮತ್ತು ನಂಬಿಕೆ ಇದು : ನಮ್ಯತೆ ನವ್ಯತೆ ಭವ್ಯತೆಗಳಲ್ಲಿ ಪ್ರಪಂಚದ ಯಾವ ಭಾಷೆಯ ಮುಂದೆಯೂ ಕನ್ನಡ ತಲೆ ತಗ್ಗಿಸಬೇಕಾಗಿಲ್ಲ. ಇದನ್ನು ಅನುಭವದಿಂದ ಕಂಡುಕೊಂಡು ಅನುಷ್ಠಾನಿಸುವ ಅಸ್ಮಿತೆ ನಮಗಿರಬೇಕು ಮಾತ್ರ.

ನನ್ನ ಸ್ಪಷ್ಟ ಅಭಿಪ್ರಾಯವನ್ನು ಮುಂದಿನ ಸೂತ್ರವಾಕ್ಯ ಬಿಂಬಿಸುತ್ತದೆ: ಸಾಹಿತ್ಯರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಸಾಹಿತ್ಯ ಕುರುಡು. ಸಾಹಿತ್ಯ-ವಿಜ್ಞಾನ ಸಾಮರಸ್ಯವೇ ಋಜುಜೀವನದ ಭದ್ರ ಬುನಾದಿ.

(೨೦೦೪)

# ವಿಜ್ಞಾನದ ಮೂಲ ಮೂಢನಂಬಿಕೆಯೇ ?

**ಮೂಢನಂಬಿಕೆ ಎಂದರೇನು?**

ಹಿರಿಯ ಚಿಂತನಶೀಲರೂ ತತ್ತ್ವಶಾಸ್ತ್ರಜ್ಞರೂ ಆಗಿರುವ ಎಸ್. ಶ್ರೀನಿವಾಸಾಚಾರ್ ಒಮ್ಮೆ ಹೇಳಿದರು, "ವಿಜ್ಞಾನಪ್ರವಾಹದ ಒರತೆಯನ್ನು ಮೂಢನಂಬಿಕೆಗಳ ಜಲಾನಯನ ಪ್ರದೇಶದಲ್ಲಿ (catchment area) ಕಾಣುತ್ತೇವೆ."

ನಾನು ಕಂಡಿರುವ ಅತ್ಯಂತ ನೈಷ್ಠಿಕ ವಿಚಾರವಂತರಲ್ಲಿ ಇವರೊಬ್ಬರು. ನಡೆ ನುಡಿ ಬಗೆಗಳಲ್ಲಿ ಉದಾರ ಮಾನವೀಯತೆಯನ್ನು ಬಿಂಬಿಸುತ್ತಿರುವ ಪರಿಶುದ್ಧಾತ್ಮರು, ನನ್ನ ಪರಮ ಗೌರವಕ್ಕೆ ಪಾತ್ರರು. ಇಂಥವರು ವಿಜ್ಞಾನದ ಮಾತೃ ಮೂಢನಂಬಿಕೆ ಎಂದು ಘೋಷಿಸಿದಾಗ ನನ್ನ ಸಹಜ ಪ್ರತಿಕ್ರಿಯೆ ಹೇಗಿರಬೇಕಿತ್ತು? "ಖಂಡಿತ ಬುರುಡೆ, ನೊರೆ, ಬುರುಗು" ಎಂದಲ್ಲವೇ? ಅಲ್ಲ. ಏಕೆಂದರೆ ಅವರ ಗೋತ್ರ: "ನುಡಿದಡೆ ಮುತ್ತಿನ ಹಾರದಂತಿರಬೇಕು, ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು, ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು, ನುಡಿಯೊಳಗಾಗಿ ನಡೆಯದಿದ್ದಡೆ ಕೂಡಲಸಂಗಮ ದೇವನೆಂತೊಲಿವನಯ್ಯಾ?"

ಆದ್ದರಿಂದ ಅವರ ನುಡಿಗಳನ್ನು ಗಂಭೀರವಾಗಿ ಪರಿಗಣಿಸಲೇಬೇಕು. ನನ್ನ ಸಂದೇಹ-ಗ್ರಸ್ತ ದೃಷ್ಟಿ ಗಮನಿಸಿ ಅವರೇ ಮಾತು ಮುಂದುವರಿಸಿದರು, "ನಿಮಗೆ ತಿಳಿದಿರುವುದನ್ನೇ ನಾನು ಹೇಳಿರುವುದು, ಹೊಸತೇನನ್ನೂ ಅಲ್ಲ. ಹೇಳಿದ ಧಾಟಿ ಮಾತ್ರ ಬೇರೆ. ಆದ್ದರಿಂದ ನೀವು ಈ ವಿಚಾರವನ್ನು ಕೊಂಚ ತಾರ್ಕಿಕ ಚಿಂತನೆಯ ಒರೆಗಲ್ಲಿಗೆ ತೀಡಿ ನೋಡಿ."

**ಮೂಲಭೂತ ಚಿಂತನೆ**

ನಿಸರ್ಗ ಇತರ ಯಾವ ಪ್ರಾಣಿಗೂ ಕೊಟ್ಟಿರದ ನಾಲ್ಕು ವಿಶಿಷ್ಟ ಸೌಕರ್ಯಗಳನ್ನು ಮಾನವನಿಗೆ ಪ್ರದಾನಿಸಿದೆ: ಯೋಚನೆ, ಸ್ಮರಣೆ, ಮಾತು ಮತ್ತು ಕೃತಿ. ಇವು ಆತನ ಸಮಸ್ತ ಚಟುವಟಿಕೆಗಳನ್ನೂ ಸದಾ ಪ್ರಭಾವಿಸುತ್ತವೆ. ಪ್ರಾಣಿಗಳ ವರ್ತನೆ ಹೀಗಲ್ಲ. ಅದು ಸ್ವಭಾವಾಧಾರಿತವಾದದ್ದು. ಇಂಗ್ಲಿಷಿನಲ್ಲಿ ಇದನ್ನು instinct ಎನ್ನುತ್ತೇವೆ. ಇದು ವೈಚಾರಿಕತೆ (rationalism) ಅಲ್ಲ. ಹಾಗಾದರೆ ವೈಚಾರಿಕತೆ ಎಂದರೇನು?

ಪ್ರತಿಯೊಂದು ನೈಸರ್ಗಿಕ ಘಟನೆಯ (ಕಾರ್ಯ, effect) ಹಿನ್ನೆಲೆಯಲ್ಲಿಯೂ ಒಂದು ಕಾರಣ (cause) ವರ್ತಿಸುತ್ತದೆ, ಆದ್ದರಿಂದ ಕಾರ್ಯ ಗೊತ್ತಾದಾಗ ಕಾರಣವನ್ನು ಪತ್ತೆ ಹಚ್ಚಬೇಕೆಂದೂ ಕಾರಣ ತಿಳಿದಾಗ ತತ್ಸಂಬಂಧೀ ಕಾರ್ಯವನ್ನು ಅರಸಬೇಕೆಂದೂ ಮಾನವಮತಿ ಸಹಜಕುತೂಹಲ ತಳೆಯುತ್ತದೆ. ಯಾವುದೇ ಘಟನೆ ಅಥವಾ ವಿದ್ಯಮಾನ ಕುರಿತು ಕಾರ್ಯ-ಕಾರಣ ಸಂಬಂಧ ಏರ್ಪಡಿಸಬೇಕೆಂದು ಇಂಥ ಮನಸ್ಸು ತುಡಿಯುತ್ತದೆ. ಏಕೆಂದರೆ ಕಾರ್ಯರಹಿತ ಕಾರಣವಿಲ್ಲ, ಅಂತೆಯೇ, ಕಾರಣರಹಿತ ಕಾರ್ಯವಿಲ್ಲ ಎಂದು ಅದಕ್ಕೆ ಖಚಿತವಾಗಿ ಗೊತ್ತಿರುವುದು. ಮನಸ್ಸಿನ ಈ ಸ್ಥಿತಿಯೇ ವೈಚಾರಿಕತೆ.

**ವೈಚಾರಿಕತೆಯ ವಿಕಾಸ**

ಕ್ರಮೇಣ ಮಾನವ ತನ್ನ ಸುತ್ತಲಿನ ನಿಸರ್ಗದಲ್ಲಿಯ ಸಮಸ್ತ ವಿದ್ಯಮಾನಗಳನ್ನೂ

ವೈಚಾರಿಕತೆಯ ಒರೆಗಲ್ಲಿಗೆ ಉಜ್ಜಿ ಪರೀಕ್ಷಿಸಲು ಮುಂದಾಗುತ್ತಾನೆ. "ಸೂರ್ಯೋದಯ ಚಂದ್ರೋದಯ ದೇವರ ದಯ ಕಾಣೋ" ಎಂಬ ಕವಿಯ ಸ್ಫೂರ್ತಿಮಂತ ಉದ್ಗಾರವನ್ನು ಒಪ್ಪುತ್ತ ಅದೇ ದೇವರ ದಯ ತನಗೆ ವೈಚಾರಿಕ ಸಾಮರ್ಥ್ಯ ಕೊಟ್ಟಿರುವುದರಿಂದ ಈ "ದೈವಿಕ" ಘಟನೆಗಳ ಹಿನ್ನಲೆ ಕಾರಣಗಳ ಅನ್ವೇಷಣೆಗೆ ಸಿದ್ಧನಾಗುತ್ತಾನೆ.

ಅರ್ಥಾತ್ ಈಗ ಆತ ನಿಸರ್ಗದ ಜೊತೆ ಕಾರ್ಯ-ಕಾರಣ ಪಾತಳಿಯಲ್ಲಿ ವ್ಯವಹರಿಸಲು ತೊಡಗುತ್ತಾನೆ. ವೈಚಾರಿಕತೆ ವಿಧಿಸುವ ಈ ಹಾದಿಯಲ್ಲಿ ಜ್ಞಾತೃನಿಷ್ಠತೆಗೆ (ವ್ಯಕ್ತಿನಿಷ್ಠತೆ, subjectiveness) ಎಲ್ಲಿಯೂ ಅವಕಾಶವಿಲ್ಲ. ಏಕೆಂದರೆ ನಿಸರ್ಗ ಯಾವ ವ್ಯಕ್ತಿಯ, ರಾಜನ ಅಥವಾ ಮಾನವಕಲ್ಪಿತ ದೇವರ (?) ಇಚ್ಛಾನುಸಾರ ವರ್ತಿಸುವುದಿಲ್ಲ, ಬದಲು, ಅದರದೇ ನಿಯಮಾನುಸಾರ ಸತತ ಕ್ರಿಯಾಶೀಲವಾಗಿರುತ್ತದೆ. ಅಂದರೆ ಇಲ್ಲಿ ನಿಸರ್ಗವೇ ಆರಂಭಾಂತ್ಯಗಳ ನಿರ್ಣಾಯಕ. ವೈಚಾರಿಕವಾಗಿ ಸಾಗುತ್ತಿರುವಾಗ ಈ ಅರಿವು ಜಿಜ್ಞಾಸು-ಮಾನವನಲ್ಲಿ ಕ್ರಮೇಣ ಮಿನುಗುತ್ತದೆ. ಮನಸ್ಸಿನ ಇಂಥ ಸ್ಥಿತಿಗೆ ಜ್ಞೇಯನಿಷ್ಠತೆ (ವಸ್ತುನಿಷ್ಠತೆ, objectiveness) ಎಂದು ಹೆಸರು.

ಸೂರ್ಯೋದಯ, ಚಂದ್ರೋದಯ, ಚಂದ್ರನ ವಿವಿಧ ವರಿಸೆಗಳು, ಅವ್ಯತ್ಯಯಶೀಲ ನಕ್ಷತ್ರಚಿತ್ರಗಳ ನಿಗೂಢತೆ, ಗ್ರಹಣ, ಉಲ್ಕೆ, ಧೂಮಕೇತು ಮುಂತಾದ ನಿರಂತರ ವಿಸ್ಮಯಗಳ ಬಗ್ಗೆ ಮನುಕುಲ ಪ್ರಾಚೀನ ದಿನಗಳಿಂದಲೂ ಕುತೂಹಲ ತಳೆದಿದೆ: ಬಾನು ಬೀರುವ ಉದ್ದೀಪನೆಗೆ (stimulus) 'ನಾನು' (ಅಂದರೆ ಮನುಜ) ತೋರುವ ಅನುಕ್ರಿಯೆಯೊಂದು (response) ನಿರಂತರ ಪ್ರಕ್ರಿಯೆ. ಇದು ಏಕೆ ಹೀಗೆ, ಬೇರೆ ಹೇಗೂ ಅಲ್ಲ? ಕಾರಣವೇನು? ಆ ಗಗನದೀಪಗಳನ್ನು ಕ್ರಮಬದ್ಧವಾಗಿ ಬೆಳಗಿಸುತ್ತ ಆಕಾಶದ ಅಡ್ಡ ಒಯ್ಯುತ್ತಿರುವವರು ಯಾರು? ಈ ತೆರನಾದ ಅಸಂಖ್ಯ ಪ್ರಶ್ನೆಗಳಿಗೆ ಮೊದಲು ದೊರೆತ ಉತ್ತರವೇನು? ಅದು ಮನಸೋ ಇಚ್ಛೆ ಹರಿಯಗೊಟ್ಟ ಕಲ್ಪನಾವಿಲಾಸ ಅಲ್ಲವೇ? ಅದೇ ನಿಸರ್ಗ ಕುರಿತ ಸರಿಯಾದ ವಿವರಣೆ ಎಂದು ಅಧಿಕಾರಬಲದಿಂದ ಅಥವಾ ದೈವಿಕವಿಸ್ಮೃತಿಯಿಂದ (?) ಸಾಧಿಸಹೊರಟಾಗ ಅದು ಮೂಢನಂಬಿಕೆಯಲ್ಲದೇ ಬೇರೇನು? ಇಂದಿನ ಜ್ಞಾನದ ಬೆಳಕಿನಲ್ಲಿ ಇದು ಸುಸ್ಪಷ್ಟ.

ಉದಾಹರಣೆಗೆ ವ್ಯಕ್ತಿಯ ಭೂತ, ವರ್ತಮಾನ, ಭವಿಷ್ಯ ಎಲ್ಲವೂ ಆತನ ಜನನ ಮುಹೂರ್ತದಲ್ಲಿ ಕಂಡುಬಂದ ಗ್ರಹವಿನ್ಯಾಸದಲ್ಲಿ (ಅಂದರೆ ಜಾತಕ) ಗರ್ಭಿತವಾಗಿವೆ ಎಂಬ ನಂಬಿಕೆ ಪೂರ್ತಿ ಸ್ವಕಪೋಲಕಲ್ಪಿತ. ಈ ವಾಮ ಚಿಂತನಪ್ರಕಾರದ ಹೆಸರು ಫಲಜ್ಯೋತಿಷ (astrology). ಇದು ಎಲ್ಲ ಮೂಢನಂಬಿಕೆಗಳ ತಾಯಿ! ವಾಸ್ತವವಾಗಿ ಪ್ರತ್ಯಕ್ಷ ಪ್ರಯೋಗದಿಂದ ನಿಸರ್ಗದಲ್ಲಿ ರುಜುವಾತಿಸಲಾಗದ ಎಲ್ಲ ಹೇಳಿಕೆಗಳೂ, ನುಡಿದವರು ಯಾರೇ ಇರಲಿ, ಅವರ ಅಂತಸ್ತು ಏನೇ ಇರಲಿ, ಪೂರ್ತಿ ಮೂಢನಂಬಿಕೆಗಳೇ.

ಅನುಭವದೂರವಾದ ಒಂದು ಸಮಸ್ಯೆ ಎದುರಾಗುತ್ತದೆ ಎನ್ನೋಣ. ವಾಸ್ತವ ಜೀವನದಿಂದ ಒಂದು ನಿದರ್ಶನ. ಆರನೆಯ ತರಗತಿಗೆ ಭಾಗಾಹಾರವಿಧಾನವನ್ನು ವಿವರಿಸುತ್ತಿದ್ದ ಉಪಾಧ್ಯಾಯ ಸಾಕಷ್ಟು ಸಾಂಖ್ಯಿಕ ನಿದರ್ಶನಗಳ ಮೂಲಕ ತನ್ನ ತೀರ್ಮಾನವನ್ನು ಒಂದು ಸೂತ್ರವಾಕ್ಯದಲ್ಲಿ ಕ್ರೋಡೀಕರಿಸಿದರು, "ಯಾವುದೇ ಸಂಖ್ಯೆಯನ್ನು ಅದರಿಂದಲೇ ಭಾಗಿಸಿದಾಗ ದೊರೆಯುವ ಶೇಷ ಸದಾ ೧. ಸಂಶಯವುಂಟೇ?"

ಆ ಹಿಂದಿನ ಒಂದು ತಾಸು ಅವರು ಬೆವರು ಹರಿಸಿ, ಉದಾಹರಣೆ ನೀಡಿ, ವಿವರಣೆ ಕೊಟ್ಟು ಮತ್ತು ಕರಿಹಲಗೆ ಮೇಲೆ ಬರೆದು ವಿಷಯ ಮಂದಟ್ಟುಮಾಡಲು ಪ್ರಯತ್ನ ಮಾಡಿದ್ದರು. ಇವೆಲ್ಲದರಿಂದಾಗಿ ಮಕ್ಕಳ ಮನಗಳಲ್ಲಿ ಇಡೀ ಸಮಸ್ಯೆ ಒಂದು ಆಟವೆಂಬ ಭಾವನೆ ಸ್ಫುರಿಸಿತ್ತು. ಆದರೆ "ಜಗವೆಲ್ಲವು ನಿದ್ರಿಸುತಿರೆ ಇವನೊಬ್ಬನೆ ಎದ್ದ—ಇವ ಬುದ್ಧ, ಋತಬದ್ಧ, ಪರಿಶುದ್ಧ, ಮತಿ ಸಿದ್ಧ" ಎಂಬಂತೆ ತರಗತಿಯ ಹಿಂದಿನ ಸಾಲಿನಲ್ಲಿ ಕುಳಿತಿದ್ದ ಒಬ್ಬನೆದ್ದ, "ಹಾಗಾದರೆ ಸೊನ್ನೆಯನ್ನು ಸೊನ್ನೆಯಿಂದ ಭಾಗಿಸಿದಾಗಲೂ ದೊರೆಯುವ ಶೇಷ ೧ ಹೌದೇ, ಗುರುಗಳೇ?"

ಉಪಾಧ್ಯಾಯ ಕೊಟ್ಟ ಉತ್ತರ ಏನೆಂಬುದು ದಾಖಲಾಗಿಲ್ಲ, ಪ್ರಶ್ನೆ ಕೇಳಿದ ವಿದ್ಯಾರ್ಥಿ ಮಾತ್ರ ಯಾರೆಂಬುದು ತಿಳಿದಿದೆ: ೧೨ರ ಹರೆಯದ ಶ್ರೀನಿವಾಸ ರಾಮಾನುಜನ್ (೧೮೮೭-೧೯೨೦)! ಇಂದಿನ ಪಿಯುಸಿ ಗಣಿತವಿದ್ಯಾರ್ಥಿಗಳು ಕಲಿಯುವ ಕಲನಶಾಸ್ತ್ರದ (calculus) ಆರಂಭ ಈ ಮೂಲಭೂತ ಪ್ರಶ್ನೆಯಲ್ಲಿದೆ (ನೋಡಿ : *ರಾಮಾನುಜನ್ ಬಾಳಿದರಲ್ಲಿ*, ಮಂಗಳೂರಿನ ಅತ್ರಿ ಬುಕ್ ಸೆಂಟರ್ ಪ್ರಕಟಣೆ). ಬಹುಶಃ ರಾಮಾನುಜನ್ ಎಂಬ ಯುವ ಪ್ರತಿಭೆಯ ಎಳೆ ಮನದಲ್ಲಿ ಆ ಗಳಿಗೆ ಮೂಡಿದ್ದು ಎಲ್ಲವನ್ನೂ ಸಂಶಯದ ಒರೆಗಲ್ಲಿಗೆ ಹಚ್ಚಬೇಕೆಂಬ ಅಂತರ್ಬೋಧೆ ಅಥವಾ ಪ್ರತಿಭಾನ (intuition). ಕಾರಣ? ಸಂಖ್ಯೆ ಗಳೆಲ್ಲವೂ ದೈವಾನುಗ್ರಹ ಎಂಬ ಪ್ರಚಲಿತ ಕುರುಡು ನಂಬಿಕೆ : "ಭಗವಂತ ಮಾನವ ನನ್ನು ಸೃಷ್ಟಿಸಿದ, ಮಾನವನೋ ಸಂಖ್ಯೆಯನ್ನು ಕಟ್ಟಿ, ಸಾಕ್ಷಾತ್ ಭಗವಂತನನ್ನೇ ಅಳೆದ!" ಇದು ಅಂದಿನವರ ಗಾಢ ವಿಶ್ವಾಸ. ಇಂದಿನ ಅನುಭವ ಹೇಳುತ್ತದೆ, "ಇದು ಶುದ್ಧ ಮೂಢನಂಬಿಕೆ." ಗುರುವಿವರಣೆಯನ್ನು ಪ್ರಶ್ನಾತೀತವಾಗಿ ಅಂಗೀಕರಿಸಿದ್ದರೆ ಆತನ ರಾಮಾನುಜನ್‌ತನ ಅಥವಾ ವೈಜ್ಞಾನಿಕ ಚಿಂತನೆ ಮುರುಟಿ ಹೋಗಿರುತ್ತಿತ್ತು.

ಇನ್ನೊಂದು ಐತಿಹಾಸಿಕ ನಿದರ್ಶನ ಗಮನಿಸಬೇಕು. ನಾಗರಿಕತೆ ಅಂದರೆ ಯೋಚನೆ, ಸ್ಮರಣೆ, ವಿವರಣೆ ಮುಂತಾದ ಮಾನವಸಹಜ ಪ್ರಕ್ರಿಯೆಗಳು ಆರಂಭವಾಗುತ್ತಿದ್ದ ದಿನ ಗಳವು (ಸುಮಾರು ೫೦೦೦ ವರ್ಷಗಳಿಗಿಂತಲೂ ಪ್ರಾಚೀನ ಕಾಲ). ಪವಿತ್ರ ಋಷ್ಯಾ ಶ್ರಮದಲ್ಲಿದ್ದೇವೆ. "ಗುರುಬ್ರಹ್ಮಾ ಗುರುರ್ವಿಷ್ಣುರ್ಗುರುದೇವೋ ಮಹೇಶ್ವರಃ ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ" ಎಂಬ ಆಣತಿಯನ್ನು ಶಿಷ್ಯರೆಲ್ಲರೂ ಪ್ರಶ್ನಿಸದೆ ಪ್ರಸಾದ ಎಂದು ಸ್ವೀಕರಿಸಿ ಸ್ವಾಂಗೀಕರಿಸುತ್ತಿದ್ದ ಪರಿಸರ.

ಆಶ್ರಮದ ಪ್ರಶಾಂತ ವಾತಾವರಣದಲ್ಲಿ ಗುರು ಬೋಧಿಸುತ್ತಿದ್ದಾನೆ, "ತೊಟ್ಟು ಕಳಚಿದ ಹಣ್ಣು ನೆಲಕ್ಕೆ ಕೆಡೆಯುವುದು ಭೂನಿಯಮ."

"ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂಬ ಅಂಧ ವಿನೀತತೆಯನ್ನು ತ್ರಿಕರಣಪೂರ್ವಕವಾಗಿ ಆರಾಧಿಸುತ್ತಿದ್ದ ಶಿಷ್ಯರು ಇದನ್ನು ಒಪ್ಪಿದರು, "ಎಷ್ಟು ಸುಲಭ! ಕಣ್ಣಾರೆ ಕಾಣುವ ಸತ್ಯ ಇದು."

'ಅಧಿಕ ಪ್ರಸಂಗ' ಎಂದು ಮೇಲುನೋಟಕ್ಕೆ ಭಾಸವಾಗುವ ಸಂಶಯವನ್ನು ಒಬ್ಬ ಮಾತ್ರ ಎತ್ತಿದ, "ಗುರುಗಳೇ! ಹಾಗಾದರೆ ನಕ್ಷತ್ರಗಳನ್ನು ಆಕಾಶದಲ್ಲಿ ಹಿಡಿದಿಟ್ಟಿರುವ ತೊಟ್ಟುಗಳು ಯಾವುವು?"

"ಅಲ್ಲಿ ಚಾಲೂ ಆಗುವುದು ಆಕಾಶನಿಯಮ." ಶಿಷ್ಯ ತೃಪ್ತನಾದ.

"ಹಾಗಾದರೆ ಉಲ್ಕೆಗಳೇಕೆ ಬೀಳುತ್ತವೆ? ಧೂಮಕೇತುಗಳೇಕೆ ಆಕಸ್ಮಾತ್ತಾಗಿ ಗೋಚರಿಸಿ ತಮ್ಮ ವಿಕಟ ಲಾಂಗೂಲ ಬೀಸುತ್ತ ಬಾನಿನಡ್ಡ ಧಾವಿಸುತ್ತವೆ?" ಇನ್ನೊಬ್ಬ ಕೇಳಿದ.

"ಸ್ವರ್ಗದಿಂದ ಪತನವಾಗುವ ಪಾಪಾತ್ಮರೇ ಉಲ್ಕೆಗಳು. ಧರೆಯಲ್ಲಿ ಜನಸಮಷ್ಟಿ ನಿತ್ಯವೆಸಗುವ ಪಾಪಸಂಚಯಕ್ಕೆ ಭಗವಂತ ಕಾಲದಿಂದ ಕಾಲಕ್ಕೆ ಇಡುವ ಕೊಳ್ಳಿಯೇ ಧೂಮಕೇತು."

## ಪ್ರಶ್ನೆಯೇ ವಿಜ್ಞಾನದ ಮೂಲ

ಆ ಗುರುವಿನ ವಿವರಣೆ ಶುದ್ಧ ಕುರುಡು ನಂಬಿಕೆ ಎಂದು ಇಂದಿನ ನಮಗೆ ತಿಳಿದಿದೆ. ವಾಸ್ತವವಾಗಿ ಐಸಾಕ್ ನ್ಯೂಟನ್ (೧೬೪೨-೧೭೨೭) ರಂಗಪ್ರವೇಶಿಸಿ ವಿಶ್ವ ಗುರುತ್ವಾಕರ್ಷಣನಿಯಮವನ್ನು ಗೋಚರ ವಿದ್ಯಮಾನಗಳಿಗೆ ಅನ್ವಯಿಸಿ ಗಣಿತದ ಪರಿಭಾಷೆಯಲ್ಲಿ ನಿರೂಪಿಸುವ ತನಕ (೧೬೮೭) ಆಕಾಶಕಾಯಗಳು ಇಲ್ಲಿ 'ತೇಲು'ತ್ತಿರುವುದೂ ತೊಟ್ಟು ಕಳಚಿದ ಹಣ್ಣು ನೆಲಕ್ಕೆ ಕೆಡೆಯುವುದೂ ಒಂದೇ ಕಾರಣದ ಫಲವಾಗಿ ಪ್ರಕಟವಾಗುವ ಕಾರ್ಯಗಳು ಎಂಬ ಸರಳ ಸತ್ಯ ಮಾನವನಿಗೆ ಗೊತ್ತಿರಲಿಲ್ಲ. ಇಂದು ಅಭಿಜಾತ ಭೌತ ವಿಜ್ಞಾನ (ಕ್ಲಾಸಿಕಲ್ ಫಿಸಿಕ್ಸ್) ಎಂದು ಕರೆಯಲ್ಪಡುವ ವಿಜ್ಞಾನಶಾಖೆಯ ಮೂಲಪುರುಷ ನ್ಯೂಟನ್. ಈ ವಿಜ್ಞಾನಮೇರು ತನ್ನ ಪರಮ ಸಿದ್ಧಿಯ ಉತ್ತುಂಗದಿಂದ ತಾನು (ಅರ್ಥಾತ್ ವಿಜ್ಞಾನ) ನಡೆದು ಬಂದ ದಾರಿಯನ್ನು ಸಿಂಹಾವಲೋಕಿಸಿ ಬರೆದ. "ಇತರ ವ್ಯಕ್ತಿಗಳಿಗಿಂತ ತುಸು ಆಚೆ ನಾನು ನೋಡಬಲ್ಲವನಾಗಿದ್ದರೆ ಅದರ ಕಾರಣ ಮಹಾದೈತ್ಯರ ಭುಜಗಳ ಮೇಲೆ ನಾನು ನಿಂತಿರುವುದು."

ತಾತ್ಪರ್ಯ: ಮೂಢ ನಂಬಿಕೆಯಿಂದ ಆರಂಭವಾದ ಆಕಾಶಚಿಂತನೆ ನ್ಯೂಟನ್ನನ ವೈಜ್ಞಾನಿಕ ತೀರ್ಮಾನದಲ್ಲಿ ಮುಕ್ತಾಯ ಕಂಡಿತು. ಅಂದ ಮೇಲೆ ವಿಜ್ಞಾನದ ಮೂಲ ಎಲ್ಲಿದೆ ಎಂಬುದು ಸ್ಪಷ್ಟ. ಅಲ್ಲೇ ನಾವು ನಿಲ್ಲಬಾರದು ಮಾತ್ರ. ಹಾಗೇನಾದರೂ ನಿಂತದ್ದಾದರೆ ನಾವು ಜೀವ್ಯವಶೇಷಗಳಾಗಿ (ಪಳೆಯುಳಿಕೆಗಳು) ನಶಿಸುವುದು ಖರೆ.

ನ್ಯೂಟನ್ನನ ಇನ್ನೊಂದು ನುಡಿ. "ಲೋಕಕ್ಕೆ ನಾನು ಹೇಗೆ ಕಾಣುವೆನೋ ಊಹಿಸಲಾರೆ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ನಾನೊಬ್ಬ ಕಡಲ ಕಿನಾರೆಯಲ್ಲಿ ಆಡುತ್ತಿರುವ ಕಿರಿ ಹೈದ. ಆಗ ಈಗ ನುಣುಪಾದ ಒಂದು ಹರಳನ್ನೋ ಚೆಲುವಾದ ಒಂದು ಚಿಪ್ಪನ್ನೋ ಹೆಕ್ಕಬಹುದು. ಆದರೆ ನನ್ನಿಯ ಹೆಗ್ಗಡಲಿಡೀ ನನ್ನೆದುರು ಅನನ್ವೇಷಿತವಾಗಿ ಚೆಲ್ಲಿಕೊಂಡಿದೆ."

ನ್ಯೂಟನ್ ದರ್ಶಿಸಿದ ಆ 'ದೈತ್ಯರು' ಯಾರು? ಇತಿಹಾಸಪೂರ್ವ ದಿನಗಳ ಮೂಢ ನಂಬಿಕೆಗಳಲ್ಲಿ ಆರಂಭವಾಗಿ ಅದೇ ಹಿಂದಿನ ಗೆಲಿಲಿಯೊ (೧೫೬೪-೧೬೪೨) ಮತ್ತು ಕೆಪ್ಲರ್(೧೫೭೧-೧೬೩೦) ತನಕ ದೈತ್ಯ ದಾಪು ಇಟ್ಟು ಅರಳಿ ಬೆಳಗಿದ ಪೂರ್ವಸೂರಿಗಳು ಅಲ್ಲವೇ? ಇನ್ನು ಆತ ಬೆರಗಾಗಿ ದಿಟ್ಟಿಸಿದ 'ನನ್ನಿಯ ಹೆಗ್ಗಡಲು' ಅಂತೆಯೇ ಹೆಕ್ಕಿದ 'ಹರಳು' ಯಾವುವು? ಸಾಕ್ಷಾತ್ ಬೃಹದ್ವಿಶ್ವ ಮತ್ತು ವಿಶ್ವಗುರುತ್ವಾಕರ್ಷಣ ನಿಯಮ. ವಿಶ್ವ ಸದಾ ಒಂದೇ ಆಗಿದ್ದರೂ ಮಾನವನ ಅರಿವಿನ ನೋಟಕ್ಕೆ ಅನುಗುಣವಾಗಿ ತುಸು ತುಸುವೇ ತನ್ನ ರಹಸ್ಯಗಳನ್ನು ಬಯಲಿಸುತ್ತದೆ—'ಅವರವರ ಭಾವಕ್ಕೆ, ಅವರವರ

ದರುಶನಕೆ.' ಆದ್ದರಿಂದ ನನ್ನಿ ಎಡೆಗಿನ ನಡೆ ಕುರುಡುನಂಬಿಕೆಗಳ ಇಟ್ಟಿಗೆಗಳಿಂದ ಕಟ್ಟಿದ್ದಾಗಿರಬಹುದೇ?

ಕ್ರಿಸ್ತಶಕ ೧ನೆಯ ಶತಮಾನದಲ್ಲಿ ಬಾಳಿದ ರೋಮನ್ ರಾಜಕಾರಣಿ ಮತ್ತು ತತ್ತ್ವಶಾಸ್ತ್ರವಿದ ಸೆನೆಕಾ ವಿಶ್ವವೈಚಿತ್ರ್ಯವನ್ನು ವರ್ಣಿಸಿರುವ ಪರಿ : "ಈಗ ನಮ್ಮಿಂದ ಮರೆಯಾಗಿರುವ ಅನೇಕ ಸಂಗತಿಗಳು ಸಾಕಷ್ಟು ದೀರ್ಘಕಾಲ ಮಾಡುವ ಸಂಶೋಧನೆಗಳ ಫಲವಾಗಿ, ಬೆಳಕು ಕಾಣುವ ದಿನ ಬಂದೇ ಬರುತ್ತದೆ. ಆಕಾಶದಂಥ ಅತ್ಯಗಾಧ ವ್ಯಾಪ್ತಿಯನ್ನು ಅನ್ವೇಷಿಸಲು ಒಂದು ತಲೆಮಾರಿನ ಆಯುಷ್ಯವನ್ನೇ ಮೀಸಲಿಟ್ಟರೂ ಸಾಲದು... ಇಂತಿದ್ದರೂ ಆಕಾಶದ ಬಗೆಗಿನ ಜ್ಞಾನ ಉತ್ತರೋತ್ತರ ಯುಗಗಳ ದೀರ್ಘಾವಧಿಗಳಲ್ಲಿ ಕ್ರಮೇಣ ಅನಾವರಣಗೊಳ್ಳಲಿದೆ. ನಮ್ಮ ಕುಲಸಂಜಾತರಾಗಿ ಬರಲಿರುವ ಮುಂದಿನ ಯಾವುದೋ ಪೀಳಿಗೆಯ ಜನರು, ತಮಗೆ ಅಷ್ಟು ಸುಲಭವಾಗಿಯೂ ಸುಂದರವಾಗಿಯೂ ಮನವರಿಕೆಯಾಗಿರುವ ಸಂಗತಿಗಳು, ತಮ್ಮ ಪೂರ್ವಜರಾಗಿದ್ದ ನಮಗೆ ತಿಳಿದೇ ಇರಲಿಲ್ಲವಲ್ಲ ಎಂದು ಅಚ್ಚರಿಪಡುವ ದಿನ ಖಂಡಿತ ಬರಲಿದೆ. ಅನೇಕ ಆವಿಷ್ಕಾರಗಳು ಭವಿಷ್ಯದ ಯುಗಗಳಿಗಾಗಿ ಕಾಯ್ದಿರಿಸಲ್ಪಟ್ಟಿವೆ. ಆದರೆ ಆ ವೇಳೆಗೆ ನಮ್ಮ ಬಗೆಗಿನ ಮಾಹಿತಿ ಮಾಸಿ ಹೋಗಿರುತ್ತದೆ. ಪ್ರತಿಯೊಂದು ಯುಗದಲ್ಲಿಯೂ ಅನ್ವೇಷಣೆಗೆ ನೂತನ ವಿಷಯ ಒದಗುವುದಿಲ್ಲವಾಗಿದ್ದರೆ ಈ ವಿಶ್ವವೊಂದು ಅಲ್ಪ ಮತ್ತು ರಿಕ್ತ ಯಂತ್ರವಾಗಿರುತ್ತಿತ್ತು. ನಿಸರ್ಗವೆಂದೂ ತನ್ನ ನಿಗೂಢ ರಹಸ್ಯಗಳನ್ನು ಒಮ್ಮೆಗೇ ಆಗಲಿ ಎಲ್ಲರಿಗೂ ಆಗಲಿ ಬಿಟ್ಟು ಕೊಡುವುದಿಲ್ಲ."

ಇವೆಲ್ಲ ವಿವರಣೆಗಳ ಸಾರಾಂಶ: ನಿರಂತರ ಹಾರಾಟದಲ್ಲಿರುವ ಹಕ್ಕಿಯೊಂದು ಮೊದಲು ಮೂಢನಂಬಿಕೆಯ ಹೆಗಲ ಮೇಲೆ ನಿಂತು ತನ್ನ ಚುಂಚವನ್ನು ಆಚೆಗೆ ಚಾಚುವುದು ಸಹಜ ವರ್ತನೆ, ಆಗ ಹೊಸ ದೃಶ್ಯ ಕಾಣುತ್ತದೆ, ಇದರ ಅನ್ವೇಷಣೆಗೆ ಹಾರುವುದು ಮುಂದಿನ ಹೆಜ್ಜೆ—ಹೀಗೆ "ಹಕ್ಕಿ ಹಾರುತಿದೆ ನೋಡಿದಿರಾ?"

**ವಿಜ್ಞಾನ ಎಂದರೇನು?**

ನಿಸರ್ಗದ ಯಾವುದೇ ಗೋಚರ ವಿದ್ಯಮಾನ—ಉದಾಹರಣೆಗೆ ಹಗಲು-ಇರುಳುಗಳ ನಿರಂತರ ಉರುಳಾಟ—ಗಮನಿಸಿದಾಗ ಮಾನವಮತಿ ಅದರ ಬಗ್ಗೆ ಕುತೂಹಲ ತಳೆಯುತ್ತದೆ. ಇಲ್ಲಿ ಹಗಲು-ಇರುಳು ಪರಿಕ್ರಮಣ ಗೋಚರ ಕಾರ್ಯ. ಈ ಕ್ರಮಬದ್ಧತೆಯ ಹಿನ್ನೆಲೆ ಕಾರಣ ಏನು ಎಂಬ ಪ್ರಶ್ನೆ ಮನದೊಳಗೆ ಉದ್ಭವಿಸುತ್ತದೆ. ಅರ್ಥಾತ್ ಇಲ್ಲೇನಾದರೂ ಕಾರ್ಯ-ಕಾರಣ ಸಂಬಂಧ ಏರ್ಪಡಿಸಬಹುದೇ ಎಂಬ ಮೂಲಭೂತ ಪ್ರಶ್ನೆ.

ನೆಲದ ಮೇಲಿನ ಸವಾರ-ಬಂಡಿ ಅನುಭವವನ್ನು ಆಧರಿಸಿ ಗಗನದಲ್ಲಿರುವ ರಥ ಸೂರ್ಯನನ್ನು ಪೂರ್ವದಿಂದ ಪಶ್ಚಿಮಕ್ಕೆ ಸದಾ ಒಯ್ಯುತ್ತಿರುತ್ತದೆ ಎಂಬ ತಾತ್ಕಾಲಿಕ ಸಂಬಂಧ ಅಥವಾ ಉತ್ತರ ದೊರೆಯುತ್ತದೆ. ಇದು ಮತ್ತೆ ನೂರೆಂಟು ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ, ಆಭಾಸಗಳಿಗೆ ಕಾರಣವಾಗುತ್ತದೆ. ಹೀಗೆಯೇ ಮುಂದುವರಿದು ಅಂತಿಮವಾಗಿ ಅದು ಸೂರ್ಯನ ಲಕ್ಷಣ ಎಂದೋ ಭಗವಂತನ ಲೀಲೆ ಎಂದೋ ಅಧಿಕಾರಿಯಾಗಿದ್ದರೆ ಅಧಿಕಪ್ರಸಂಗ ಸಾಕು ಎಂಬ ಉಡಾಫೆ ಆದೇಶ ನೀಡಿಯೋ ಈ ಪಿಷ್ಟಪೇಷಣ ನಿಲ್ಲುತ್ತದೆ. ಅರ್ಥ : ಮೂಢನಂಬಿಕೆಯಲ್ಲಿ ತನ್ನ ಆಶ್ರಯವನ್ನು ಕಾಣುತ್ತದೆ!

ಹೀಗೆ ಸಾಗುವ ವಿಜ್ಞಾನ ಜಟಕಾಬಂಡಿ (ಕಾಲ ಇದರ ಸಾಹೇಬ, ಯುಗಯಾತ್ರಿ ಮಾನವ ಇಲ್ಲಿಯ ಸವಾರ) ಅನೇಕ ತಾಣಗಳ ಮೂಲಕ ಹಾಯ್ದು ಹೊಸ ಹಾದಿ ಕಡಿದು ನ್ಯೂಟನ್ ಎಂಬ ತಾಣದಲ್ಲಿ ನಿಲ್ಲುತ್ತದೆ ತಾತ್ಕಾಲಿಕವಾಗಿ. ಆದರೆ ವಿಜ್ಞಾನದ ಹಾದಿ ಹೇಗಿದೆ ಗೊತ್ತೇ? ಕುವೆಂಪು ನುಡಿಗಳಲ್ಲಿ—

ಎಲ್ಲಿಯೂ ನಿಲ್ಲದಿರು;
ಮನೆಯನೆಂದೂ ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು;
ಓ ಅನಂತವಾಗಿರು!
ಓ ನನ್ನ ಚೇತನ, ಆಗು ನೀ ಅನಿಕೇತನ !

ಜಿಜ್ಞಾಸುಮಾನವ ನ್ಯೂಟನ್-ನಿಲುಗಡೆ ತಲಪಿದಾಗ ಆತನಿಗೆ ವಿಜ್ಞಾನದ ಸ್ಥೂಲ ವ್ಯಾಖ್ಯೆ ದೊರೆತಿರುವುದು, ವೈಜ್ಞಾನಿಕ ವಿಧಾನಕ್ಕೆ ನಿರ್ದಿಷ್ಟ ರೂಪ ಒದಗಿರುವುದು ಮತ್ತು ನಿಸರ್ಗದ ಸೂಕ್ಷ್ಮಾತಿಸೂಕ್ಷ್ಮ ನಿಗೂಢಗಳಿಗೆ ಇಣುಕುನೋಟ ಲಭಿಸಿರುವುದು. ಅಲ್ಲಿಂದ ಮುಂದಿನ ಪ್ರಮುಖ ತಾಣ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫).

೨೦ನೆಯ ಶತಮಾನದ ಅನುಕೂಲ ಮಂಚಿಕೆಯಿಂದ ಸಂದ ಯುಗಗಳತ್ತ ವಿಹಂಗಮ ದೃಷ್ಟಿಹಾಯಿಸಿದಾಗ ಅರಿವಿಗೆ ಬರುವ ಸೂತ್ರಗಳಿವು : ಮಾನವನ ಕುತೂಹಲಭರಿತಮತಿ ಯಾವುದೇ ನೈಸರ್ಗಿಕ ವಿದ್ಯಮಾನ ಕುರಿತು ಕಾರ್ಯ-ಕಾರಣ ತಳದಲ್ಲಿ ವೀಕ್ಷಣೆ, ಪ್ರಯೋಗ ಮತ್ತು ತರ್ಕಸಹಿತ ವಿವರಣೆ ಅರಸುವಾಗ ಮೂಡುವ ಅರಿವೇ ವಿಜ್ಞಾನ. ಇದರ ಆಧಾರ ಭಾವನೆಗಳು ಮೂರು :

೧. ವಿಶ್ವದಲ್ಲಿ ಕ್ರಮ (order) ಇದೆ. ೨. ಈ ಕ್ರಮವನ್ನು ಗುರುತಿಸಿ ಅರಿತು ಅರ್ಥವಿಸಿ ವಿವರಿಸುವ ಸಾಮರ್ಥ್ಯ ಮಾನವಮತಿಗಿದೆ. ೩. "ಭಗವಂತ ನವುರು, ಆದರೆ ಎಂದೂ ಕುಹಕಿಯಲ್ಲ." (God is subtle, but never malicious.)

ಈ ಕೊನೆಯದು ಐನ್‌ಸ್ಟೈನ್ ಅವರ ಸುಪ್ರಸಿದ್ಧ ಸೂಕ್ತಿ. ಇದರಲ್ಲಿ 'ಭಗವಂತ' ನಿಸರ್ಗವನ್ನೂ 'ಕುಹಕ' ರಾಗ-ಭಾವಪೂರಿತ ವೈಯಕ್ತಿಕ ಮನವನ್ನೂ ಪ್ರತೀಕಿಸುತ್ತವೆ. ಅಂದರೆ ನಿಸರ್ಗಕ್ಕೆ ಮನವಿಲ್ಲ ಮರುಕವೂ ಇಲ್ಲ. ತನ್ನ ರಹಸ್ಯಗಳನ್ನು ಮಾನವನಿಗೆ ಅರುಹಬೇಕೆಂಬ ಇಚ್ಛೆ ಅದಕ್ಕಿಲ್ಲ, ತಿಳಿಯಗೊಡಬಾರದೆಂಬ ಹಠವೂ ಇಲ್ಲ. ಅವನವನು ಅವನವನ ತಾಕತ್ತಿಗೆ ಅನುಗುಣವಾಗಿ ನಿಸರ್ಗದ ಜೊತೆ ಇದರ ವಿಧಿ ನಿಷೇಧಾನುಸಾರ ಅನುಸಂಧಾನ ಮಾಡಿದರೆ ತುಸುವಾದರೂ ಅರಿವು ಅವನಲ್ಲಿ ಮೂಡೀತು. ಈ ಅರಿವೇ ವಿಜ್ಞಾನ: ಮಾನವಮತಿ ನಿಸರ್ಗದ ಜೊತೆ ಕಾರ್ಯ-ಕಾರಣ ತಳದಲ್ಲಿ ಜ್ಞೇಯನಿಷ್ಠವಾಗಿ ವ್ಯವಹರಿಸುವಾಗ ಮನದೊಳಗೆ ಮಿನುಗುವ ಬೆಳಕು.

## ವೈಜ್ಞಾನಿಕ ವಿಧಾನ

ವಿಶ್ವದಲ್ಲಿ ಎದುರಾಗುವ ಸಮಸ್ಯೆಗಳನ್ನು ವಿಜ್ಞಾನದ ಮೂರು ಆಧಾರಭಾವನೆಗಳ ಅನುಸಾರ ಪರಿಹರಿಸಲು ಯತ್ನಿಸುವ ಕ್ರಮಕ್ಕೆ ವೈಜ್ಞಾನಿಕ ವಿಧಾನ (scientific method) ಎಂದು ಹೆಸರು. ಇದರ ಸೋಪಾನಗಳಿವು: ಸಮಸ್ಯಾನಿರೂಪಣೆ; ಮಾಹಿತಿ ಸಂಗ್ರಹಣೆ

ಮತ್ತು ವಿಶ್ಲೇಷಣೆ; ವಾದರೂಪಣೆ; ಪ್ರಾಯೋಗಿಕ ಪರೀಕ್ಷಣೆ; ಸಿದ್ಧಾಂತಮಂಡನೆ.

ಈ ವಿಶ್ಲೇಷಣೆಯಲ್ಲಿ ಅಂತರ್ಗತವಾಗಿರುವ ಒಂದು ಸೂಕ್ಷ್ಮ ವಿಚಾರ ಕಾರ್ಯ-ಕಾರಣ ಸಂಬಂಧ. ಇದರ ಅರ್ಥ : ಕಾರ್ಯ ಗೋಚರವಾಗಿರುವಾಗ ಹಿನ್ನೆಲೆ ಕಾರಣವನ್ನೂ ಕಾರಣ ಗೊತ್ತಿರುವಾಗ ಫಲಿತ ಕಾರ್ಯವನ್ನೂ ಶೋಧಿಸುವುದು ವೈಜ್ಞಾನಿಕ ವಿಧಾನದಿಂದ ಸಾಧ್ಯ ವಾಗುತ್ತದೆ. ಇಂಥ ಅನ್ವೇಷಣೆಯಲ್ಲಿ ಜ್ಞೇಯನಿಷ್ಠತೆ ಮಾತ್ರ ಸಿಂಧು, ಜ್ಞಾತೃನಿಷ್ಠತೆ ಎಂದೂ ಅಲ್ಲ.

ಹೀಗೆ ವಿಶ್ವ ಕುರಿತ ಸಿದ್ಧಾಂತ ವ್ಯಕ್ತಿಕೇಂದ್ರವಾದದಲ್ಲಿ ಆರಂಭವಾಗಿ, ಭೂಕೇಂದ್ರ ವಾದದ (ಕ್ರಿಸ್ತ ಪೂರ್ವ ದಿನಗಳು) ಮೂಲಕ ಸಾಗಿ, ಸೂರ್ಯಕೇಂದ್ರವಾದದಲ್ಲಿ (ಕ್ರಿಸ್ತ ಶಕ ೧೬ನೆಯ ಶತಮಾನ) ನಿಂತು ಈಗ ಕೇಂದ್ರರಹಿತ ವಿಶ್ವದಲ್ಲಿ (೨೦-೨೧ನೆಯ ಶತಮಾನ) ತಂಗಿರುವುದನ್ನು ಗಮನಿಸಬೇಕು. ಜ್ಞಾನದ ಈ ಎಲ್ಲ ಅನಾವರಣಗಳ ಆಧಾರ ಶ್ರುತಿ ವೈಜ್ಞಾನಿಕ ವಿಧಾನ. (ನೋಡಿ: ಇದೇ ಲೇಖಕನ *ವೈಜ್ಞಾನಿಕ ಮನೋಧರ್ಮ, Scientific Temper*)

ವಿಜ್ಞಾನದಲ್ಲಿಯ ಯಾವುದೇ ಸಿದ್ಧಾಂತ ಶಾಶ್ವತ ಅಲ್ಲ, ಇದಮಿತ್ಥಂ ಎಂಬ ನಿರ್ಣಾಯಕವೂ ಅಲ್ಲ:

ಸಂದೇಹವೀಕ್ಷಿತಿಯೊಳಿನ್ನಿಲ್ಲವೆಂದಲ್ಲ
ಇಂದು ನಂಬಿದುದೆ ಮುಂದೆಂದುಮೆಂದಲ್ಲ
ಕುಂದು ತೋರ್ದಂದದನು ತಿದ್ದಿಕೊಳೆ ಮನವುಂಟು
ಇಂದಿಗೀ ಮತವುಚಿತ ಮಂಕುತಿಮ್ಮ

## ವೈಜ್ಞಾನಿಕ ಮನೋಧರ್ಮ

ವೈಜ್ಞಾನಿಕ ವಿಧಾನದಲ್ಲಿ ಮಾನವ ವಿಶ್ವತಥ್ಯವನ್ನು ಅನ್ವೇಷಿಸಲು ಮುನ್ನಡೆಯುತ್ತಿರು ವಾಗ ಆತನ ಮನಸ್ಸು ಇರುವ ಸ್ಥಿತಿಗೆ ವೈಜ್ಞಾನಿಕ ಮನೋಧರ್ಮ ಅಥವಾ ವೈಜ್ಞಾನಿಕತೆ (scientific temper or scientism) ಎಂದು ಹೆಸರು. ಈ ಲೇಖನದ ಆರಂಭದಲ್ಲಿ ಉಲ್ಲೇಖಿಸಿರುವ ಶ್ರೀನಿವಾಸಾಚಾರ್‌ಅವರ ಅರ್ಥಗರ್ಭಿತ ನುಡಿಗಳಿಗೆ ವ್ಯಾಖ್ಯಾನ ಇನ್ನು ಅನಗತ್ಯವಲ್ಲವೇ? ಆದ್ದರಿಂದ

ಮೂಢನಂಬಿಕೆ ಮೂಲವನ್ನರಸಿ ಹೋದಾಗ
ಗಾಢಚಿಂತನೆ ಮೊಳೆತು ಕಾರ್ಯಕಾರಣ ಬಂಧ
ಕೂಡುವುದು, ವಿಜ್ಞಾನದಾರಂಭವಿದು ನೋಡಿ
ಮಾಡಿಕಲಿಯುವ ತಂತ್ರ, ಸಂಯಂತ್ರ ಅತ್ರಿಸೂನು

(೨೦೦೪)

## ಅತ್ರಿ ಬುಕ್ ಸೆಂಟರ್ ಲಭ್ಯ ಶೀರ್ಷಿಕೆಗಳು ಡಿಸೆಂಬರ್ ೨೦೦೪

| | | ರೂ |
|---|---|---|
| ೧. ಅಕ್ಷಮಾಲಾ (ಮಕ್ಕಳ ಕಥೆಗಳು) ಜಿ. ಎ. ರುಕ್ಮಿಣಿಮಾಲಾ | ... | ೨೦ |
| ೨. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ (ಭಾಷಾವಿಜ್ಞಾನ) ಡಿ. ಎನ್. ಶಂಕರಭಟ್ಟ | ... | ೧೨೦ |
| ೩. ಕನ್ನಡದ ಸರ್ವನಾಮಗಳು (ಭಾಷಾವಿಜ್ಞಾನ) ಡಿ. ಎನ್. ಶಂಕರಭಟ್ಟ | | ೪೬ |
| ೪. ಕನ್ನಡಪದಗಳ ಒಳರಚನೆ (ಭಾಷಾವಿಜ್ಞಾನ) ಡಿ. ಎನ್. ಶಂಕರಭಟ್ಟ | | ೧೨೦ |
| ೫. ಕನ್ನಡವಾಕ್ಯಗಳ ಒಳರಚನೆ (ಭಾಷಾವಿಜ್ಞಾನ) ಡಿ. ಎನ್. ಶಂಕರಭಟ್ಟ | | ೬೦ |
| ೬. ಕಾಡುಪ್ರಾಣಿಗಳ ಜಾಡಿನಲ್ಲಿ (ವನ್ಯಪ್ರಾಣಿಗಳ ವರ್ತನೆ ಬಗೆಗಿನ ಲೇಖನ ಸಮುಚ್ಚಯ) ಕೆ. ಉಲ್ಲಾಸ ಕಾರಂತ | ... | ೪೫ |
| ೭. ದೀವಟಿಗೆ (ಯಕ್ಷಗಾನ ರಂಗಪುನಾರಚನ ಸಾಹಸದ ಕಥನ) ಕೆ. ಎಂ. ರಾಘವ ನಂಬಿಯಾರ್ | ... | ೬೦ |
| ೮. ದುಃಖಾರ್ತರು (ವಿಕ್ಟರ್ ಹ್ಯೂಗೋರಚಿತ *Les Miserables* ಕಾದಂಬರಿಯ ಸಂಗ್ರಹಾನುವಾದ) ಎ. ಪಿ. ಸುಬ್ಬಯ್ಯ | ... | ೭೦ |
| ೯. ನನ್ನ ಬೆಲ್ಜಿಯಮ್ ಪ್ರವಾಸ (ಪ್ರವಾಸಾನುಭವ) ಭಾರತೀಭಟ್ | ... | ೫೦ |
| ೧೦. ನಮ್ಮ ಜಪಾನ್ ಪ್ರವಾಸ (ಪ್ರವಾಸ ಕಥನ) ಗಂಗಾ ಬಿ. ರಾಜಪುರೋಹಿತ | | ೬೦ |
| ೧೧. ನೃತ್ಯಲೋಕ (ಭರತನಾಟ್ಯ ಕುರಿತ ಆಕರ ಗ್ರಂಥ) ಕೆ. ಮುರಲೀಧರ ರಾವ್ | | ೩೦೦ |
| ೧೨. ಪುಸ್ತಕ ಮಾರಾಟ ಹೋರಾಟ (ಪುಸ್ತಕೋದ್ಯಮದ ಅನುಭವ ಚಿತ್ರಣ) ಜಿ. ಎನ್. ಅಶೋಕವರ್ಧನ | ... | ೨೫ |
| ೧೩. ಬಿಚ್ಚಿದ ಜೋಳಿಗೆ (ವೈದ್ಯನ ಆತ್ಮ ನಿವೇದನ) ಸ. ಜ. ನಾಗಲೋಟಿಮಠ | | ೭೫ |
| ೧೪. ಭಾಷೆಯ ಬಗೆಗೆ ನೀವೇನು ಬಲ್ಲಿರಿ (ಭಾಷಾವಿಜ್ಞಾನ) ಡಿ. ಎನ್. ಶಂಕರಭಟ್ಟ | | ೧೦೦ |
| ೧೫. ಮಾರಿಷಾ ಕಲ್ಯಾಣ (ಯಕ್ಷಗಾನ ಪ್ರಸಂಗ, ಮತ್ತು ವೇದಿಕೆಯಲ್ಲಿ ಸೃಷ್ಟಿಗೊಂಡ ಅರ್ಥ) ಅಮೃತ ಸೋಮೇಶ್ವರ | ... | ೧೮ |
| ೧೬. ಸಂಜೆ ಬಿಸಿಲು (ಕಥಾ ಸಂಕಲನ) ಎ. ಪಿ.ಮಾಲತಿ | ... | |

## ಜಿ. ಟಿ. ನಾರಾಯಣರಾಯರ ಕೃತಿಗಳು

| | | |
|---|---|---|
| ೧. ಆಲ್ಬರ್ಟ್ ಐನ್‌ಸ್ಟೈನ್ : ಮಾನವೀಯ ಮುಖ (ಅನುವಾದ) | ... | ೨೭ |
| ೨. ಉಲ್ಲೇಖನೀಯ ಐನ್‌ಸ್ಟೈನ್ (ಅನುವಾದ) | ... | ೩೦ |
| ೩. ಋಷಿವಾಕ್ಯ ವಿಜ್ಞಾನಕಲೆ (ತತ್ತ್ವಶಾಸ್ತ್ರವಿಜ್ಞಾನ ಜಿಜ್ಞಾಸೆ) | ... | ೧೫ |
| ೪. ಎನ್‌ಸಿಸಿ ದಿನಗಳು (ಅನುಭವಕಥನ) | ... | ೫೫ |
| ೫. ಐನ್‌ಸ್ಟೈನ್ ಬಾಳಿದರಿಲ್ಲಿ (ವೈಜ್ಞಾನಿಕ ಜೀವನಚರಿತ್ರೆ) | ... | ೫೫ |
| ೬. ಕುವೆಂಪು ದರ್ಶನ ಸಂದರ್ಶನ | ... | ೪೫ |
| ೭. ಕೃಷ್ಣವಿವರಗಳು (*Black Holes*) | ... | ೩೦ |

ಮೂರು ಉತ್ತರೋತ್ತರ ಹಂತಗಳಲ್ಲಿ ಕುವೆಂಪು ನನ್ನ ಮೇಲೆ ಗಾಢ ಪ್ರಭಾವ ಬೀರಿದ್ದಾರೆ : ತಮ್ಮ ವಿಸ್ತಾರ ಸೃಜನಶೀಲರಚನೆಗಳ ಮೂಲಕ ಕನ್ನಡ ಸಾಹಿತ್ಯ ಪ್ರೇಮ, ಕನ್ನಡದಲ್ಲಿ ಚಿಂತನೆಗಳನ್ನು ಅಭಿವ್ಯಕ್ತಿಸಲು ಭದ್ರ ಮಾನಸಿಕ ವೇದಿಕೆನಿರ್ಮಾಣ, ಮತ್ತು ವೈಜ್ಞಾನಿಕ ಮನೋಧರ್ಮ ಅರಿತು ಅನುಷ್ಠಾನಿಸುವುದು ಪ್ರತಿಯೊಬ್ಬ ಪ್ರಜ್ಞಾವಂತ ರಾಷ್ಟ್ರಕನ ಪ್ರೀತಿಯ ಕರ್ತವ್ಯ ಆಗಬೇಕೆಂಬ ಅರಿವು —ಅರ್ಥಾತ್ ಆ ಮಹಾಚೇತನದಿಂದ ನಾನು ನಡೆ ನುಡಿ ಬಗೆಗಳಲ್ಲಿ ಸಮೃದ್ಧವಾಗಿ ಲಾಭಗಳಿಸಿದ್ದೇನೆ. ವಿವರಣೆ ಬೇಕೇ? **ಕುವೆಂಪು ದರ್ಶನ ಸಂದರ್ಶನ**ವನ್ನು ಚಿಕಿತ್ಸಕವಾಗಿ ಓದಿರೆಂದು ವಿನಂತಿ.

ಇನ್ನು ಸ್ವವಿವರ : ನಾನು ಮಡಿಕೇರಿಯ ಶಿಶು (೧೯೨೬) "ನಡೆದು ನೋಡ್ಯೆ ನೀಂ ಕೊಡಗಿನ ಬೆಡಗಂ" ಎಂಬ ಡಿವಿಜಿ-ವಾಣಿಯೂ "ಒಡೆದು ನೋಡ್ಯೆ ನೀಂ ಕೊಡಗಿನ ಕಡುಬಂ" ಎಂಬ ಕಾರಂತ-ಅಣಕು ನುಡಿಯೂ ನನ್ನ ವ್ಯಕ್ತಿತ್ವವನ್ನು ರೂಪಿಸಿವೆ. ಶಾಲಾದಿನಗಳಲ್ಲೇ ಕುವೆಂಪು ಎಂಬ "ತುಂಗಾತೀರದ ಕಿಂದರಿ ಜೋಗಿಯ ಕನ್ನಡ ನಾದಕೆ ಮರುಳಾದೆ! ಕನ್ನಡದಲಿ ಕತೆ ಕವಿತ್ವ ಬರೆಯುವ ನವೀನ ಗೀಳಿಗೆ ಶರಣಾದೆ !" ಮದ್ರಾಸು ವಿಶ್ವವಿದ್ಯಾಲಯದಿಂದ ಗಣಿತ ಮತ್ತು ಖಗೋಳವಿಜ್ಞಾನಗಳಲ್ಲಿ ಎಂ. ಎ. ಪದವೀಧರನಾದೆ (೧೯೪೭). ಮುಂದೆ ೧೯೬೯ರ ತನಕ ವಿವಿಧ ಕಾಲೇಜುಗಳಲ್ಲಿ ಅವೇ ವಿಷಯಗಳಲ್ಲಿ ಉಪನ್ಯಾಸಕವೃತ್ತಿ. ಬೋಧನಮಾಧ್ಯಮ ಇಂಗ್ಲಿಷ್ ಆಗಿದ್ದರೂ ಎಲ್ಲ ಪರಿಕಲ್ಪನೆಗಳನ್ನೂ ಕನ್ನಡದಲ್ಲಿ ಮೊದಲು ವಿವರಿಸುತ್ತಿದ್ದೆ (ಪುಟ ೧೩೩ ನೋಡಿ). ಕ್ರಮೇಣ ಆಧುನಿಕ ವಿಜ್ಞಾನಸಾಧನೆ ಮತ್ತು ವಿಚಾರಗಳನ್ನು ಕನ್ನಡದಲ್ಲಿ ಬರೆದು ಪ್ರಕಟಿಸುವುದು ಪ್ರಿಯ ಹವ್ಯಾಸವಾಯಿತು. ನನ್ನ ಊಹೆಗೂ ನಿಲುಕದ ಒಂದು ಕಲ್ಪವೃಕ್ಷಫಲ ೧೯೬೯ರಲ್ಲಿ ನನ್ನನ್ನು ಅರಸಿ ಬಂದು ವರಿಸಿತು: ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಶ್ವಕೋಶ ಯೋಜನೆಯಲ್ಲಿ ವಿಜ್ಞಾನ ಸಂಪಾದಕತ್ವ. ವಯಸ್ಸು ಅರುವತ್ತರಲ್ಲಿ ವೃತ್ತಿನಿವೃತ್ತನಾದಾಗ ಪೂರ್ಣಕಾಲ ಕನ್ನಡ ವಿಜ್ಞಾನ ಪುಸ್ತಕ ಮತ್ತು ಲೇಖನಕ್ರಿಯಾಮಗ್ನನಾದೆ. ಕುವೆಂಪು ಜನ್ಮಶತಮಾನೋತ್ಸವ ವರ್ಷದಲ್ಲಿ (೨೦೦೪) ಮತ್ತೆ ಆ ಹಿಂದಿನ ಹೊಣೆ (ವಿಶ್ವಕೋಶದ ಗೌರವ ವಿಜ್ಞಾನ ಸಂಪಾದಕತ್ವ) ವಹಿಸಿಕೊಳ್ಳಬೇಕೆಂಬ ಆಹ್ವಾನ ವಿಶ್ವವಿದ್ಯಾನಿಲಯದಿಂದ ಬಂದಿರುವುದರಲ್ಲಿ ಕುವೆಂಪುಚೇತನದ ಆಶೀರ್ವಾದ ಕಾಣುತ್ತಿದ್ದೇನೆ (ಪುಟ ೧೩೧ ನೋಡಿ).

**ಜಿ. ಟಿ. ನಾರಾಯಣರಾವ್**